# ಸ್ವಾತಂತ್ರ್ಯಪೂರ್ವ ಹೈದರಾಬಾದ್ ಕರ್ನಾಟಕದ ಸಾಹಿತ್ಯ ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

ತುಕಾರಾಮ

ಮಾರ್ಗದರ್ಶಕರು

ಡಾ. ಎಸ್. ಅಮರೇಶ

ಸಹ ಪ್ರಾಧ್ಯಾಪಕರು

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ



ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೦

# ಸ್ವಾತಂತ್ರ್ಯಪೂರ್ವ ಹೈದರಾಬಾದ್ ಕರ್ನಾಟಕದ ಸಾಹಿತ್ಯ ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

ತುಕಾರಾಮ

ಮಾರ್ಗದರ್ಶಕರು

ಡಾ. ಎನ್. ಅಮರೇಶ

ಸಹ ಪ್ರಾಧ್ಯಾಪಕರು

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ






ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೦

# ಪ್ರಮಾಣ ಪತ್ರ

**"ಸ್ವಾತಂತ್ರ್ಯಪೂರ್ವ ಹೈದರಾಬಾದ ಕರ್ನಾಟಕದ ಅಧ್ಯಯನ"** ಎಂಬ ಮಹಾಪ್ರಬಂಧವನ್ನು ಡಾ. ಎನ್. ಅಮರೇಶ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಅಥವಾ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Ravaiji

(ತುಕಾರಾಮ)

**ಸಂಶೋಧಕರು**

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ.

ದಿನಾಂಕ: 16.11.2010

ಸ್ಥಳ: ವಿದ್ಯಾರಣ್ಯ.

# ದೃಢೀಕರಣ ಪತ್ರ

**ಶ್ರೀ. ತುಕಾರಾಮ** ಅವರು **"ಸ್ವಾತಂತ್ರ್ಯಪೂರ್ವ ಹೈದರಾಬಾದ ಕರ್ನಾಟಕದ ಅಧ್ಯಯನ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

(ಡಾ. ಎಸ್. ಅಮರೇಶ)
**ಮಾರ್ಗದರ್ಶಕರು**
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

ದಿನಾಂಕ: ೧೭ - ೧೧ . ೨೦೧೦
ಸ್ಥಳ: ವಿದ್ಯಾರಣ್ಯ.

## ಪರಿವಿಡಿ

# ಅಧ್ಯಾಯ ೧

## ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ, ಮತ್ತು ವಿಧಾನ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ಮಹತ್ವ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನ ವಿಧಾನ

# ಅಧ್ಯಾಯ ೧

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನ

**ಪೀಠಿಕೆ**

ಇದು ಒಂದು ನಿರ್ದಿಷ್ಟ ಪ್ರದೇಶ ಅಥವಾ ಪ್ರಾಂತ್ಯದ ಅಧ್ಯಯನವಾಗಿದೆ. ನಿರ್ದಿಷ್ಟ ವ್ಯಾಪ್ತಿಯನ್ನು ಒಳಗೊಂಡು, ಅದಕ್ಕೆ ಒಂದು ಹೆಸರಿನಿಂದ ಗುರುತಿಸುವುದು ನಾಡಿನಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಹೀಗೆ ಗುರುತಿಸುವುದನ್ನು ಅಲ್ಲಿನ ಆಡಳಿತ ಅಥವಾ ಪ್ರಭುತ್ವ ಮಾಡುತ್ತದೆ. ಅಲ್ಲಿ ವಾಸಿಸುವ ಜನಸಮುದಾಯಗಳೂ ಮಾಡುತ್ತವೆ. ಪ್ರಭುತ್ವ ಮತ್ತು ಜನಸಮುದಾಯಗಳು ಒಟ್ಟುಗೂಡಿಯೇ ಈ ಗುರುತಿಸುವಿಕೆಯನ್ನು ಮಾಡಿರುತ್ತವೆ. ಒಂದು ನಿರ್ದಿಷ್ಟ ವ್ಯಾಪ್ತಿಯ ಪ್ರದೇಶ ಅಥವಾ ಪ್ರಾಂತ್ಯವು ಹಲವಾರು ಕಾರಣಗಳಿಗಾಗಿ ವಿಶಿಷ್ಟತೆಯನ್ನು ಪಡೆದಿರುತ್ತದೆ. ಆ ಪ್ರದೇಶ ಹೊಂದಿರುವ ಭೂ ಪ್ರದೇಶ, ಗುಡ್ಡಬೆಟ್ಟ, ನದಿ, ಅರಣ್ಯ, ಮಳೆ, ಋತುಮಾನಗಳ ವಿಶೇಷತೆ, ವ್ಯವಸಾಯ, ಅದರ ಉತ್ಪನ್ನಗಳು, ಜನಸಮುದಾಯಗಳ ಸಂಸ್ಕೃತಿ, ಈ ಸಂಸ್ಕೃತಿ ರೂಪುಗೊಂಡಿರುವುದು ಯಾವಾಗಲೂ ಜನರ ನುಡಿ, ಬದುಕು, ಆಧ್ಯಾತ್ಮ, ಆಚರಣೆ, ಕೌಶಲ್ಯ, ಕ್ರೀಡೆ, ಸಾಹಿತ್ಯ, ಕಲೆ, ಮನೋಭಾವನೆಗಳನ್ನು ಆಧರಿಸಿಯೇ.

ಈ ಹಿನ್ನೆಲೆಯಲ್ಲಿ 'ಹೈದರಾಬಾದ್ ಕರ್ನಾಟಕ' ಎನ್ನುವುದು ಒಂದು ಪ್ರಾಂತ್ಯವನ್ನು ಸೂಚಿಸುತ್ತದೆ. ಈ ಪ್ರಾಂತ್ಯಕ್ಕೆ 'ನಿಜಾಮ್ ಕರ್ನಾಟಕ', 'ಮೊಗಲಾಯಿ' ಎಂತಲೇ ಹಿಂದಿನವರು ಕರೆಯುತ್ತಿದ್ದರು. ಸಾಮಾನ್ಯವಾಗಿ ಈ ಹೆಸರು ಬಂದಿರುವುದು, ನಿಜಾಮರು ಕರ್ನಾಟಕದ ಬೀದರ್, ಗುಲಬರ್ಗಾ, ರಾಯಚೂರು ಜಿಲ್ಲಾ ಪ್ರದೇಶಗಳನ್ನು ತಮ್ಮ ಹೈದರಾಬಾದ್ ಸಂಸ್ಥಾನಕ್ಕೆ ಸೇರಿಸಿಕೊಂಡು ಆಳ್ವಿಕೆ ನಡೆಸಿರುವುದರಿಂದ. ಬಹಮನಿ ರಾಜ್ಯ ಸ್ಥಾಪನೆಗೊಂಡಂದಿನಿಂದ (೧೪ನೇ ಶತಮಾನ) ಉತ್ತರ ಭಾರತದ ಇಸ್ಲಾಮ್ ಧರ್ಮಿಯರ ಪ್ರಭುತ್ವ ಇಲ್ಲಿ ನೆಲೆಗೊಂಡಿತು.

ಸ್ಥಳೀಯ ಸಂಸ್ಕೃತಿಯ ಮೇಲೆ ಇಸ್ಲಾಮಿನ ಎಲ್ಲ ಬಗೆಯ ಚಟುವಟಿಕೆಗಳು ಪ್ರಭಾವ ಬೀರುತ್ತ ಬದುಕು ಸಂಕರವಾಯಿತು. ರಾಜಕೀಯ ಸ್ಥಿತ್ಯಂತರಗಳು ನಡೆದವು. ಇಲ್ಲಿ ಬಹಮನಿ, ಆದಿಲ್ ಶಾಹಿ, ಮೊಗಲ್, ಪೇಶ್ವೆ, ಮರಾಠ ಮತ್ತು ಕೊನೆಯಲ್ಲಿ ೧೭೨೪ರಿಂದ ನಿಜಾಮರ ಸಂಸ್ಥಾನ ರೂಪುಗೊಂಡಿದ್ದವು, ನಿಜಾಮನ ಆಡಳಿತದಲ್ಲಿ ಈ ಪ್ರಾಂತ್ಯ ಅನೇಕ ಬಿಕ್ಕಟ್ಟುಗಳನ್ನು ಎದುರಿಸ ಬೇಕಾಯಿತು. ಈ ಹೊತ್ತಿಗಾಗಲೇ ಬ್ರಿಟೀಶರ ಹಿಡಿತಕ್ಕೆ ದೇಶ ಬಂದಿತ್ತು. ಆಧುನಿಕತೆಗೆ ದೇಶ ಪುಳಕಗೊಳ್ಳುತ್ತಲೂ, ಹೊಸ ಹೊಸ ಸಮಸ್ಯೆಗಳನ್ನು ಎದುರಿಸುವ ಸವಾಲನ್ನು ಪಡೆಯುತ್ತಿತ್ತು. ಈ ನಿಜಾಮ ಸಂಸ್ಥಾನವು ಬ್ರಿಟೀಶ್ ಅಧೀನ ಬೆಂಬಲದಿಂದ ಈ ಪ್ರಾಂತ್ಯವನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡಿತು.

ಬ್ರಿಟೀಶ್-ನಿಜಾಮ್ ಆಳ್ವಿಕೆಯ ಮೊದಲು ಈ ಪ್ರಾಂತ್ಯದಲ್ಲಿ ಪ್ರಾಚೀನ ಕಾಲದಿಂದಲೂ ಬೇರೆ ಬೇರೆ ಧರ್ಮಗಳ ಪ್ರಭಾವ ಆಗಿರುವುದು ಕಾಣುತ್ತದೆ. ಮೊದಲಿಗೆ ಬೌದ್ಧಧರ್ಮದ ಪ್ರಭಾವ ಆದಂತೆ ಕಾಣುವ ಕುರುಹುಗಳಿವೆ. ನಂತರ ಜೈನಧರ್ಮದ ಪ್ರಭಾವ ಹೆಚ್ಚಾಯಿತು. 'ಕವಿರಾಜಮಾರ್ಗ' ಕೃತಿಯು ಪೂರ್ವೋತ್ತರ ಕಾಲದಲ್ಲಿ ಕನ್ನಡ ನಾಡು, ನುಡಿ, ನಾಡವರು ರೂಪಗೊಂಡು, ಧರ್ಮ, ಸಾಹಿತ್ಯ, ಪ್ರಭುತ್ವಗಳನ್ನು ದಕ್ಕಿಸಿಕೊಂಡು ನಿಂತಿತು. ಕನ್ನಡದಲ್ಲಿ ಜೈನರು ಸಾಹಿತ್ಯ ರಚಿಸಿದ್ದು ಈ ಪ್ರಾಂತ್ಯದಲ್ಲಿಯೇ. ೧೨ನೇ ಶತಮಾನದಲ್ಲಿ ಜನಸಾಮಾನ್ಯರು ಹೊಸ ಬದುಕಿಗಾಗಿ ಆಂದೋಲನ ಆರಂಭಿಸಿದ್ದು ಈ ಪ್ರಾಂತ್ಯದ ಬಸವಕಲ್ಯಾಣದಲ್ಲಿ. ನಾನಾ ಜಾತಿ, ನಾನಾ ಕಸುಬಿನ, ನಾನಾ ಧರ್ಮದ ಲಿಂಗಭೇದವಿಲ್ಲದೆ ಈ ಆಂದೋಲನದಲ್ಲಿ ಭಾಗಿಯಾಗಿ ಸಮಾಜದಲ್ಲಿ ಮಹತ್ವದ ಬದಲಾವಣೆಗಳನ್ನು ತಂದರು. ಕೇವಲ ಪಂಡಿತರಿಗೆ ಮೀಸಲಾಗಿದ್ದ ಸಾಹಿತ್ಯ ರಚನೆ ಮತ್ತು ಓದಿನ ಅನುಸಂಧಾನವನ್ನು 'ವಚನ ಚಳವಳಿ'ಯ ಪರಿಣಾಮವಾಗಿ ಸಾಮಾನ್ಯರ ಪಾಲಾಗುವಂತೆ ಮಾಡಲಾಯಿತು. ಅನುಭವದ ಜ್ಞಾನ ಪ್ರಧಾನವಾಗಿ ಬೆಳೆದು ರಾಶಿ ರಾಶಿ ವಚನಗಳು ಅಭಿವ್ಯಕ್ತಗೊಂಡವು. ಇದು ಮುಂದುವರಿಯಿತು. ದಾಸರು ಬಂದು ಮುಂದುವರಿಸಿದರು. ಧರ್ಮದ ತಾತ್ವಿಕತೆ ಬೇರೆಯಾಗಿತ್ತು. ಭಿನ್ನ ಭಿನ್ನ ಮನೋಭಾವನೆ ಯಲ್ಲಿಯೂ ವಚನ ಸಾಹಿತ್ಯ, ದಾಸಸಾಹಿತ್ಯ ಎರಡು ಧಾರೆಗಳು ತಮ್ಮ ಹಿಂದಿನ ಚಿಂತನೆಗಳಿಗಿಂತ ಭಿನ್ನವಾಗಿ ಹೊಸ ಚಿಂತನೆಗಳನ್ನು ನೆಲೆಗೊಳಿಸಿದರು. ಧರ್ಮಕ್ಕೆ, ಸಾಹಿತ್ಯಕ್ಕೆ, ಮನುಷ್ಯನಿಗೆ ಒಟ್ಟು ಬದುಕಿಗೆ ಹೊಸ ವ್ಯಾಖ್ಯಾನ ನೀಡಿದರು. ದಾಸಸಾಹಿತ್ಯದ ಎಲ್ಲ ಬಗೆಯ ಬೆಳವಣಿಗೆಗಳು ನಡೆದದ್ದು ಈ ಪ್ರಾಂತ್ಯದಲ್ಲಿಯೇ.

ಕರ್ನಾಟಕದಲ್ಲಿ ಈ ಹೊತ್ತಿಗಾಗಲೇ ಇಸ್ಲಾಮ್ ಪ್ರಭುತ್ವ ಬಂದಿದ್ದರಿಂದ ೧೪ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಇಡೀ ಈ ಪ್ರಾಂತ್ಯದಲ್ಲಿ ಇಸ್ಲಾಮಿನ ಪ್ರಭಾವವಾಯಿತು. ಪರಿಣಾಮವಾಗಿ ಇಲ್ಲಿನ ಸಾಮಾನ್ಯರ ಬದುಕು ಸಂಕರವಾಯಿತು. ಈ ಕಾಲಾವಧಿಯಲ್ಲಿ ಈ ಪ್ರಾಂತ್ಯದಲ್ಲಿ ಕನ್ನಡ ಭಾಷೆಯ ಬದಲು ಫಾರಶಿ, ದಖನಿ, ಉರ್ದು, ಭಾಷೆಗಳು ಬಳಕೆಗೆ ಬಂದವು. ಅವುಗಳಿಗೆ ಪ್ರಭುತ್ವದ ಬೆಂಬಲವೂ ಇತ್ತು. ಕನ್ನಡ ಭಾಷೆ ಮಠಮಾನ್ಯಗಳಲ್ಲಿ ಬಳಕೆಗೆ ಸೀಮಿತವಾಯಿತು.

ಈ ಕಾಲದಲ್ಲಿ ಲಿಖಿತ ಸಾಹಿತ್ಯ ರಚನೆ ಕಡಿಮೆಯಾಯಿತು. ಅನುಭಾವಿಗಳು, ಆರೂಢರು ಮುಂತಾದ ಪಂಥಗಳ ಅಧ್ಯಾತ್ಮ ಸಾಧಕರು ತತ್ವಪದಗಳ ಅಭಿವ್ಯಕ್ತಿಯಲ್ಲಿ ತೊಡಗಿದರು. ಈ ಪ್ರಾಂತ್ಯದಲ್ಲಿ ವಚನ, ಕೀರ್ತನೆ ಸಾಹಿತ್ಯದಷ್ಟೇ ಪ್ರಮಾಣದಲ್ಲಿ ತತ್ವಪದ ಸಾಹಿತ್ಯ ಅಭಿವ್ಯಕ್ತಗೊಂಡಿದೆ. ಇದನ್ನು ಒಂದು 'ಚಳವಳಿ'ಯೆಂದು ಗುರುತಿಸುವ ಅಧ್ಯಯನಗಳು ನಡೆಯಬೇಕಿದೆ. ವಚನ, ಕೀರ್ತನ ರಚನೆಗಳ ಹಿಂದಿನ ತಾತ್ವಿಕತೆಯಂತೆ ಈ ತತ್ವಪದಕ್ಕೂ ಇದೆ. ಸಾಮಾನ್ಯರ ಜೀವನದ ಮೇಲೆ ಬಹಳ ಪ್ರಭಾವ, ಪರಿಣಾಮ ಉಂಟುಮಾಡಿದೆ. ಈ ಹೊತ್ತಿಗೂ ಇದರ ಪ್ರಭಾವ ಪರಿಣಾಮವಿದೆ. ಭಜನೆಯ ಸ್ವರೂಪ, ವೇದಾಂತ ಆಧ್ಯಾತ್ಮಿಕ ಸಂಪಾದಗಳ ಸ್ವರೂಪದಲ್ಲಿ ತತ್ವಪದಗಳ ಮಹತ್ವವಿದೆ.

ಬ್ರಿಟೀಶ್-ನಿಜಾಮ ಕಾಲಾವಧಿಯಲ್ಲಿ ಈ ಪ್ರಾಂತ್ಯದಲ್ಲಿ ಆಧುನಿಕ ಶಿಕ್ಷಣ ಕಲಿಕೆ ಆರಂಭವಾಯಿತು. ದಕ್ಷಿಣ ಕರ್ನಾಟಕದಲ್ಲಿ, ಕರಾವಳಿ ಪ್ರಾಂತ್ಯದಲ್ಲಿ ಬ್ರಿಟೀಶರ ಆಡಳಿತವಿತ್ತು. ಆಧುನಿಕ ಶಿಕ್ಷಣದ ಪರಿಣಾಮವಾಗಿ ಅಲ್ಲಿ ಆಧುನಿಕತೆಯ ಪ್ರಭಾವ ಕಾಣಿಸಿಕೊಂಡಿತು. ಆ ಪ್ರದೇಶದ ಕನ್ನಡ ಮತ್ತು ಸ್ಥಳೀಯ ತುಳು ಮುಂತಾದವುಗಳಿಗೆ ದಕ್ಕೆ ಬರಲಿಲ್ಲ. ಮೈಸೂರು ಸಂಸ್ಥಾನದಲ್ಲಿ ಕನ್ನಡದ ಅರಸರೇ ಇರುತ್ತಿದ್ದರಿಂದ ಆಧುನಿಕತೆ, ಸ್ಥಳೀಯ ಕಲೆ, ಸಾಹಿತ್ಯ, ಸಂಗೀತ ಮುಂತಾದ ಸಾಂಸ್ಕೃತಿಕ ಬೆಳವಣಿಗೆಗೆ ಕುಂದಿರಲಿಲ್ಲ. ಆದರೆ ಬ್ರಿಟೀಶ್–ನಿಜಾಮರ ಅಧೀನದ ಈ ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ನಿಜಾಮರು ಆಧುನಿಕ ಶಿಕ್ಷಣಕ್ಕೆ ಒತ್ತುಕೊಟ್ಟರು. ಆದರೆ ಉರ್ದು ಭಾಷೆಗೆ ಮಹತ್ವ ನೀಡಿದರು. ಸಂಸ್ಥಾನದ ದೇಶಿಭಾಷೆ ಉರ್ದು ಎಂದು ದೃಢನಿರ್ಧಾರ ಮಾಡಿದ್ದರಿಂದ ಶೈಕ್ಷಣಿಕವಾಗಿ ಇಲ್ಲಿನ ಜನರು ಕನ್ನಡ ಭಾಷೆ ಬಳಕೆಯಿಂದ ವಂಚಿತವಾಯಿತು. ಇಂಗ್ಲೀಶ್ ಭಾಷೆಯನ್ನು ಕಲಿಯುವ ಅವಕಾಶಗಳೂ ಇಲ್ಲವಾದವು. ನಿಜಾಮರು ಉನ್ನತ ಶಿಕ್ಷಣವನ್ನೂ ಉರ್ದುವಿನಲ್ಲಿ ಕಲಿಯಲು ಉತ್ತೇಜಿಸಿ ಆ ಮಟ್ಟಕ್ಕೆ ಉರ್ದು ಭಾಷೆಯನ್ನು ಅಭಿವೃದ್ಧಿ ಪಡಿಸಿದ್ದರು. ಈ ಬೆಳವಣಿಗೆಯಿಂದ ಈ ಪ್ರಾಂತ್ಯದಲ್ಲಿ ಆಧುನಿಕ ಸಾಹಿತ್ಯ ರಚನೆಗೆ ಅಡ್ಡಿ ಆತಂಕಗಳೇ ಹೆಚ್ಚಾದವು. ಮಹತ್ವದ ಸಾಹಿತ್ಯ, ಸಾಹಿತಿಗಳು ಕಾಣಿಸಿಕೊಳ್ಳಲಿಲ್ಲ. ಈ ಪ್ರಾಂತ್ಯದಲ್ಲಿ ನಿಜಾಮರ ಆಡಳಿತವಿದ್ದರಿಂದ, ಇಲ್ಲಿ ಉರ್ದು ಭಾಷೆಗೆ ಪ್ರಾಧಾನ್ಯತೆ ಇದ್ದುದರಿಂದ, ಆಧುನಿಕತೆಯ ಬೆಳವಣಿಗೆಗಳು ಕಾಣಿಸಿಕೊಳ್ಳಲು ತಡವಾಯಿತು. ಸ್ವಾತಂತ್ರ್ಯಾ ನಂತರ ಈ ಪ್ರಾಂತ್ಯದಲ್ಲಿ ಅಭಿವೃದ್ಧಿ ಚಟುಚಟಿಕೆಗಳು ಜವಾಬ್ದಾರಿಯಿಂದ ನಡೆಯಲಿಲ್ಲ. ಇದರಿಂದ ಈ ಪ್ರಾಂತ್ಯದ ಹೆಸರಿನ ಜೊತೆಗೆ 'ಹಿಂದುಳಿದ ಪ್ರದೇಶ' ಎಂಬ ಶಾಶ್ವತ ಪಟ್ಟ ಅಂಟಿಕೊಂಡಿದೆ.

### ೧.೧ ಅಧ್ಯಯನದ ಉದ್ದೇಶ

ಜೈನ ಸಾಹಿತ್ಯ ಇದೇ ಪ್ರಾಂತ್ಯದಲ್ಲಿ ಹುಟ್ಟಿ ಬೆಳೆಯಲು ಕಾರಣಗಳೇನು? ಈ ಪ್ರಾಂತ್ಯದ ಬಸವಕಲ್ಯಾಣದಲ್ಲಿಯೇ ವಚನ ಸಾಹಿತ್ಯ ಚಳವಳಿ ಹುಟ್ಟಿ ಬೆಳೆಯಲು ಕಾರಣಗಳೇನು? ಈ ಪ್ರಾಂತ್ಯದ ರಾಯಚೂರು ಜಿಲ್ಲೆಯಾದ್ಯಂತ ದಾಸರು ಹುಟ್ಟಿಬರಲು ಕಾರಣಗಳೇನು? ದೊಡ್ಡಾಟಗಳು, ಸಣ್ಣಾಟಗಳು, ಬುಲಾಯಿ ಹಾಡು, ಕಾಲಜ್ಞಾನ, ಮೊಹರಂ ಮುಂತಾದ ಪ್ರಕಾರಗಳಲ್ಲಿ ಸಾಹಿತ್ಯ

ಅಭಿವ್ಯಕ್ತಗೊಂಡಿದೆ. ಒಂದು ಸಾಹಿತ್ಯ ಪ್ರಕಾರವು ಪ್ರಾಂತ್ಯವೊಂದರಲ್ಲಿ ಹುಟ್ಟಿ ಬೆಳೆಯಲು ಕಾರಣಗಳಿರಬಹುದು. ಚಾರಿತ್ರಿಕ ಸಂದರ್ಭಗಳು ಕಾರಣವಾಗಿರಬಹುದು, ಆ ಪ್ರಾಂತ್ಯದ ಸಂಸ್ಕೃತಿ ಕಾರಣವಾಗಿರಬಹುದು, ಪ್ರಭುತ್ವ ಕಾರಣವಾಗಿರಬಹುದು. ಒಟ್ಟಿನಲ್ಲಿ ಕಾರಣ, ಪರಿಣಾಮಗಳು ಇದ್ದೇ ಇರುತ್ತವೆ. ಅವುಗಳ ಬಗೆಗೆ ಅಧ್ಯಯನಗಳು ನಡೆದರೆ ಬೆಳಕಿಗೆ ಬರುತ್ತದೆ.

ಆಧುನಿಕ ಸಾಹಿತ್ಯದ ಬೆಳವಣಿಗೆಗೆ ಮೂಲ ಕಾರಣ ವಸಾಹತು ಆಡಳಿತ, ಇಂಗ್ಲೀಶ್ ವಿದ್ಯಾಭ್ಯಾಸ. ಆಧುನಿಕತೆಯ ಬೆಳವಣಿಗೆಯಿಂದ ಉಂಟಾದ ಹೊಸ ಬಿಕ್ಕಟ್ಟುಗಳನ್ನು ಅಧ್ಯಯನಕ್ಕೆ ಒಳಪಡಿಸಿದರೆ ಅನೇಕ ತಿಳುವಳಿಕೆಗಳು ಬೆಳಕಿಗೆ ಬರುತ್ತವೆ. ಗೋವಿಂದ ಪೈ, ಮಾಸ್ತಿ, ಕಾರಂತ, ಬೇಂದ್ರೆ, ಕುವೆಂಪು, ಪು.ತಿ.ನ ಮುಂತಾದ ಹತ್ತಾರು ಸಾಹಿತಿಗಳು ಆಧುನಿಕ ಸಾಹಿತ್ಯವನ್ನು ಬಲಪಡಿಸಿದರು. ಅವರ ಸಾಹಿತ್ಯದ ಸೃಷ್ಟಿಗೆ, ಬೆಳವಣಿಗೆಗೆ ಅವರವರು ಹುಟ್ಟಿ ಬೆಳೆದ ಪ್ರಾಂತ್ಯಗಳು, ಪರಿಸರಗಳು ಕಾರಣವಾದಂತೆ, ಮೇಲೆ ಹೇಳಿದ ಬ್ರಿಟೀಶ್ ವಸಾಹತು ಆಡಳಿತವೂ ಕಾರಣವಾಗಿದೆ. ಕುವೆಂಪು ಅಂದರೆ ಮಲೆನಾಡು, ಕಾರಂತ ಅಂದರೆ ಕರಾವಳಿ, ಪು.ತಿ.ನ ಅಂದರೆ ಮೇಲುಕೋಟಿ ಚಲುವನಾರಾಯಣ ಹೀಗೆ ನೆನಪಾಗುವುದು ಅನಿವಾರ್ಯವಾಗಬಹುದು. ಅವರ ಅನನ್ಯತೆಗೆ ಬ್ರಿಟೀಶ್ ಆಡಳಿತದ ಪರಿಣಾಮವೇ ಎಂದು ತಿಳಿಯಬಹುದಾಗಿದೆ.

ಹಾಗೆಯೇ ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಆಧುನಿಕ ಸಾಹಿತ್ಯ ಹುಟ್ಟಿ ಬೆಳೆಯಲು ಸಾಧ್ಯವಾಗಲಿಲ್ಲ ಯಾಕೆ? ಬೇಂದ್ರೆ, ಕಾರಂತ, ಮಾಸ್ತಿ, ಕುವೆಂಪು ಅವರಂಥ ಸಾಹಿತ್ಯ, ಸಾಂಸ್ಕೃತಿಕ ಮಹತ್ವ ಪಡೆದ ಧೀಮಂತರು ಈ ಪ್ರಾಂತ್ಯದಲ್ಲಿ ಯಾಕೆ ಕಾಣಿಸಿಕೊಳ್ಳಲಿಲ್ಲ? ಆಧುನಿಕ ಸಾಹಿತ್ಯ ಅಂದರೆ ಹೊಸ ಬಗೆಯ ಪ್ರಕಾರಗಳು ಹುಟ್ಟಿ ಬೆಳೆಯಲಿಲ್ಲ? ಇಲ್ಲಿ ಆಧುನಿಕತೆಯೇ ಯಾಕೆ ನೆಲೆಗೊಳ್ಳಲಿಲ್ಲ? ಎಂಬ ಪ್ರಶ್ನೆಗಳು ಏಳುತ್ತವೆ. ಆಗ ಈ ಪ್ರಾಂತ್ಯದ ಪ್ರಾದೇಶಿಕತೆಯನ್ನು, ಇಲ್ಲಿನ ಪ್ರಭುತ್ವಗಳನ್ನು, ಭಾಷೆಗಳನ್ನು, ಜನಸಮುದಾಯಗಳ ಸಾಂಸ್ಕೃತಿಕ ಸ್ಥಿತಿ-ಗತಿಯನ್ನು ಅಧ್ಯಯನ ಮಾಡಿದಾಗ ಕಾರಣ ಮತ್ತು ಪರಿಣಾಮಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಕರ್ನಾಟಕದ ದಕ್ಷಿಣ ಪ್ರಾಂತ್ಯ ಅಥವಾ ಭಾಗದವರಿಗೆ ಉತ್ತರ ಭಾಗದ ಅದೂ ಆಂಧ್ರ, ಮಹಾರಾಷ್ಟ್ರ ಗಡಿಗೆ ಹೊಂದಿಕೊಂಡಿರುವ ಈ ಪ್ರಾಂತ್ಯದಲ್ಲಿ ಸಾಹಿತ್ಯವಿಲ್ಲ, ಸಾಹಿತಿಗಳಿಲ್ಲ ಎಂದು ಮೇಲು ನೋಟಕ್ಕೆ ಅನ್ನಿಸಿದರೂ, ಅದಕ್ಕೆ ಕಾರಣಗಳೇನು ಎಂದು ಸಂಶೋಧನೆ ಮಾಡುವುದರಿಂದ ಅನೇಕ ವಿಷಯಗಳು ಬಯಲಿಗೆ ಬರಲು ಸಾಧ್ಯವಿದೆ. ಪ್ರಾಂತೀಯ ಅಧ್ಯಯನ ಅಂದರೆ, ಚರಿತ್ರೆಯಿಂದ ಕೂಡಿದ ಪ್ರಾದೇಶಿಕತೆಯನ್ನು ಅಧ್ಯಯನ ಮಾಡುವುದು ಎಂದರ್ಥ. ನಾಡು, ನುಡಿ, ನಾಡವರು ಅವರ ಸಾಹಿತ್ಯ, ಕಲೆ, ಸಂಸ್ಕೃತಿ ಈ ಅವಸ್ಥೆಯಲ್ಲಿ ಇರಲು ಕಾರಣಗಳೇನೆಂದು ಗ್ರಹಿಸುವ ಉದ್ದೇಶ ಈ ಅಧ್ಯಯನಕ್ಕಿದೆ.

### ೧.೨ ಅಧ್ಯಯನದ ಮಹತ್ವ

ಪ್ರಾಂತ್ಯಗಳ ಅಧ್ಯಯನ ಮಾಡುವಾಗ ಅದು ಈಗ ಹೀಗಿದೆ. ಹಿಂದೆ ಹೇಗಿತ್ತು? ಎಂದು ನೋಡುವ ಗ್ರಹಿಸುವ ಸಂದರ್ಭಗಳು ಹುಟ್ಟಿಕೊಳ್ಳುತ್ತವೆ. 'ಹೈದರಾಬಾದ ಕರ್ನಾಟಕ' ಎಂದರೆ,

ಕರ್ನಾಟಕದ ಭಾಗವಾಗಿರುವ ಈ ಪ್ರಾಂತ್ಯದ ಹೆಸರಿನಲ್ಲಿ ಹೈದರಾಬಾದ್ ಯಾಕೆ ಸೇರಿಕೊಂಡಿದೆ? ಎಂಬ ಪ್ರಶ್ನೆ ಹೊಸ ತಲೆಮಾರಿನವರಿಗೆ ಎದುರಾಗಬಹುದು. ಅದಕ್ಕೊಂದು ವಿವರಣೆ ಸಿಕ್ಕರೆ, ಒಂದು ತಿಳುವಳಿಕೆ ಅರಿವಿಗೆ ಬರಲು ಸಾಧ್ಯವಾಯಿತು. ಈ ಪ್ರಾಂತ್ಯದ ಚರಿತ್ರೆಗೆ ಹೋದರೆ ಪ್ರಭುತ್ವಗಳು ಇಲ್ಲಿ ನೆಲೆಗೊಂಡು ಆಳ್ವಿಕೆ ನಡೆಸಿದ್ದು ಗೊತ್ತಾಗುತ್ತದೆ. ಪ್ರಮುಖ ಸಾಮ್ರಾಜ್ಯಗಳು ಈ ಪ್ರಾಂತ್ಯದಲ್ಲಿ ನೆಲೆಗೊಂಡಿದ್ದವು. 'ಕವಿರಾಜಮಾರ್ಗ' ಕೃತಿ, ಜೈನ ಕವಿಗಳಲ್ಲಿ ಅನೇಕರು, ವಚನಕಾರರಲ್ಲಿ ಬಹುತೇಕರು, ದಾಸರಲ್ಲಿ ಬಹಳಷ್ಟು ದಾಸರು ಈ ಪ್ರಾಂತ್ಯದಲ್ಲಿ ಹುಟ್ಟಿ ಬೆಳೆದರು. ಅವರಿಂದ ಸಾಹಿತ್ಯ, ಸಂಸ್ಕೃತಿ ಹುಟ್ಟಿ ಬೆಳೆಯಿತು. ಅಂದಾಗ ನಂತರದ ಕಾಲದಲ್ಲಿ ಸ್ಥಿತ್ಯಂತರಗಳಿಗೆ ಕಾರಣಗಳೇನು? ಇಸ್ಲಾಮಿನವರು ಸ್ಥಳೀಯರ ಬೆಂಬಲದಿಂದ ೧೪ನೇ ಶತಮಾನದಿಂದ ೧೯೪೮ರ ವರೆಗೆ ಆಳ್ವಿಕೆ ನಡೆಸಿದ ಸಂದರ್ಭದಲ್ಲಿ ಸಾಂಸ್ಕೃತಿಕವಾಗಿ 'ಸಂಕರ ಬದುಕು' ನಿರ್ಮಾಣವಾಯಿತು. ಅದರ ಸಾಧಕ ಬಾಧಕಗಳೇನು? ಪರಿಣಾಮಗಳೇನು? ಎಂಬುದನ್ನು ಸಂಶೋಧನೆಯಿಂದ ಮಾತ್ರ ತಿಳುವಳಿಕೆ ಪಡೆಯಲು ಸಾಧ್ಯವಿದೆ.

ಈಗ ಸಾಂಸ್ಕೃತಿಕವಾಗಿ ಈ ಪ್ರಾಂತ್ಯ ಹಿಂದುಳಿಯುವಿಕೆಗೆ ಕಾರಣಗಳನ್ನು ಚರಿತ್ರೆಯಿಂದ ಶೋಧಿಸಲು ತೊಡಗಿದರೆ ಮಹತ್ವದ ಸಂಗತಿಗಳು ಹೊರಬರಲು ಸಾಧ್ಯವಿದೆ. ಪ್ರಾದೇಶಿಕತೆಯ ಅನನ್ಯತೆಯನ್ನು ಗುರುತಿಸುವುದು, ಅದರ ಎಲ್ಲ ಬಗೆಯ ಮುಖಗಳಿಂದ ಮಾತ್ರ ಸಾಧ್ಯ. ಈ ಪ್ರಾಂತ್ಯದಲ್ಲಿ ವ್ಯವಸಾಯಕ್ಕೆ ಬೇಕಾದ ಫಲವತ್ತಾದ ಭೂಮಿಯಿದೆ. ಏಳು ನದಿಗಳಿವೆ. ಅನೇಕ ಬಗೆಯ ಬೆಳೆಗಳನ್ನು ಬೆಳೆಯಲು ವೈವಿಧ್ಯಮಯ ಮಣ್ಣಿದೆ. ಭಿನ್ನಭಿನ್ನ ಸೊಗಡಿನ ಆಡುನುಡಿ ಮಾತಾಡುವ ಜನಸಮುದಾಯಗಳಿವೆ. ಜಾತ್ರೆಗಳು, ಹಬ್ಬಗಳು, ಮೊಹರಂ ಆಚರಣೆ ಹೀಗೆ ವೈವಿಧ್ಯಮಯ ಸಾಂಸ್ಕೃತಿಕ ಸತ್ವ ಈ ಪ್ರಾಂತ್ಯದಲ್ಲಿದೆ. ಆದರೂ ಆಧುನಿಕ ಪೂರ್ವ ಸಾಹಿತ್ಯ ಸಮೃದ್ಧವಾಗಿದ್ದು, ಆಧುನಿಕ ಸಾಹಿತ್ಯದ ಬೆಳವಣಿಗೆಗಳು ಇತರ ಪ್ರಾಂತ್ಯಗಳಿಗೆ ಹೋಲಿಸಿದರೆ ಹಿಂದುಳಿಯಲು ಕಾರಣಗಳೇನೆಂದು ತಿಳಿಯುವುದು, ಚರಿತ್ರೆಯ ಅರಿವನ್ನು ಮೂಡಿಸುವುದು ಅಧ್ಯಯನ ಮಹತ್ವವಾಗುತ್ತದೆ.

ಈ ಅಧ್ಯಯನದಲ್ಲಿ ಒಳಗುಮಾಡಿದ ತತ್ವಪದ ಸಾಹಿತ್ಯದಲ್ಲಿ, ವೈರಾಗ್ಯ, ಬಡತನ, ಆಧ್ಯಾತ್ಮ ವಿಷಯಗಳು ಅಧ್ಯಯನಕ್ಕೆ ಒಳಪಡಿಸಿದಾಗ, ಅದರ ಚಾರಿತ್ರಿಕ ಹಿನ್ನೆಲೆ, ಪ್ರಾದೇಶಿಕ ಹಿನ್ನೆಲೆಯಿಂದ ಗ್ರಹಿಸಿದಾಗ ಸಿಗುವ ನೋಟಗಳು ಒಂದು ತಿಳುವಳಿಕೆಗಳನ್ನು ನೀಡುತ್ತವೆ. ಕಾವ್ಯದ ವಿಷಯ, ಕಥಾ ಸಾಹಿತ್ಯದ ಪ್ರಾದೇಶಿಕ ಸತ್ವ ಹೀಗೆ ಇರಲು ಕಾರಣ, ಈ ಪ್ರಾಂತ್ಯದ ಜನಸಮುದಾಯಗಳ ಒಳಗೆ ಇರುವ ಸಂಗತಿಗಳು ಈ ಸಂಗತಿಗಳನ್ನು ಅರಿಯುವ ಮಹತ್ವದಿಂದ ಈ ಅಧ್ಯಯನ ಮಾಡಲಾಗಿದೆ.

ಪ್ರದೇಶ, ಪ್ರಾದೇಶಿಕತೆ, ಅದರ ಇತಿಹಾಸದೊಂದಿಗೆ ಅಧ್ಯಯನ ಮಾಡುವುದರಿಂದ, ಅದರ ಸತ್ವ ಸೊಗಡು ತಿಳಿಯುತ್ತದೆ. ಸಾಂಸ್ಕೃತಿಕ ಹಿಂಬೀಳುವಿಕೆಗೆ ಕಾರಣಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಈ ಉದ್ದೇಶ ಮತ್ತು ಮಹತ್ವನ್ನು ಇಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

## ೧.೩ ಅಧ್ಯಯನದ ವ್ಯಾಪ್ತಿ

ಇದು ಪ್ರಾದೇಶಿಕ ಸಾಹಿತ್ಯದ ಅಧ್ಯಯನವಾಗಿದೆ. ಈ ಅಧ್ಯಯನದಲ್ಲಿ 'ಹೈದರಾಬಾದ್ ಕರ್ನಾಟಕ' ಎಂಬುದು ಒಂದು ಪ್ರಾಂತ್ಯದ ಹೆಸರನ್ನು ಸೂಚಿಸಿದರೆ, ಇನ್ನೊಂದು 'ಸ್ವಾತಂತ್ರಪೂರ್ವ' ಎಂಬುದು ಅವಧಿಯನ್ನು, ಕಾಲ ಮಿತಿಯನ್ನು ಸೂಚಿಸುತ್ತದೆ. ಪ್ರಾಂತ್ಯ ಮತ್ತು ಅದರ ಸಾಹಿತ್ಯವನ್ನು ಒಂದು ಅವಧಿಯ ಮಿತಿಯ ಒಳಗೆ ಗ್ರಹಿಸುವ ಕ್ರಮ ಇಲ್ಲಿ ಕಾಣುತ್ತದೆ. 'ಹೈದರಬಾದ್ ಕರ್ನಾಟಕ' ಮತ್ತು 'ಸ್ವಾತಂತ್ರ್ಯಪೂರ್ವ' ಎಂಬ ಪರಿಕಲ್ಪನೆಗಳನ್ನು ಸಮಸ್ಯೀಕರಿಸಿ ಕೊಳ್ಳಲಾಗಿದೆ. ಬ್ರಿಟೀಶ್-ನಿಜಾಮ್ ಆಡಳಿತದ ಕಾಲಾವಧಿಯಲ್ಲಿ ಇಲ್ಲಿನ ಬೀದರ್, ಗುಲಬರ್ಗಾ, ರಾಯಚೂರು ಜಿಲ್ಲಾ ಪ್ರದೇಶಗಳು ನಿಜಾಮ್ ಸಂಸ್ಥಾನಕ್ಕೆ ಸೇರಿದ್ದರಿಂದ 'ನಿಜಾಮ್ ಕರ್ನಾಟಕ' ಎಂತಲೂ, ಸ್ವಾತಂತ್ರ್ಯ ನಂತರದ ಆಡಳಿತವು 'ಹೈದರಾಬಾದ್ ಕರ್ನಾಟಕ' ಎಂತಲೂ ಗುರುತಿಸಿ ಕರೆಯುತ್ತ ಬಂದಿದೆ. ಹೀಗಾಗಿ ಈ ಅಧ್ಯಯನದಲ್ಲಿ ಈ ಮೂರು ಜಿಲ್ಲೆಗಳಲ್ಲಿ ರಚನೆಯಾದ ಸಾಹಿತ್ಯವನ್ನು ಅದರಲ್ಲೂ ಮುಖ್ಯವಾಗಿ ತತ್ವಪದ ಸಾಹಿತ್ಯ, ಕಥೆ ಸಾಹಿತ್ಯ, ಕಾವ್ಯ ಸಾಹಿತ್ಯವನ್ನು ಅಧ್ಯಯನಕ್ಕೆ ಒಳಗು ಮಾಡಲಾಗಿದೆ. ಜೊತೆಗೆ ಈ ಪ್ರಾಂತ್ಯದಲ್ಲಿ ಅಭಿವ್ಯಕ್ತಗೊಂಡ ಜಾನಪದ ಸಾಹಿತ್ಯದ ಕೆಲವು ಪ್ರಕಾರಗಳನ್ನು ಸಂಕ್ಷಿಪ್ತವಾಗಿ ಅಭ್ಯಾಸಿಸಲಾಗಿದೆ.

'ಸ್ವಾತಂತ್ರ್ಯಪೂರ್ವ' ಎಂಬುದು ಸಮಸ್ಯಾತ್ಮಕವಾಗಿದೆ. ಈ ಪ್ರಾಂತ್ಯಕ್ಕೆ ೧೯೪೮ರಲ್ಲಿ ಸ್ವಾತಂತ್ರ್ಯ ಬಂತು. ಈ ಪ್ರಾಂತ್ಯವು ನಿಜಾಮ ಆಡಳಿತದಿಂದ ಮುಕ್ತವಾಗಿ ಸ್ವತಂತ್ರ ಭಾರತದ, ಕರ್ನಾಟಕದ ಅಧೀನಕ್ಕೆ ಬಂತು. ಇಲ್ಲಿಂದ ಮೇಲಕ್ಕೆ ಎಂದರೆ ಎಲ್ಲಿವರೆಗೆ? ಎಂಬ ಪ್ರಶ್ನೆ ಬರುತ್ತದೆ. ಹೈದರಾಬಾದ್ ನಿಜಾಮರ ಸಂಸ್ಥಾನಕ್ಕೆ ಒಳಗಾಗಿದ್ದ ಈ ಪ್ರದೇಶವು ೧೭೨೪ ರಿಂದ ೧೯೪೮ರ ವರೆಗೆ ನಿಜಾಮರ ಅಧೀನದಲ್ಲಿತ್ತು. ಅಂದರೆ ಈ ಕಾಲಾವಧಿಯನ್ನು 'ಸ್ವಾತಂತ್ರ್ಯಪೂರ್ವ' ಎಂದು ಇಟ್ಟುಕೊಳ್ಳಲಾಗಿದೆ. ಇದರಿಂದಾಗಿಯೇ ೧೯ನೇ ಶತಮಾನ ಕೊನೆಯ ತನಕ ಅಭಿವ್ಯಕ್ತಗೊಂಡ 'ತತ್ವಪದ ಸಾಹಿತ್ಯ'ವನ್ನು ಇಲ್ಲಿ ಅಧ್ಯಯನಕ್ಕೆ ಎತ್ತಿಕೊಳ್ಳಲಾಗಿದೆ. 'ಸ್ವಾತಂತ್ರ್ಯಪೂರ್ವ' ಎಂದರೆ ಒಂದನೇ ಶತಮಾನದವರೆಗೂ ಎಳೆದರೆ ಹೇಗೆ? ಎಳೆದರೆ ತಪ್ಪೇ? ಎಂಬ ಪ್ರಶ್ನೆಗೆ ಉತ್ತರ ಸರಳವಾಗಿ ಸಿಗುವುದಿಲ್ಲ. 'ಹೈದರಾಬಾದ ಕರ್ನಾಟಕ' ಎಂಬುದು ಬ್ರಿಟಿಷ್–ನಿಜಾಮ ಪೂರ್ವ ಕಾಲದಲ್ಲಿ ಇರಲಿಲ್ಲ ಎಂದು ಗ್ರಹಿಸಬೇಕಾಗಿದೆ. ಆದರೂ ಈ ಅಧ್ಯಯನದಲ್ಲಿ 'ಬ್ರಿಟಿಷ್–ನಿಜಾಮ' ಪೂರ್ವ ಕಾಲದಲ್ಲಿ ಈ ಪ್ರಾಂತ್ಯದ ರಾಜಕೀಯ ಚರಿತ್ರೆಯನ್ನು, ಸಾಹಿತ್ಯದ ಬೆಳವಣಿಗೆಯನ್ನು, ಸಂಸ್ಕೃತಿಯ ಆಯಾಮಗಳನ್ನು ಗುರುತಿಸುವುದು ಇಲ್ಲಿ ಕಾಣುತ್ತದೆ. ಇದು ಹಿನ್ನೆಲೆಗಾಗಿ ಮಾತ್ರ ಆಯ್ಕೆಮಾಡಿಕೊಳ್ಳಲಾಗಿದೆ.

ಪ್ರಾದೇಶಿಕ ಅಧ್ಯಯನ ಎಂದಾಗ, ಇಲ್ಲಿ ಕೇವಲ ಸಾಹಿತ್ಯಕ್ಕೆ ಮಾತ್ರ ಒತ್ತು ಕೊಡಲಾಗಿಲ್ಲ. ರಾಜಕೀಯ ಚರಿತ್ರೆಗೆ ಒತ್ತು ಕೊಡಲಾಗಿದೆ. ಅದರ ಜೊತೆಜೊತೆಗೆ ಬೆಳೆದು ಬಂದ ಸಾಹಿತ್ಯವನ್ನು, ಅದರ ಚರಿತ್ರೆಯೊಂದಿಗೆ ಅದರ ತಾತ್ವಿಕತೆಯನ್ನು ಗುರುತಿಸಲಾಗಿದೆ. ಸ್ವಾತಂತ್ರ್ಯಾ ನಂತರದ ಸಾಹಿತ್ಯದ ಬೆಳವಣಿಗೆಯನ್ನು ಎತ್ತಿಕೊಳ್ಳಲಾಗಿದೆ. ಸ್ವಾತಂತ್ರ್ಯಪೂರ್ವದಿಂದ ಬರವಣಿಗೆ ಆರಂಭಿಸಿದ ಲೇಖಕರು ನಂತರವೂ ಬರೆಯುತ್ತಿರುವುದರಿಂದ ಈ ಸಾಹಿತ್ಯವನ್ನು ಅಧ್ಯಯನದಲ್ಲಿ ಪರಿಗಣಿಸಲಾಗಿದೆ.

### ೧.೪ ಅಧ್ಯಯನದ ವಿಧಾನ

ಈ ಪ್ರಾಂತ್ಯದ ಸಾಂಸ್ಕೃತಿಕ ವಾಸ್ತವವನ್ನು ಶೋಧಿಸುವ ಪ್ರಯತ್ನ ಈ ಅಧ್ಯಯನದಲ್ಲಿ ಮಾಡಲಾಗಿದೆ. ಪ್ರಭುತ್ವಗಳ ಆಳ್ವಿಕೆ, ಬದಲಾಗುವಿಕೆ, ಅದರ ನಡುವೆ ಸಮಾಜ, ಧರ್ಮ, ಸಾಹಿತ್ಯ ಮುಂತಾದ ವಲಯಗಳಲ್ಲಿ ಆಗುವ ಬೆಳವಣಿಗೆಯನ್ನು ಗುರುತಿಸಲಾಗಿದೆ. ರಾಜಕೀಯ ಚರಿತ್ರೆಯೊಂದಿಗೆ ಸಾಹಿತ್ಯ ಚರಿತ್ರೆಯನ್ನೂ, ಸಾಮಾಜಿಕ ಧಾರ್ಮಿಕ ವಲಯಗಳಲ್ಲಿ ಆಗುವ ಏರುಪೇರುಗಳನ್ನು ಇಲ್ಲಿ ವಿವರಿಸಲಾಗಿದೆ. ಈ ಪ್ರಾಂತ್ಯದ ಭೌಗೋಳಿಕ ವ್ಯಾಪ್ತಿಯನ್ನೂ ಗುರುತಿಸುವಾಗ 'ನಿಜಾಮ್ ಕರ್ನಾಟಕ' ಅಂದಾಗ ಮೂರು ಜಿಲ್ಲೆಗಳು ಒಳಗೊಂಡಿರುತ್ತವೆ. ನಿಜಾಮ್ ಪೂರ್ವ ಕಾಲದಲ್ಲಿ ಇದಕ್ಕೆ ಈ ಹೆಸರಿನಿಂದ ಗುರುತಿಸಲಾಗುತ್ತಿರಲಿಲ್ಲ. ನಿಜಾಮ್ ಪೂರ್ವ ಕಾಲದಲ್ಲಿ ಮೊಗಲರು, ಆದಿಲ್‌ಶಾಹಿಗಳು, ಬಹಮನಿಗಳು ಈ ಪ್ರಾಂತ್ಯವನ್ನು ತಮ್ಮ ಅಧೀನದಲ್ಲಿಟ್ಟುಕೊಂಡಿದ್ದರು ಎಂಬುದನ್ನು ಈಗಿನ ವ್ಯಾಪ್ತಿಯನ್ನು ಗಮನದಲ್ಲಿರಿಸಿಕೊಂಡು ಹೇಳಬೇಕಾಗಿದೆ. ಹಾಗೆಯೇ ಮುಂದುವರಿಸಿದರೆ ಈ ವ್ಯಾಪ್ತಿಯ ಪ್ರದೇಶವು ಹೊಯ್ಸಳರು, ಸೇವುಣರು, ಕಳಚೂರ್ಯರು, ಕಲ್ಯಾಣಿ ಚಾಲುಕ್ಯರು, ಮಳಖೇಡದ ರಾಷ್ಟ್ರಕೂಟರು, ತಲಕಾಡಿನ ಗಂಗರು, ಬನವಾಸಿಯ ಕಂದಬರು, ಶಾತವಾಹನರು, ಮೌರ್ಯರು ಮುಂತಾದವರ ಅಧೀನದಲ್ಲಿತ್ತು ಎಂದು ಹೇಳಬಹುದು. ಈ ದೃಷ್ಟಿಯಿಂದ ಈ ಅಧ್ಯಯನದಲ್ಲಿ ರಾಜಕೀಯ ಸ್ಥಿತ್ಯಂತರಗಳ ಬೆಳವಣಿಗೆಗಳನ್ನು ಸಂಕ್ಷಿಪ್ತವಾಗಿ ಗುರುತಿಸುತ್ತ, ಸಾಹಿತ್ಯ, ಧರ್ಮಗಳ ಚರಿತ್ರೆಯನ್ನು ದಾಖಲಿಸುತ್ತ ೧೭ನೇ ಶತಮಾನದಿಂದ ೧೯ನೇ ಶತಮಾನದವರೆಗಿನ ಸಾಂಸ್ಕೃತಿಕ ವಿದ್ಯಮಾನಗಳನ್ನು ಹೆಚ್ಚು ಒತ್ತುಕೊಟ್ಟು ಅಧ್ಯಯನ ಮಾಡಲಾಗಿದೆ.

ಈ ಪ್ರಾಂತ್ಯದಲ್ಲಿ ಕನ್ನಡ ಭಾಷೆಯು ಎದುರಿಸಿದ ಬಿಕ್ಕಟ್ಟುಗಳನ್ನು ಶೋಧಿಸತ್ತ ಇತರ ಭಾಷೆಗಳ ಪ್ರಾಬಲ್ಯದಿಂದ ಉಂಟಾದ ಪರಿಣಾಮಗಳೆಂದರೆ, ಸಾಹಿತ್ಯದ ಬೆಳವಣಿಗೆಗೆ ಅವಕಾಶಗಳು ಕಡಿಮೆಯಾದದ್ದನ್ನು ಗುರುತಿಸಲಾಗಿದೆ. ಉರ್ದು ಭಾಷೆಯಿಂದ ಆಧುನಿಕ ಶಿಕ್ಷಣವನ್ನು ಕಲಿಯುವ ಕಷ್ಟಗಳನ್ನು ಇಲ್ಲಿ ದಾಖಲಿಸಲಾಗಿದೆ. ಇಂಗ್ಲೀಶ್ ಭಾಷೆಯಿಂದ ವಂಚಿತರಾದ ವಿದ್ಯಾವಂತರಿಂದ ಆಧುನಿಕ ಸಾಹಿತ್ಯವು ಹೆಚ್ಚು ಸತ್ವಯುತವಾಗಿ ಬೆಳೆಯಲಿಲ್ಲ. ಹೀಗೆ ಅನೇಕ ಸಾಂಸ್ಕೃತಿಕ ವಾಸ್ತವವನ್ನು ಶೋಧಿಸಿದ ಕಾರಣವಾಗಿ ಈ ಅಧ್ಯಯನವು ಸಾಹಿತ್ಯವನ್ನು ಕುರಿತ ಅಧ್ಯಯನವಾದರೂ, ರಾಜಕೀಯ ಚರಿತ್ರೆ, ಸಾಹಿತ್ಯದ ಚರಿತ್ರೆ, ಸಾಮಾಜಿಕ, ಧಾರ್ಮಿಕ ಚರಿತ್ರೆಯನ್ನು ಹೇಳಲು ಪ್ರಯತ್ನಿಸಿದೆ. ಕಾರಣವೆಂದರೆ ಈ ಎಲ್ಲ ಬೆಳವಣಿಗೆಗಳ ನಡುವೆ ಸಾಹಿತ್ಯ ರಚನೆಯಾದದ್ದು. ಅದರಲ್ಲಿನ ಸಾಮಾಜಿಕ ವಾಸ್ತವವನ್ನು ಗುರುತಿಸುವ ಕ್ರಮ ಇಲ್ಲಿ ಮುಖ್ಯವಾಗಿ ಕಾಣುತ್ತದೆ.

ಈ ಹಿನ್ನೆಲೆಯಲ್ಲಿ, ಅಧ್ಯಯನದ ವಿಧಾನವೆಂದರೆ ಪ್ರಾಂತ್ಯದ ಸಾಂಸ್ಕೃತಿಕ ವಿಶೇಷಗಳನ್ನು, ಚಾರಿತ್ರಿಕ ಸಂದರ್ಭಗಳನ್ನು, ಸಾಮಾಜಿಕ ವಾಸ್ತವವನ್ನು ಅಧ್ಯಯನ ಮಾಡುತ್ತ, ಚರಿತ್ರೆಯ ಒಡಲಲ್ಲಿ ಈ ಪ್ರಾಂತ್ಯದ ಸಾಹಿತ್ಯ ಹುಟ್ಟಿ, ಬೆಳೆದ, ಎದುರಿಸಿದ ಸಾಂಸ್ಕೃತಿಕ ಬಿಕ್ಕಟ್ಟುಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ವಿಧಾನವನ್ನು ಅನುಸರಿಸಲಾಗಿದೆ. ಇದೊಂದು ಸಾಂಸ್ಕೃತಿಕ

ಅಧ್ಯಯನದ ವಿಧಾನವೆಂದರೂ ತಪ್ಪಾಗುವುದಿಲ್ಲ. ಯಾವುದೋ ಒಂದು ಸಾಹಿತ್ಯಿಕ ಸಿದ್ಧಾಂತದ ಮೂಲಕ ಅಧ್ಯಯನ ಮಾಡುವ ವಿಧಾನ ಇಲ್ಲಿ ಇಲ್ಲ. ಒಟ್ಟು ಈ ಪ್ರಾಂತ್ಯದ ಏಳು ಬೀಳುಗಳನ್ನು ಗುರುತಿಸುತ್ತ ಸಾಹಿತ್ಯದ ಬೆಳವಣಿಗೆ ಮತ್ತು ಆ ಸಾಹಿತ್ಯದ ಸತ್ವ, ಭಾಷಿಕ ಸೊಗಡಿನ ಗುಣಗಳನ್ನು ಶೋಧಿಸಲು ಪ್ರಯತ್ನಿಸಲಾಗಿದೆ.

## ಅಧ್ಯಾಯ ೨

# ಹೈದರಾಬಾದ್ ಕರ್ನಾಟಕದ ಭೌಗೋಳಿಕ ವ್ಯಾಪ್ತಿ, ಸಾಹಿತ್ಯ ಸಂಸ್ಕೃತಿಯ ಚಾರಿತ್ರಿಕ ಬೆಳವಣಿಗೆಯೊಂದಿಗೆ

ಸಾಹಿತ್ಯ ಮತ್ತು ಸಂಸ್ಕೃತಿಗಳ ಅಧ್ಯಯನದಲ್ಲಿ ಆಯಾ ಪ್ರದೇಶದ ಭೌಗೋಳಿಕ ಸ್ವರೂಪವು ಅದರ ಗುಣಾತ್ಮಕ ಬೆಳವಣಿಗೆಗೆ ಒಂದು ರೀತಿಯ ಅಂತರ್‌ಸಂಬಂಧವನ್ನು ಹೊಂದಿರುತ್ತದೆ. ಸಾಮಾನ್ಯವಾಗಿ ಅಧ್ಯಯನಕಾರರಿಗೆ ಸಂಸ್ಕೃತಿಗಳ ಹುಡುಕಾಟದಲ್ಲಿ ಭೌಗೋಳಿಕ ಅರಿವು ಬಹುಮುಖ್ಯವಾತ್ತದೆ. ಹೈದರಾಬಾದ್ ಕರ್ನಾಟಕದ ಭೌಗೋಳಿಕ ವ್ಯಾಪ್ತಿಯನ್ನು ಚಾರಿತ್ರಿಕ ಹಿನ್ನೆಲೆಯಿಂದ ಗಮನಿಸಿದಾಗ ಇಲ್ಲಿ ಅನೇಕ ಸಂಸ್ಕೃತಿಗಳು, ಭಾಷೆ, ಜನವರ್ಗ, ಪ್ರಭುತ್ವಗಳು, ಹುಟ್ಟಿ ಬಾಳಿರುವುದು ಗಮನಕ್ಕೆ ಬರುತ್ತವೆ. ಕನ್ನಡ ಸಾಹಿತ್ಯದ ಚರಿತ್ರೆಯನ್ನು ಗಮನಿಸಿದಾಗ, ಅದರ ಬೆಳವಣಿಗೆಗೂ ಹೈದರಾಬಾದ್ ಕರ್ನಾಟಕಕ್ಕೂ ಅವಿನಾಭಾವ ಸಂಬಂಧವಿರುವುದು ತಿಳಿಯುತ್ತದೆ. ಚರಿತ್ರೆಯನ್ನು ಅವಲೋಕನ ಮಾಡಿದಾಗ ಆ ಸಂಬಂಧದ ಎಳೆಗಳು ಕಾಣುತ್ತವೆ. ಅಂತಹ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಕನ್ನಡದ ಸಾಂಸ್ಕೃತಿಕ ಚರಿತ್ರೆಯ ಸಂದರ್ಭದಲ್ಲಿ ಹೇಳುವುದಾದರೆ ಬಹುತೇಕ ಪರಂಪರೆಗಳು ನೈಸರ್ಗಿಕವಾದ ಬೆಟ್ಟಪ್ರದೇಶ ಮತ್ತು ನದಿ ತೀರದ ಸಂಬಂಧ ಹೊಂದಿರುವುದನ್ನು ಕಾಣುತ್ತೇವೆ. ಇದಕ್ಕೆ ಹೈದರಾಬಾದ್ ಕರ್ನಾಟಕ ಪ್ರದೇಶವೂ ಸಹ ಹೊರತಾಗಿಲ್ಲ. ಈ ಪ್ರದೇಶದ ಚಾರಿತ್ರಿಕ ಹಿನ್ನೆಲೆಯನ್ನು ಅರಿಯದೇ ಅಲ್ಲಿನ ಸಾಂಸ್ಕೃತಿಕ ಸ್ವರೂಪವನ್ನೂ ಅರ್ಥಮಾಡಿಕೊಳ್ಳುವುದು ಸರಿ ಎನಿಸುವುದಿಲ್ಲ.

ಸಾಮಾನ್ಯವಾಗಿ ಯಾವುದೇ ಪ್ರಾಂತ್ಯಕ್ಕೆ ತನ್ನದೇ ಆದ ಭೌಗೋಳಿಕ, ಪ್ರಾಕೃತಿಕ, ಭಾಷಿಕ ಹಾಗೂ ಸಾಂಸ್ಕೃತಿಕವಾದ ಅನನ್ಯತೆಗಳಿರುತ್ತವೆ. ಕರ್ನಾಟಕದಲ್ಲಿ ಕೊಡಗು, ಮೈಸೂರು, ಮಂಗಳೂರು,

ಬೆಂಗಳೂರು, ಧಾರವಾಡ, ಬೆಳಗಾವಿ ಮುಂತಾದ ಪ್ರಾಂತ್ಯಗಳಿಗೆ ಅವುಗಳದ್ದೆ ಆದ ಭಿನ್ನ ಭಿನ್ನ ಸಾಂಸ್ಕೃತಿಕ ಚಹರೆಗಳಿವೆ. ಅಷ್ಟೇ ಅಲ್ಲದೇ ಈ ಪ್ರಾಂತ್ಯದ ಒಳಗೆಯೇ ಇರುವ ಅನೇಕ ಒಳ ಪ್ರಾಂತ್ಯಗಳು ತಮ್ಮವೇ ಆದ ವಿಶಿಷ್ಟತೆಗಳನ್ನು ಗಳಿಸಿಕೊಂಡಿವೆ. ಹೈದರಾಬಾದ್ ಕರ್ನಾಟಕವನ್ನೇ ತೆಗೆದುಕೊಂಡರೆ ಇಲ್ಲಿನ ಮೂರು ಜಿಲ್ಲೆಗಳು ವಿಭಿನ್ನ ಸಾಂಸ್ಕೃತಿಕ ನೆಲೆಗಳಿರುವುದು ಗಮನಕ್ಕೆ ಬರುತ್ತದೆ. ಭಿನ್ನ ಭಾಷಿಕ ಸ್ವರೂಪ ಹೊಂದಿರುವ ಗುಲಬರ್ಗಾ ಜಿಲ್ಲೆಯ ಸುರಪುರ, ಶಹಪುರ, ಜೇವರ್ಗಿ ತಾಲೂಕುಗಳ ಗಡಿಯಾದ ಕೃಷ್ಣಾ ಮತ್ತು ಭೀಮಾ ನದಿಗಳ ಹರಿವಿನೊಳಗಿನ ವ್ಯಾಪ್ತಿಯುಳ್ಳ ಪ್ರದೇಶವನ್ನು 'ಸಗರ ನಾಡು' ಎಂದು ಕರೆಯಲಾಗುತ್ತದೆ. ರಾಯಚೂರು ಜಿಲ್ಲಾ ಪ್ರದೇಶದ ವ್ಯಾಪ್ತಿಯನ್ನು 'ಎಡದೊರೆ ನಾಡು' ಎಂದು ಕರೆಯಲಾಗಿತ್ತು. ತುಂಗಭದ್ರಾ ಮತ್ತು ಕೃಷ್ಣಾ ನದಿಗಳ ನಡುವಿನ ಫಲವತ್ತಾದ ಭೂ ಪ್ರದೇಶವು 'ದೋ-ಅಬ್' ಎಂದು ಕರೆಯಿಸಿಕೊಳ್ಳುತ್ತಿತ್ತು. ಇಂತಹ ಪ್ರಾಂತ್ಯದ ಅಧ್ಯಯನವು ಹೊಸ ಚರಿತ್ರೆಯನ್ನು ಕಟ್ಟಬಲ್ಲದು. ಸ್ಥಳೀಯ ಚರಿತ್ರೆಯ ಹುಡುಕಾಟವೆಂದರೆ ದೇಶಿಯ ಹುಡುಕಾಟವೆ ಆಗಿದೆ. ಜಾಗತಿಕರಣದ ಸಧ್ಯದ ಸ್ಥಿತಿಯಲ್ಲಿ ಪ್ರಾಂತ್ಯಗಳ ಅನನ್ಯತೆ, ಅಥವಾ ದೇಶಿಯತೆ ತನ್ನತನವನ್ನು ಕಳೆದುಕೊಳ್ಳುತ್ತಿದೆ ಎಂಬ ಆತಂಕ ನಮ್ಮೆಲ್ಲರನ್ನು ಕಾಡುತ್ತಿರುವಾಗ ಇಂಥ ಪ್ರಾಂತ್ಯಗಳ ಅಧ್ಯಯನ ಹೊಸದಾದ ಸಾಂಸ್ಕೃತಿಕ ತಿಳುವಳಿಕೆಯನ್ನು ಅರಿಯಲು ಸಾಧ್ಯವಾಗಬಹುದು.

ಸಾಮಾನ್ಯವಾಗಿ ಪ್ರಪಂಚದ ಬಹುಪಾಲು ರಾಜಶಾಹಿ ಆಡಳಿತಗಳು ಭೂಗೋಳದ ಮೂಲಕ ಚರಿತ್ರೆಯನ್ನು ನಿರ್ಮಿಸಿದ್ದೆ ಹೆಚ್ಚು. ಪ್ರಭುತ್ವಗಳು ತಮ್ಮ ಸಾಮ್ರಾಜ್ಯದ ಗಡಿಗಳನ್ನು ವಿಸ್ತರಿಸುವುದರ ಮೂಲಕ ಅಧೀನ ಸಾಮಂತರನ್ನು ಹೆಚ್ಚಿಸಿಕೊಳ್ಳುತ್ತ, ಆಡಳಿತ ನಡೆಸುತ್ತ ಬಂದಿರುವುದನ್ನು ನಾವು ಚರಿತ್ರೆಯಲ್ಲಿ ಕಾಣುತ್ತೇವೆ. ಈ ಭಾಗದಲ್ಲಿ ಆಳಿದ ಪ್ರಭುತ್ವಗಳನ್ನು, ಗಡಿಗಳನ್ನು ಗುರುತಿಸಿ ಅಲ್ಲಿ ಕನ್ನಡಿಗರ ಕುರುಹುಗಳನ್ನು ಗುರುತಿಸುವ ನಿಟ್ಟಿನಲ್ಲಿ ಈ ಅಧ್ಯಯನ ಪ್ರಯತ್ನಿಸುತ್ತದೆ. ಆ ಮೂಲಕ ಹೈದರಾಬಾದ್ ಕರ್ನಾಟಕದಲ್ಲಿನ ಕನ್ನಡದ ಹುಟ್ಟು ಬೆಳವಣಿಗೆಯನ್ನು, ಅದರ ಚರಿತ್ರೆಯನ್ನು ಕಟ್ಟಿಕೊಡಲು ಇಲ್ಲಿ ಪ್ರಯತ್ನಿಸಲಾಗುತ್ತದೆ. ಮೊದಲು ಈ ಪ್ರಾಂತ್ಯದ ಸಂಕ್ಷಿಪ್ತ ಭೌಗೋಳಿಕ ಪರಿಚಯ ಮಾಡಿಕೊಳ್ಳುವುದು ಉಚಿತವೆನಿಸುತ್ತದೆ.

ಪ್ರಸ್ತುತ ಕರ್ನಾಟಕದಲ್ಲಿ ನಾಲ್ಕು ಕಂದಾಯ ವಿಭಾಗಗಳಿವೆ. ಬೆಂಗಳೂರು, ಮೈಸೂರು, ಬೆಳಗಾವಿ ಮತ್ತು ಗುಲಬರ್ಗಾ ಇವೇ ಆ ವಿಭಾಗಗಳು. ಗುಲಬರ್ಗಾ ಕಂದಾಯ ವಿಭಾಗವು ಹಿಂದೆ ನಿಜಾಮ್ ಆಡಳಿತಕ್ಕೊಳಪಟ್ಟು, ಇಂದು 'ಹೈದರಾಬಾದ್ ಕರ್ನಾಟಕ' ಎಂದು ಕರೆಸಿಕೊಳ್ಳುತ್ತಿದೆ. ಬ್ರಿಟೀಶರ ಆಡಳಿತಕ್ಕೊಳಗಾದ ಬೆಂಗಳೂರು, ಮೈಸೂರು ಮತ್ತು ಬೆಳಗಾವಿ ಭಾಗಗಳು ಇಂದು ಅಭಿವೃದ್ಧಿ ಕಂಡು ಎಲ್ಲ ಕ್ಷೇತ್ರಗಳಲ್ಲಿ ತಮ್ಮ ಛಾಪನ್ನು ಮೂಡಿಸಿವೆ. ಆದರೆ ನಿಜಾಮ್ ಶಾಹಿಯ ಆಡಳಿತಕ್ಕೊಳಪಟ್ಟ ಹೈದರಾಬಾದ್ ಕರ್ನಾಟಕ ಪ್ರದೇಶ ಇಂದು ಮುನ್ನೆಲೆಗೆ ಬರಲು ಪ್ರಯತ್ನಿಸುತ್ತಿದೆ. ಪ್ರಸ್ತುತ ಈ ಪ್ರದೇಶದ ವ್ಯಾಪ್ತಿಯಲ್ಲಿ ಗುಲಬರ್ಗಾ, ರಾಯಚೂರು, ಬೀದರ್, ಕೊಪ್ಪಳ, ಯಾದಗಿರಿ, ಬಳ್ಳಾರಿ ಜಿಲ್ಲೆಗಳು ಸೇರಿವೆ. ಸ್ವಾತಂತ್ರ್ಯಪೂರ್ವದಲ್ಲಿ ಬಳ್ಳಾರಿಯನ್ನು ಹೊರತುಪಡಿಸಿ

ಇನ್ನುಳಿದ ಐದು ಜಿಲ್ಲೆಗಳು ನಿಜಾಮ್ ಆಡಳಿತಕ್ಕೊಳಪಟ್ಟಿದ್ದವು. ಬಳ್ಳಾರಿ, ಮದ್ರಾಸ್ ಪ್ರಾಂತದಲ್ಲಿತ್ತು. ೧೯೫೩ರಲ್ಲಿ ಬಳ್ಳಾರಿ ಮದ್ರಾಸ್‌ನಿಂದ ಮೈಸೂರು ರಾಜ್ಯದಲ್ಲಿ ವಿಲೀನವಾಯಿತು.[೧] ಭಾಷಾವಾರು ಪ್ರಾಂತ್ಯಗಳ ರಚನೆಯ ನಂತರ ಬಳ್ಳಾರಿ ಜಿಲ್ಲೆಯು ಬೆಂಗಳೂರು ಕಂದಾಯ ವಿಭಾಗದಲ್ಲಿತ್ತು. ನಂತರ ಅದನ್ನು ೧ನೇ ಫೆಬ್ರವರಿ, ೧೯೫೬ರಲ್ಲಿ ಗುಲ್ಬರ್ಗಾ ಕಂದಾಯ ವಿಭಾಗಕ್ಕೆ ಸೇರಿಸಲಾಯಿತು.[೨] ಗುಲಬರ್ಗಾ ಕಂದಾಯ ವಿಭಾಗದಲ್ಲಿ ಬಳ್ಳಾರಿಯು ಸೇರಿದ್ದರಿಂದ ಈ ಜಿಲ್ಲೆಯನ್ನೂ ಸಹ ಹೈದರಾಬಾದ್ ಕರ್ನಾಟಕ ಪ್ರದೇಶದ ಒಂದು ಭಾಗವೆಂದು ಪರಿಗಣಿಸಲಾಯಿತು. ಮುಂದೆ ೧೯೯೧ರಲ್ಲಿ ಈ ಪ್ರಾಂತ್ಯದ ಅಭಿವೃದ್ಧಿಗಾಗಿ 'ಹೈದ್ರಾಬಾದ್ ಕರ್ನಾಟಕ ಪ್ರಾದೇಶಿಕ ಅಭಿವೃದ್ಧಿ ಮಂಡಳಿ'ಯನ್ನು ರಚಿಸಲಾಯಿತು. ಇಂದು ಹೈದರಾಬಾದ್ ಕರ್ನಾಟಕ ಪ್ರದೇಶವೆಂದರೆ, ಆರು ಜಿಲ್ಲೆಗಳನ್ನು ಒಳಗೊಂಡ ಗುಲ್ಬರ್ಗಾ ಕಂದಾಯ ವಿಭಾಗವೇ ಆಗಿದೆ. ಈ ಪ್ರಾಂತ್ಯದ ಸ್ಥೂಲ ಪರಿಚಯ ಇಂತಿದೆ.

ಗುಲಬರ್ಗಾ ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿರುವ ಒಂದು ಜಿಲ್ಲೆಯಾಗಿದೆ. ಇದು ದಖ್ಖನ್ ಪ್ರಸ್ಥಭೂಮಿಯ ಒಂದು ಭಾಗವಾಗಿದೆ. ಇಲ್ಲಿನ ಭೂ ಪ್ರದೇಶವು ಉತ್ತರದಿಂದ ದಕ್ಷಿಣಕ್ಕೆ ಇಳಿಜಾರಾಗಿದ್ದು ಇಡೀ ಜಿಲ್ಲೆ ಸಾಮಾನ್ಯವಾಗಿ ಸಮುದ್ರಮಟ್ಟದಿಂದ ೩೦೦ ರಿಂದ ೬೦೦ ಕಿ.ಮಿ. ಎತ್ತರದಲ್ಲಿದೆ.[೩] ಐತಿಹಾಸಿಕವಾಗಿ ಮಹತ್ವವನ್ನುಳ್ಳ ಈ ಜಿಲ್ಲೆ ೯ನೇ ಶತಮಾನದಲ್ಲಿ ರಾಷ್ಟ್ರಕೂಟರ ಆಳ್ವಿಕೆಯಲ್ಲಿತ್ತು. ಇಲ್ಲಿನ ಮಳಖೇಡವು ರಾಷ್ಟ್ರಕೂಟ ದೊರೆಗಳ ರಾಜಧಾನಿಯಾಗಿ ಉನ್ನತಿಯ ಸ್ಥಿತಿಯಲ್ಲಿತ್ತು. ಮುಂದೆ ೧೦ನೇ ಶತಮಾನದಲ್ಲಿ ಕಲ್ಯಾಣದ ಚಾಲುಕ್ಯರು ಈ ಪ್ರದೇಶವನ್ನು ಆಳಿದರು. ಮಹಮ್ಮದ್ ಬಿನ್ ತುಘಲಕ್ ದೆಹಲಿಯ ಸುಲ್ತಾನನಾಗಿದ್ದಾಗ, ದಕ್ಷಿಣಕ್ಕೆ ದಂಡಯಾತ್ರೆ ಮಾಡಿ ವಾರಂಗಲ್ಲಿನಲ್ಲಿ ಆಳಿದ ಕಾಕತೀಯರನ್ನು ಸೋಲಿಸಿ, ಅವರ ರಾಜ್ಯವನ್ನು ಕಸಿದುಕೊಂಡಾಗ ಗುಲಬರ್ಗಾವು ಸುಲ್ತಾನನ ಅಧೀನಕ್ಕೆ ಒಳಪಟ್ಟಿತು. ಮುಂದೆ 'ಅಲ್ಲಾವುದ್ದೀನ್ ಹಸನ್‌ಗಂಗು ಬಹಮನ್ ಷಾ' ಕ್ರಿ.ಶ. ೧೩೪೭ರಲ್ಲಿ ಬಹಮನಿ ರಾಜ್ಯವನ್ನು ಸ್ಥಾಪಿಸಿದಾಗ, ಗುಲಬರ್ಗಾ ಅವನ ರಾಜಧಾನಿಯಾಯಿತು. ನಂತರದ ದಿನಗಳಲ್ಲಿ ಔರಂಗಜೇಬ್ ದಂಡಯಾತ್ರೆ ಕೈಗೊಂಡಾಗ ಅದು ಅವನ ಕೈವಶವಾಯಿತು.[೪] ಔರಂಗಜೇಬನ ಕಾಲದ ನಂತರ ಮೊಗಲರ ಮನೆತನದಲ್ಲಿಯೂ ಅಸ್ಥಿರತೆ ಕಾಡತೊಡಗಿತು. ಮೊಗಲರ ಕೊನೆಯ ದೊರೆ 'ಮಹಮ್ಮದ್ ಷಾ' ಆಡಳಿತದಲ್ಲಿ ತೀರಾ ಅಶಕ್ತನಾಗಿದ್ದ. ದಕ್ಷಿಣದ ಮೇಲೆ ನಿಗಾ ಇಡಬೇಕೆಂಬ ದೃಷ್ಟಿಯಿಂದ 'ನಿಜಾಮ್-ಉಲ್-ಮುಲ್ಕ'ನನ್ನು ದಕ್ಷಿಣದ ಸುಬೇದಾರರನ್ನಾಗಿ ಮಾಡಿದನು. ಆತನು ದಕ್ಷಿಣಕ್ಕೆ ಬಂದಾಗ ಇಲ್ಲಿಯ ಪರಿಸ್ಥಿತಿ ಸುಸ್ಥಿತಿಯಲ್ಲಿ ಇರಲಿಲ್ಲ. ಇಂಗ್ಲೀಶರು ಮತ್ತು ಇಲ್ಲಿನ ದೇಸಿರಾಜರುಗಳ ನಡುವೆ ಒಳಜಗಳಗಳು ನಡೆಯುತ್ತಿದ್ದವು. ಇಂಥ ಪರಿಸ್ಥಿತಿಯಲ್ಲಿ 'ನಿಜಾಮ್-ಉಲ್-ಮುಲ್ಕ'ನು ತನ್ನ ಬುದ್ಧಿವಂತಿಕೆ ಮತ್ತು ಪರಾಕ್ರಮಗಳಿಂದ ಹಲವಾರು ಯುದ್ಧಗಳಲ್ಲಿ ಜಯಗಳಿಸಿದನು. ಆತನ ಪರಾಕ್ರಮಗಳನ್ನು ಕಂಡ ದಿಲ್ಲಿಯ ಸುಲ್ತಾನನು ತನ್ನ ಪ್ರಧಾನಿಯನ್ನಾಗಿ ನೇಮಿಸಿಕೊಂಡನು.

ಈ ಸ್ಥಾನ 'ನಿಜಾಮ್-ಉಲ್-ಮುಲ್ಕ'ನಿಗೆ ಬೇಕಿರಲಿಲ್ಲ. ಆತನು ಆ ಹುದ್ದೆಗೆ ರಾಜೀನಾಮೆ ನೀಡಿ ಕ್ರಿ.ಶ. ೧೭೨೪ರ ಜುಲೈ ತಿಂಗಳಲ್ಲಿ ಔರಂಗಾಬಾದಿಗೆ ಬಂದನು. ಆಗ ಮೊಗಲರ ಸುಬೇದಾರನಾಗಿ ಕಾರ್ಯನಿರ್ವಹಿಸುತ್ತಿದ್ದ ಮುಬರಿಝುಖಾನನ್ನು ಕ್ರಿ.ಶ. ೧೭೨೪ರ ಅಕ್ಟೋಬರ್ ತಿಂಗಳಲ್ಲಿ ಸೋಲಿಸಿದನು. ಮುಂದೆ ಹೈದರಾಬಾದ್ ಪ್ರದೇಶವನ್ನು ತನ್ನ ವಶಮಾಡಿಕೊಂಡು ಸ್ವತಂತ್ರ ದೊರೆಯಂತೆ ಔರಂಗಾಬಾದ್‌ನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸಿದನು. ನಿಜಾಮ್-ಉಲ್-ಮುಲ್ಕ'ನ ಪರಾಕ್ರಮವನ್ನು ಗ್ರಹಿಸಿದ್ದ ದಿಲ್ಲಿಯ ದೊರೆ ಮಹಮ್ಮದಷಾನು ಅವನಿಗೆ 'ಅಸಫ್‌ಜಾ' ಎಂಬ ಬಿರುದನ್ನು ನೀಡಿದನು. ಅಂದಿನಿಂದ ನಿಜಾಮ್ ಮನೆತನಕ್ಕೆ 'ಅಸಫ್‌ಜಾ' ಮನೆತನ ಎಂಬ ಹೆಸರು ರೂಢಿಯಲ್ಲಿ ಬಂತು. ಕ್ರಿ.ಶ. ೧೭೨೪-೧೯೪೮ ಸೆಪ್ಟೆಂಬರ್ ೧೭ರ ವರೆಗೆ 'ಹೈದ್ರಾಬಾದ್ ಕರ್ನಾಟಕ' ಪ್ರದೇಶ ಈ ಮನೆತನದ ಆಳ್ವಿಕೆಯ ಹಿಡಿತಕ್ಕೊಳಗಾಯಿತು.

ಬೀದರ್ ಹೈದರಾಬಾದ್ ಕರ್ನಾಟಕದ ಮತ್ತೊಂದು ಜಿಲ್ಲೆ. ಈ ಜಿಲ್ಲೆ ದಖ್ಖನ್ ಪ್ರಸ್ಥಭೂಮಿಯ ಭಾಗವಾಗಿದ್ದು ಸಮುದ್ರಮಟ್ಟದಿಂದ ಸರಾಸರಿ ೬೧೪ಮೀ. ಎತ್ತರದಲ್ಲಿದೆ.[೩] ಈ ಪ್ರದೇಶ ಕರ್ನಾಟಕ ಚರಿತ್ರೆಯಲ್ಲಿ ಪ್ರಸಿದ್ಧಿಯಾದ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತು. ನಂತರ ಬಹಮನಿ ರಾಜ್ಯ ಸ್ಥಾಪನೆಯಾಗುತ್ತಿದ್ದಂತೆ ಅದರ ಕಕ್ಷೆಗೆ ಸೇರಿಕೊಂಡಿತು. ೧೬೧೯ರ ವೇಳೆಗೆ ಆದಿಲ್ ಶಾಹಿ ಮನೆತನಕ್ಕೆ ಸೇರಿದ್ದ ಈ ಪ್ರದೇಶ ೧೭೨೪ರಲ್ಲಿ ಹೈದರಾಬಾದ್ ನಿಜಾಮರ ವಶಕ್ಕೆ ಬಂದಿತು. ಮೌರ್ಯ, ಕಂದಬ, ಬಾದಾಮಿ ಚಾಲುಕ್ಯರು, ಸೇವುಣರು, ವಿಜಯನಗರ ಮುಂತಾದ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದ ರಾಯಚೂರು ಜಿಲ್ಲೆ ಹೈದ್ರಾಬಾದ್ ಕರ್ನಾಟಕ ಪ್ರದೇಶದ ಮತ್ತೊಂದು ಜಿಲ್ಲೆಯಾಗಿದೆ. 'ದೋ-ಅಬ್' ಪ್ರದೇಶವೆಂದು ಹೆಸರಾದ ಕೃಷ್ಣ-ತುಂಗಭದ್ರಾ ನದಿಗಳ ಮಧ್ಯದಲ್ಲಿರುವ ರಾಯಚೂರು ಜಿಲ್ಲೆ ಕರ್ನಾಟಕದ ಎಲ್ಲಾ ಅರಸರಿಗೆ ಕಣ್ಣು ಕುಕ್ಕುವಂತ ಸಮೃದ್ಧ ಫಲವತ್ತಾದ ಭೂ ಪ್ರದೇಶವಾಗಿತ್ತು. ರಾಯಚೂರು ಜಿಲ್ಲೆಯು ಸಂಪೂರ್ಣವಾಗಿ ವಿಜಯನಗರ ಸಾಮ್ರಾಜ್ಯದ ಪತನದ ಅನಂತರ ಕೆಲಕಾಲ ಬೇರೆಬೇರೆ ಮುಸಲ್ಮಾನ ಸುಲ್ತಾನರ ವಶದಲ್ಲಿದ್ದು, ಕೊನೆಗೆ ಅಸಫ್‌ಜಾಹಿ ಮನೆತನದ ಆಡಳಿತಕ್ಕೆ ಒಳಪಟ್ಟಿತು. ಕ್ರಿ.ಶ. ೧೮೫೩ರಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ಒಪ್ಪಂದದಲ್ಲಿ ಈ ಜಿಲ್ಲೆಯು ಬ್ರಿಟೀಶರ ವಶವಾಯಿತು. ಕ್ರಿ.ಶ. ೧೮೬೦ರಲ್ಲಿ ಮತ್ತೆ ಈ ಜಿಲ್ಲೆ ಅಸಫ್‌ಜಾಹಿ ಮನೆತನದ ಆಡಳಿತಕ್ಕೆ ಮರಳಿತು. ೧೯೦೫ರಲ್ಲಿ ಜಿಲ್ಲೆಯ ಮರು ವಿಂಗಡನೆಯಾಗಿ 'ದೋ-ಅಬ್' ಜಿಲ್ಲೆ ಎಂಬ ಹೆಸರಿನಲ್ಲಿ ರಾಯಚೂರು, ಯಾದಗಿರಿ, ಯರಗೇರಾ, ದೇವದುರ್ಗ, ಮಾನ್ವಿ, ಅಲಂಪುರ, ಗದ್ವಾಲ ಎಂಬ ತಾಲೂಕುಗಳನ್ನು ಹೊಂದಿತ್ತು. ಲಿಂಗಸಗೂರು, ಕುಷ್ಟಗಿ, ಗಂಗಾವತಿ, ಸಿಂಧನೂರ, ಶಹಪುರ ಮೊದಲಾದ ತಾಲೂಕುಗಳು ಲಿಂಗಸಗೂರು ಜಿಲ್ಲಾ ಕೇಂದ್ರದಲ್ಲಿದ್ದವು. ಕೊಪ್ಪಳ, ಯಲಬುರ್ಗಾ ತಾಲೂಕುಗಳು ಸಾಲಾರಜಂಗನಿಗೆ ಸೇರಿದ ಭಾಗಗಳಾಗಿದ್ದವು. ಇತ್ತೀಚಿಗೆ ರಾಯಚೂರಿನಿಂದ ಕೊಪ್ಪಳ, ಬೇರ್ಪಟ್ಟು ಸ್ವತಂತ್ರ ಜಿಲ್ಲೆಯಾಗಿದೆ.

ಪ್ರಸ್ತುತ ಹೈದರಾಬಾದ್ ಕರ್ನಾಟಕದ ೬ ಜಿಲ್ಲೆಗಳಲ್ಲಿ ೫ ನೇರವಾಗಿ ನಿಜಾಮ್ ಆಡಳಿತಕ್ಕೆ ಒಳಗಾಗಿದ್ದರೆ ಈ ಪ್ರದೇಶದ ಮತ್ತೊಂದು ಜಿಲ್ಲೆ ಬಳ್ಳಾರಿ ಬ್ರಿಟೀಶರ ಮದ್ರಾಸ್ ಪ್ರಾಂತ್ಯಕ್ಕೆ ಸೇರಿತ್ತು. ಕ್ರಿ.ಶ. ೧೭೬೮ರಲ್ಲಿ ಮೈಸೂರಿನ ಹೈದರಾಲಿಯು ಬಳ್ಳಾರಿಯ ಮೇಲೆ ಆಕ್ರಮಣ ನಡೆಸಿದನು. ನಂತರ ಅವನ ಮಗ ಟಿಪ್ಪು ೧೭೮೪ರಲ್ಲಿ ಆದವಾನಿಯ ಮೇಲೆ ಆಕ್ರಮಣ ನಡೆಸಿ ಬಳ್ಳಾರಿಯನ್ನು ವಶಪಡಿಸಿಕೊಂಡನು. ಮುಂದೆ ೧೭೯೨ರಲ್ಲಿ ಟಿಪ್ಪು ಸುಲ್ತಾನನ ಮೇಲೆ ಬ್ರಿಟೀಶರು, ಮರಾಠರು, ನಿಜಾಮ್ ಇವರ ಸೈನ್ಯ ಆಕ್ರಮಣ ನಡೆಸಿತು. ಈ ಯುದ್ಧದಲ್ಲಿ ಟಿಪ್ಪು ಹತನಾದ ನಂತರ ಒಪ್ಪಂದದಂತೆ ಬಳ್ಳಾರಿ ಹೈದರಾಬಾದ್ ನಿಜಾಮನ ವಶವಾಯಿತು. ಕ್ರಿ.ಶ. ೧೮೦೦ರಲ್ಲಿ ಸಹಾಯಕ ಸೈನ್ಯ ಪದ್ಧತಿಯನ್ನು ಒಪ್ಪಿಕೊಂಡ ನಿಜಾಮನು ಬಳ್ಳಾರಿ ಅನಂತಪುರ, ಕರ್ನೂಲು ಮತ್ತು ಕಡಪ ಜಿಲ್ಲೆಗಳನ್ನು ಸಂಭಾವನೆ ಬಾಬ್ತು ಆಗಿ ಬ್ರಿಟೀಶರಿಗೆ ಕಾಣಿಕೆಯಾಗಿ ನೀಡಿದನು. ಹೀಗೆ ಬಳ್ಳಾರಿ ಪ್ರದೇಶವು ಕ್ರಿ.ಶ. ೧೮೦೦ರಲ್ಲಿ ಬ್ರಿಟೀಶರ ನೇರ ಆಳ್ವಿಕೆಗೆ ಒಳಗಾಗಿ ಮದ್ರಾಸ್ ಪ್ರಾಂತ್ಯಕ್ಕೆ ಸೇರಿಕೊಂಡಿತ್ತು. ಗುಲಬರ್ಗಾ ಕಂದಾಯ ವಿಭಾಗದಲ್ಲಿ ಬಳ್ಳಾರಿಯು ಸೇರಿದ್ದರಿಂದ ಈ ಜಿಲ್ಲೆಯೂ ಸಹ ಹೈದರಾಬಾದ್ ಕರ್ನಾಟಕ ಪ್ರದೇಶದ ಒಂದು ಭಾಗವಾಗಿ ಪರಿಗಣಿಸಲಾಯಿತು.

ಸ್ವಾತಂತ್ರ್ಯಪೂರ್ವದಲ್ಲಿ ಭಾರತದಲ್ಲಿಯೇ ಅತ್ಯಂತ ಬಲಿಷ್ಠ ಮತ್ತು ವಿಶಾಲವಾದ, ಶ್ರೀಮಂತ ಸಂಸ್ಥಾನವೆಂದು ಕರೆಯಿಸಿಕೊಂಡಿದ್ದ ಹೈದರಾಬಾದ್ ಸಂಸ್ಥಾನದಲ್ಲಿ ತೆಲುಗು, ಮರಾಠಿ ಮತ್ತು ಕನ್ನಡ, ಉರ್ದು ಭಾಷೆಗಳನ್ನಾಡುವ ಬಹುಭಾಷಿಕರು ಇದ್ದರು. ಒಟ್ಟು ಹದಿನೇಳು ಜಿಲ್ಲೆಗಳ ಸಂಸ್ಥಾನದಲ್ಲಿ ೯ ಜಿಲ್ಲೆಗಳು ತೆಲಂಗಾಣದ ವ್ಯಾಪ್ತಿಯಲ್ಲಿ, ೫ ಜಿಲ್ಲೆಗಳು ಮರಾಠಾವಾಡಕ್ಕೆ ಮತ್ತು ೩ ಜಿಲ್ಲೆಗಳು ಮೈಸೂರು ಪ್ರಾಂತ್ಯಕ್ಕೆ ಸೇರಿದ್ದವು. ಉರ್ದು ಭಾಷೆ ಸಂಸ್ಥಾನದ ಆಡಳಿತ ಮತ್ತು ಶೈಕ್ಷಣಿಕ ಭಾಷೆಯಾಗಿತ್ತು. ಇಂಥ ಇತಿಹಾಸವುಳ್ಳ ಹೈದರಾಬಾದ್ ಸಂಸ್ಥಾನದ, ಕರ್ನಾಟಕ ಪ್ರಾಂತದ ಇತಿಹಾಸವು ಅಧ್ಯಯನಕಾರರಿಗೆ ಕುತೂಹಲ ಮೂಡಿಸುತ್ತದೆ.

ಕ್ರಿ.ಪೂ. ೨ನೇ ಶತಮಾನದಿಂದ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಅನೇಕ ರಾಜಪ್ರಭುತ್ವಗಳು ಆಳಿ ಹೋಗಿವೆ. ಮೌರ್ಯರು, ಶಾತವಾಹನರು, ಚಾಲುಕ್ಯರು, ರಾಷ್ಟ್ರಕೂಟರು, ಆದಿಲ್‌ಶಾಹಿಗಳು ಹೀಗೆ ಹಲವಾರು ರಾಜಮನೆತನಗಳು ಆಳಿರುವುದನ್ನು ಚರಿತ್ರೆಯಿಂದ ತಿಳಿಯುತ್ತೇವೆ. ಆಯಾ ಅರಸರ ಕಾಲದಲ್ಲಿ ಈ ಪ್ರದೇಶವು ಹಲವಾರು ಸ್ಥಿತ್ಯಂತರಗಳನ್ನು ಕಂಡಿದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ, ಸಾಹಿತ್ಯ ಕ್ಷೇತ್ರವು ತನ್ನ ಉನ್ನತಿಯನ್ನು ಕಂಡಿರುವುದು ಈ ಪ್ರಾಂತದಲ್ಲಿಯೆ. ಸಾಹಿತ್ಯವು ಅನೇಕ ಪ್ರಕಾರಗಳಲ್ಲಿ ರಚಿತವಾಗಿ ಜನಪದರನ್ನು ಹತ್ತಿರವಾಗುತ್ತ ಬಂದಿರುವುದನ್ನು ಸಾಹಿತ್ಯ ಚರಿತ್ರೆಯಲ್ಲಿ ಕಾಣುತ್ತೇವೆ. ಕನ್ನಡ ಸಾಹಿತ್ಯದ ಬೀಜವನ್ನು ಬಿತ್ತಿ, ಬೆಳೆಸಿ, ಪೋಷಿಸಿ ಫಲಕಂಡ ಈ ಭೂಮಿ ಕಾಲಾನಂತರದಲ್ಲಿ ಕುಂಠಿತವಾಗಿ ಸಾಗುತ್ತ ಬಂದಿರುವುದು ವಿಪರ್ಯಾಸದ ಸಂಗತಿಯಾಗಿದೆ.

ಕರ್ನಾಟಕದ ಇತಿಹಾಸ ಆರಂಭವಾಗುವುದು ಕ್ರಿ.ಪೂ. ೩ನೇ ಶತಮಾನದ ನಂತರ. ಸದ್ಯಕ್ಕೆ ಆ ಮೊದಲಿನ ಯಾವ ಲಿಖಿತ ದಾಖಲೆಗಳು ನಮಗೆ ಲಭ್ಯವಿಲ್ಲ. ಕರ್ನಾಟಕದಲ್ಲಿ

ದೊರೆತಿರುವ ಮೊದಲ ಬರಹದ ದಾಖಲೆಗಳೆಂದರೆ, ಅಶೋಕನ ಶಾಸನಗಳು, ಕ್ರಿ.ಪೂ. ಸುಮಾರು ೨೬೦ರಲ್ಲಿನ ಇವು ರಾಯಚೂರು ಜಿಲ್ಲೆಯ ಮಸ್ಕಿ, ಕೊಪ್ಪಳ, ಚಿತ್ರದುರ್ಗದ ಬ್ರಹ್ಮಗಿರಿ, ಜಟಂಗಿರಾಮೇಶ್ವರ ಮತ್ತು ಸಿದ್ದಾಪುರ, ಬಳ್ಳಾರಿಯ ನಿಟ್ಟೂರು ಮತ್ತು ಉದಯಗೊಳ, ಗುಲಬರ್ಗಾದ ಸನ್ನತಿಯಲ್ಲಿ ಅಶೋಕನ ಶಾಸನಗಳು ದೊರೆತಿವೆ. ಅಶೋಕನ ಶಾಸನಗಳನ್ನು ಸಾಮಾನ್ಯವಾಗಿ ಅವನ ಸಾಮ್ರಾಜ್ಯದ ಗಡಿ ಪ್ರಾಂತಗಳಲ್ಲಿರುವುದನ್ನು ಅನೇಕ ವಿದ್ವಾಂಸರು ಒಪ್ಪಿದ್ದಾರೆ. ಅದರಂತೆ ಕರ್ನಾಟಕದ ಉತ್ತರ ಭಾಗಗಳು ಮೌರ್ಯ ಸಾಮ್ರಾಜ್ಯದ ಮೇರೆಗಳಾಗಿದ್ದವು ಎಂದು ಗ್ರಹಿಸಬಹುದಾಗಿದೆ. 'ಈಗಾಗಲೇ ತಿಳಿದಿರುವಂತೆ ಕರ್ನಾಟಕದಲ್ಲಿ ದೊರೆತಿರುವ ಅಶೋಕನ ಶಾಸನಗಳ ಭಾಷೆ ಪ್ರಾಕೃತ ಮತ್ತು ಲಿಪಿ ಬ್ರಾಹ್ಮೀ; ಅಂದರೆ ಕರ್ನಾಟಕದಲ್ಲಿ ಕನ್ನಡಲಿಪಿ ಮತ್ತು ಭಾಷೆ ಬಳಕೆಯಲ್ಲಿರಲಿಲ್ಲವೇ? ಎಂದು ಆಶ್ಚರ್ಯವಾಗುವುದು. ಇಂದಿನಂತೆ ಅಂದೂ ಕನ್ನಡ ಭಾಷೆ ಮತ್ತು ಲಿಪಿಗಳು ಮನೆಗಳೊಳಗೆ ಮಾತ್ರ ಹೆಚ್ಚಾಗಿ ಬಳಕೆಯಲ್ಲಿದ್ದು, ಹೊರಗೆ ಆಗಿನ ಆಡಳಿತ ವರ್ಗದ ಲಿಪಿ ಮತ್ತು ಭಾಷೆಗಳು ಹೆಚ್ಚಾಗಿ ಬಳಸಲ್ಪಡುತ್ತಿದ್ದವು ಎಂದು ತಿಳಿಯಬೇಕಾಗಿದೆ'.[೬] ವಿದ್ವಾಂಸರ ಈ ಮಾತುಗಳನ್ನು ಗಮನಿಸಿದಾಗ ಒಂದು ಭಾಷೆಯ ಬೆಳವಣಿಗೆಯಲ್ಲಿ ಅಲ್ಲಿನ ಪ್ರಭುತ್ವ ಯಾವ ರೀತಿಯಲ್ಲಿ ಸಹಕಾರಿಯಾಗಿರುತ್ತದೆ ಎಂಬುದು ತಿಳಿಯುತ್ತದೆ. ಪ್ರಾದೇಶಿಕವಾಗಿರುವ ಭಾಷೆಗಳು ಪ್ರಭುತ್ವದ ಆಡಳಿತದಲ್ಲಿ ಹೇಗೆ ನಿರಾಕರಿಸಲ್ಪಡುತ್ತವೆಂಬುದು ಇದರಿಂದ ತಿಳಿಯುತ್ತದೆ. ಹಾಗಾಗಿ ಈ ಪ್ರದೇಶದ ಕನ್ನಡ ಭಾಷೆಯು ತನ್ನ ಏಳಿಗೆಯ ಪ್ರತಿಹಂತದಲ್ಲಿ ಪ್ರಭುತ್ವದ ತಾರತಮ್ಯ ನೀತಿಯಿಂದ ನಿರಾಕರಣೆ ಆಗುತ್ತಲೇ ಬಂದಿದೆ ಎಂಬ ಅಂಶ ಮನದಟ್ಟಾಗುತ್ತದೆ.

ಕ್ರಿ.ಪೂ. ೨೭೪-೨೩೨ರ ಕಾಲದಲ್ಲಿ ಅಶೋಕನು ಈ ಪ್ರಾಂತದಲ್ಲಿ ಸಾಮ್ರಾಜ್ಯ ವಿಸ್ತರಿಸಿದ ಬಗೆಯನ್ನು ಡಾ. ಅಮರೇಶ ನುಗಡೋಣಿಯವರು 'ಪ್ರಭುತ್ವದ ಮೂಲಗುಣ ಸಾಮ್ರಾಜ್ಯದ ವಿಸ್ತರಣೆ ಮತ್ತು ಸಂಪತ್ತನ್ನು ತನ್ನದಾಗಿಸಿಕೊಳ್ಳುವುದು'[೭] ಎಂದು ಹೇಳುತ್ತಾರೆ. ವಿದ್ವಾಂಸರ ಈ ಮಾತು ನಿಜ. ಆದರೆ ಅಶೋಕನಿಗೆ ಸಾಮ್ರಾಜ್ಯ ವಿಸ್ತರಣೆಗಿಂತ ಧರ್ಮದ ಪ್ರಚಾರವೇ ಮುಖ್ಯವಾಗಿ ತ್ತೆನ್ನಿಸುತ್ತದೆ. ಏಕೆಂದರೆ ಅವನು ದೂರದ ಶ್ರೀಲಂಕಾಕ್ಕೆ ತನ್ನ ಮಗ ಮಹೇಂದ್ರ ಮತ್ತು ಮಗಳು ಸಂಘಮಿತ್ರೆಯನ್ನು ಕಳುಹಿಸಿರುವುದು ಧರ್ಮ ಪ್ರಚಾರಕ್ಕಾಗಿಯೇ ಎನ್ನುವುದನ್ನು ಮರೆಯುವಂತಿಲ್ಲ. ದಕ್ಷಿಣ ಭಾರತದಲ್ಲಿ ಅಶೋಕನು ಮಾಡಿದ ಯುದ್ಧ ಕಳಿಂಗಯುದ್ಧ ಎಂದು ದಾಖಲೆಯಲ್ಲಿದೆ. ಆದರೆ ಕಳಿಂಗವಿರುವುದು ಈಗಿನ ಓರಿಸ್ಸಾ ರಾಜ್ಯದಲ್ಲಿ. ಕೇವಲ ಒಂದು ಯುದ್ಧದಿಂದ ಇಡೀ ದೇಶದ ಗಡಿಯವರಿಗೆ ಸಾಮ್ರಾಜ್ಯ ವಿಸ್ತರಣೆ ಮಾಡಲು ಸಾಧ್ಯವೆ? ಹಾಗಾದರೆ ಕರ್ನಾಟಕವನ್ನೇ ಏಕೆ? ಗಡಿ ಭಾಗವನ್ನಾಗಿಸಲಾಯಿತು. ಅದರಾಚೆಗಿನ ಪ್ರದೇಶದಲ್ಲಿ ಅವನು ಏಕೆ ಬರಲಿಲ್ಲ? ಎಂಬ ಪ್ರಶ್ನೆಗಳು ಬರುತ್ತವೆ. ಭಾರತ ಬಿಟ್ಟು ಶ್ರೀಲಂಕಾ ಗಡಿಯವರೆಗೆ ಸಾಮ್ರಾಜ್ಯ ಇತ್ತೆಂಬುದು ಕೇವಲ ಊಹೆ ಎನಿಸುತ್ತದೆ. ಏಕೆಂದರೆ ಮಧ್ಯದಲ್ಲಿ ಅಂತಹ ಪ್ರಬಲ ಅರಸರಾರೂ ಮಧ್ಯದಲ್ಲಿ ಇಲ್ಲದಾಗ ಕರ್ನಾಟಕಕಷ್ಟೇ ಗಡಿಯನ್ನು ಸೀಮಿತಗೊಳಿಸಿದ್ದೇಕೆ? ಎಂಬ ಪ್ರಶ್ನೆ ಬರುತ್ತದೆ. ಅಶೋಕನು ಮೂಲತಃ ದೈವಭಕ್ತನಾಗಿದ್ದ ಎಂಬುದಕ್ಕೆ ಅವನ ಶಾಸನಗಳೇ ಸಾಕ್ಷಿಯಾಗಿವೆ.

"ದೇವನಾಂಪ್ರೀಯ ಪ್ರಿಯದರ್ಶಿ" ಎಂಬ ಬಿರುದುಗಳು ಅವನ ಸ್ವಭಾವವನ್ನು ತಿಳಿಸುತ್ತವೆ. ಅವನ ಶಾಸನಗಳ ಸಾರವಾದ ಹಿರಿಯರಿಗೆ ಗೌರವ, ಅಹಿಂಸೆ, ಸತ್ಯದ ಪಾಲನೆ, ಅನುಕಂಪ, ಉದಾರತ್ವಗಳು ಮುಂತಾದವುಗಳನ್ನು ನೋಡಿದಾಗ, ಅಶೋಕ ಸಾಮ್ರಾಜ್ಯ ವಿಸ್ತರಣೆಗಾಗಿ ಅಷ್ಟೇ ಅಲ್ಲದೇ ಅವನು ಧರ್ಮ ಪ್ರಸಾರಕ್ಕಾಗಿ ಬಂದಿರುವುದು ಸ್ಪಷ್ಟ ಎಂದು ಅನಿಸುತ್ತದೆ.

ಮೌರ್ಯರ ನಂತರ ಬಂದ ಶಾತವಾಹನರು ಪ್ರತಿಷ್ಠಾನಪುರ (ಪೈಠಾಣ)ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಕ್ರಿ.ಪೂ. ೨೩೦, ಕ್ರಿ.ಶ. ೨೨೫ರ ವರೆಗೆ ಆಳ್ವಿಕೆ ನಡೆಸಿದ ಇವರ ಬಗೆಗೆ ಗ್ರೀಕ್ ಅನಾಮಧೇಯ ಕೃತಿ 'ಪೆರಿಪ್ಲಸ್ ಆಫ್ ಎರಿತ್ರಿಯನ್ ಸಿ' ಉಪಯುಕ್ತ ಮಾಹಿತಿ ನೀಡುತ್ತದೆಂದು ಚರಿತ್ರೆ ತಿಳಿಸುತ್ತದೆ. ಶಾತವಾಹನರಿಗೆ 'ಆಂಧ್ರರು' 'ಆಂಧ್ರಭೃತ್ಯರು' ಅಥವಾ 'ಶಾತಕರ್ಣಿಗಳು' ಎಂಬ ಹೆಸರುಗಳಿಂದ ಕರೆಯುತ್ತಿದ್ದರು. 'ಸಿಮುಖ'ನೆಂಬ ಅರಸನಿಂದ ಆರಂಭವಾದ ಶಾತವಾಹನರ ರಾಜ್ಯ ನರ್ಮದಾ ನದಿಯಿಂದ ಗೋದಾವರಿವರೆಗೆ ಹಬ್ಬಿತ್ತೆಂಬುದಾಗಿ ತಿಳಿಯುತ್ತದೆ. ಆಂಧ್ರದ ಕೇಂದ್ರಸ್ಥಾನದಿಂದ ಗುಜರಾತಿನ ನರ್ಮದಾ ನದಿಯವರೆಗೆ ರಾಜ್ಯ ವಿಸ್ತರಿಸಿತ್ತೆಂದರೆ ಶಾತವಾಹನರು ಪ್ರಬಲರೆಂಬುದು ತಿಳಿಯುತ್ತದೆ. ಕನ್ಹ, ೨ನೇ ಶಾತಕರ್ಣಿ, ಹಾಲ, ಗತೌಮಿಪುತ್ರ ಶಾತಕರ್ಣಿ ಮುಂತಾದ ರಾಜರುಗಳ ಆಡಳಿತದಲ್ಲಿ ಶಾತವಾಹನರು ಸಾಹಿತ್ಯ, ಕಲೆ, ಸಂಸ್ಕೃತಿಗೆ ಹೆಚ್ಚಿನ ಮಹತ್ವ ನೀಡಿದರು. ಗುಣಾಢ್ಯನ 'ಬೃಹತ್‌ಕಥಾ', ಹಾಲರಾಜನ 'ಗಾಥಸಪ್ತಸತಿ' ಗ್ರಂಥಗಳು ಪ್ರಮುಖವಾಗಿ ಅಂದಿನ ಜನಜೀವನದ ಮೇಲೆ ಬೆಳಕು ಚೆಲ್ಲುವ ಕೃತಿಗಳಾಗಿವೆ. ಪ್ರಾಕೃತ ಮತ್ತು ಸಂಸ್ಕೃತ ಭಾಷೆಯಲ್ಲಿ ರಚಿತವಾದ ಕ್ಷೇಮೇಂದ್ರನ 'ಕಥಾಸರಿತ್ಸಾಗರ', ಸರ್ವವರ್ಮನ 'ಕಾತಂತ್ರವ್ಯಾಕರಣ' ಕೃತಿಗಳು ಅಂದೂ ಸಹ ಸಾಹಿತ್ಯದ ಕೃಷಿಯಿತ್ತೆಂಬುದಕ್ಕೆ ಸಾಕ್ಷಿಗಳೆನಿಸುತ್ತವೆ.

ಆಂಧ್ರ ಮತ್ತು ಕರ್ನಾಟಕದ ಅನೇಕ ಕಡೆ ಶಾತವಾಹನರ ಕುರುಹುಗಳಿದ್ದವು ಎಂಬುದನ್ನು ಪ್ರಾಚೀನ ಉತ್ಖನನಗಳು ಸಾದರಪಡಿಸಿವೆ. ಗುಲಬರ್ಗಾ, ಶಿವಮೊಗ್ಗ, ಚಿತ್ರದುರ್ಗ ಮುಂತಾದ ಜಿಲ್ಲೆಗಳು ಇವರ ಆಳ್ವಿಕೆಯ ಅಧೀನದಲ್ಲಿದ್ದವೆಂದು ಚರಿತ್ರೆ ತಿಳಿಸುತ್ತದೆ. ರಾಜರು ವೈದಿಕ ಮತದವರಾದರೂ ಜೈನ ಮತ್ತು ಭೌದ್ಧ ಮತಗಳಿಗೆ ಪ್ರೋತ್ಸಾಹ ನೀಡಿದ್ದರು. ಚಾತುರ್ವರ್ಣ ಪದ್ಧತಿಯು ಆಚರಣೆಯಲ್ಲಿತ್ತೆಂದು ತಿಳಿಯುತ್ತದೆ. ಈ ಅಂಶಗಳು ಶಾತವಾಹನರ ಜಾತ್ಯತೀತ ಮನೋಭಾವವನ್ನು ತಿಳಿಸುತ್ತದೆ. ಅದು ಇಂದಿನ ಅನೇಕ ಆಳುವ ಸರ್ಕಾರಗಳಿಗೆ ಮಾದರಿಯೆನ್ನಬಹುದು. ಒಟ್ಟಾರೆಯಾಗಿ ಶಾತವಾಹನರು ಪ್ರಾಚೀನ ಕರ್ನಾಟಕದಲ್ಲಿ ಆಡಳಿತ ನಡಿಸಿದ್ದಾರೆಂಬುದಕ್ಕೆ ಇತಿಹಾಸ ತಜ್ಞರು ಅನೇಕ ಆಕರಗಳನ್ನು ಒದಗಿಸುತ್ತಾರೆ.

ಇಂದಿನ ಹೈದರಾಬಾದ್ ಕರ್ನಾಟಕ ಎಂದು ಗುರುತಿಸುವ ಭೂಪ್ರದೇಶವು ಇಂತಹ ಅನೇಕ ಪ್ರಭುತ್ವಗಳ ಉಗಮ, ವಿಕಾಸ, ಅವಸಾನಗಳನ್ನು ಕಂಡಿದೆ. ಅದರ ಜೊತೆಗೆ ತಾನೂ ಅವುಗಳ ಏಳುಬೀಳಗಳಲ್ಲಿ ಭಾಗವಹಿಸುತ್ತ ಬಂದಿದೆ. ಇಂತ ಏಳುಬೀಳಗಳಲ್ಲಿ ಜನಸಾಮಾನ್ಯರು ಒಂದು ಭಾಗವಾಗಿರುತ್ತಾರೆ. ಅನೇಕ ಸಂಘರ್ಷಗಳ ನಡುವೆ ಅವರು ತಮ್ಮ ಭಾಷೆ, ಸಂಸ್ಕೃತಿ, ಅನನ್ಯತೆಗಳನ್ನು ಹೇಗೆ ಉಳಿಸಿ, ಬೆಳೆಸಿಕೊಂಡು ಬಂದರು ಎಂಬುದು ಕುತೂಹಲದ ಸಂಗತಿಯಾಗಿದೆ.

ಶಾತವಾಹನರ ನಂತರ ಕದಂಬರು ಅಧಿಕಾರಕ್ಕೆ ಬಂದರು. ಕರ್ನಾಟಕವನ್ನಾಳಿದ ಕನ್ನಡದ ಮೊದಲ ದೊರೆಗಳೆಂದರೆ ಕದಂಬರು. ಸು. ೨೦೦ ವರ್ಷಗಳ ತಮ್ಮ ಆಳ್ವಿಕೆಯಲ್ಲಿ ಇವರು ಕರ್ನಾಟಕ ಮತ್ತು ಭಾರತೀಯ ಸಂಸ್ಕೃತಿಗೆ ಅಮೂಲ್ಯ ಕಾಣಿಕೆ ಸಲ್ಲಿಸಿದ್ದಾರೆ. ಕದಂಬರ ಆಳ್ವಿಕೆ ಬಗೆಗೆ ಬೆಳಕು ಚೆಲ್ಲುವ ಶಾಸನಗಳು ಸಾಕಷ್ಟು ಇವೆ. 'ತಾಳಗುಂದಶಾಸನ', 'ಹಲ್ಮಿಡಿಶಾಸನ', 'ಹಲಸಿಶಾಸನ' ಮುಂತಾದವುಗಳು ಪ್ರಮುಖವು. ಬನವಾಸಿ (ಉತ್ತರ ಕನ್ನಡ) ಇವರ ರಾಜಧಾನಿ. ಶಿವಮೊಗ್ಗ, ಬಳ್ಳಾರಿ, ಬೆಳಗಾವಿ, ಚಿತ್ರದುರ್ಗ ಜಿಲ್ಲೆಗಳು ಇವರ ಆಳ್ವಿಕೆಯ ನೆಲೆಗಳಾಗಿದ್ದವೆಂದು ತಿಳಿಯುತ್ತದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕನ್ನಡದ ಕುರುಹು ಪತ್ತೆ ಹಚ್ಚಲು ಕದಂಬರ ಕಾಲದ 'ಹಲ್ಮಿಡಿಶಾಸನ' ಮೂಲ ಆಕರವೆನಿಸುತ್ತದೆ. ಪ್ರಾಕೃತ ಸಂಸ್ಕೃತ ಭಾಷೆಗಳು ಕನ್ನಡಕ್ಕೆ ಹೊರಳಿದ ಮಹತ್ವದ ಕಾಲಘಟ್ಟವೆಂದು 'ಹಲ್ಮಿಡಿಶಾಸನ'ದಲ್ಲಿನ 'ಇಸಿಲ' ಎಂಬ ಪದಪ್ರಯೋಗವೇ ಸಾಕ್ಷಿಯಾಗಿದೆ. ಕ್ರಿ.ಶ. ೩೪೫–೫೪೦ರ ವರೆಗೆ ಆಳ್ವಿಕೆ ನಡೆಸಿದ ಕದಂಬರು ೪ನೇ ಶತಮಾನದ ಪ್ರಾರಂಭಕ್ಕಾಗಲೇ ಕನ್ನಡ ಬೆಳವಣಿಗೆಗೆ ಸಹಕಾರಿಯಾದ ವಾತಾವರಣ ಒದಗಿಸಿದ್ದರೆಂದು ತಿಳಿಯುತ್ತದೆ. ಬ್ರಾಹ್ಮಣ ವಂಶದವರಾದ ಇವರು 'ಮಯೂರವರ್ಮ'ನು 'ಶರ್ಮ'ನಾದಂದಿನಿಂದ ಕ್ಷತ್ರಿಯರಾಗಿದ್ದರು ಎಂದು ಇತಿಹಾಸ ಹೇಳುತ್ತದೆ. 'ಚಂದ್ರವಳ್ಳಿಶಾಸನ'ದಲ್ಲಿ ಆ ಶಾಸನದ ಕತೃವಿನ ಬಗೆಗೆ ಹೇಳುವಾಗ, 'ಕುಪಣಚಮ' ಎಂಬ ಶಿಲ್ಪಿಯಿಂದ ರಚಿತವಾದದ್ದು ಎಂದು ತಿಳಿಯುತ್ತದೆ. ಹೈದರಾಬಾದ್ ಕರ್ನಾಟಕದ ಕೊಪ್ಪಳದ 'ಚಮ' ಎಂಬುವವನಿಂದ ರಚಿತವಾದ ಮೊದಲ ಸಾಹಿತ್ಯ 'ಚಂದ್ರವಳ್ಳಿಶಾಸನ'ವೆಂದು ಇದರಿಂದ ಊಹಿಸಲು ಸಾಧ್ಯವಾಗುತ್ತದೆ. ಹಾಗಾಗಿ ಹೈದರಾಬಾದ್ ಕರ್ನಾಟಕ ಭಾಗದ ಅನೇಕ ಲೇಖಕರು ಪ್ರಾಚೀನ ಕಾಲದಿಂದಲೂ ಸಾಹಿತ್ಯ ರಚನೆಯಲ್ಲಿ ತೊಡಗಿದ್ದರೆಂಬುದು ಇದರಿಂದ ತಿಳಿಯುತ್ತದೆ. 'ಶಿವಮೊಗ್ಗ ಒಳಗೊಂಡಂತೆ ದಕ್ಷಿಣದಲ್ಲಿ ಕಂಚಿಯವರೆಗೂ ಉತ್ತರದಲ್ಲಿ ಮಾಳ್ವದಿಂದ ಗಯಾ ಕ್ಷೇತ್ರದವರೆಗೂ ಹರಡಿರಬಹುದು. ಈ ಸಾರ್ವಭೌಮಾಧಿಕಾರ ಸ್ಥಾಪನೆಯ ನೆನಪಿಗಾಗಿ ಅಶ್ವಮೇಧಯಾಗವನ್ನು ಮಾಡಿದನು'[೮] ಎಂಬುದಾಗಿ ಡಾ. ಸಾಲತೊರೆ ಅಭಿಪ್ರಾಯ ವ್ಯಕ್ತಪಡಿಸಿರುವುದು ಕದಂಬರ ಗಡಿರೇಖೆಗಳನ್ನು ತೋರಿಸಿದಂತಿದೆ. ಸುಮಾರು ೨೧೫ ವರ್ಷಗಳ ಕಾಲ ಸುಧೀರ್ಘವಾಗಿ ಆಡಳಿತ ನಡೆಸಿದ ಕಂದಬರು ಎಲ್ಲಾ ಕನ್ನಡಿಗರನ್ನು ಒಂದೇ ಆಡಳಿತದ ಕಕ್ಷೆಗೆ ತರಲು ಪ್ರಯತ್ನಿಸಿದರು. ಆದರೆ ಅದು ಸಾಧ್ಯವಾಗಲಿಲ್ಲ. ಪ್ರಾಕೃತ ಭಾಷೆಯ ಪ್ರಾಬಲ್ಯವನ್ನು ಹಿಂದಿಕ್ಕುವ ಸಂದರ್ಭದಲ್ಲಿ ಸಂಸ್ಕೃತ ಭಾಷೆಗೆ ಪೈಪೋಟಿ ಎಂಬಂತೆ ಕನ್ನಡ ಭಾಷೆಯು ರಾಜಾಶ್ರಯ ಪಡೆದು ತನ್ನ ಅನನ್ಯತೆಯನ್ನು ಸಾಬೀತುಮಾಡಲು ಹವಣಿಸಿದ್ದು ಕದಂಬರ ಕಾಲದ ವಿಶೇಷವೆನ್ನಬಹುದಾಗಿದೆ.

'ಹಲ್ಮಿಡಿಶಾಸನ' ಮತ್ತು ಕನ್ನಡ ಸಂಬಂಧವನ್ನು ಕುರಿತು ಎಂ.ಎಚ್. ಕೃಷ್ಣ ಅವರ ಮಾತುಗಳು ಈ ಸಂದರ್ಭದಲ್ಲಿ ಮುಖ್ಯವೆನಿಸುತ್ತವೆ. (ಎಂ.ಎಚ್. ಕೃಷ್ಣ ಅವರ ಮಾತುಗಳನ್ನು ರಂ.ಶ್ರೀ. ಮುಗಳಿ ಅವರು ಹೀಗೆ ದಾಖಲಿಸುತ್ತಾರೆ.) 'ಶಾಸನಗದ್ಯದಲ್ಲಿ ಹಲ್ಮಿಡಿಯ ಶಿಲಾಲೇಖ ಎಲ್ಲಕ್ಕಿಂತ ಹಳೆಯದು. ಅದರ ಅಭ್ಯಾಸದಿಂದ ನಾಲ್ಕು ಸಂಗತಿಗಳನ್ನು ಕಂಡುಹಿಡಿಯಲಾಗಿದೆ.

೧. ಕನ್ನಡ–ಸಂಸ್ಕೃತ ಸಂಬಂಧ ಕ್ರಿ.ಶ. ೪೫೦ಕ್ಕೆ ಬಹಳ ಹಿಂದೆಯೇ ಆರಂಭವಾಗಿ ಸಂಸ್ಕೃತ ಸಮಸ್ತ ಪದಗಳಿಂದ ಕೂಡಿದ ಪ್ರೌಢವಾದ ಕನ್ನಡವು ೫ನೇ ಶತಮಾನದ ವೇಳೆಗೆ ಚೆನ್ನಾಗಿ ಬಳಕೆಗೆ ಬಂದಿತ್ತು.

೨. ಜನಬಳಕೆಯಲ್ಲಿ ಶುದ್ಧ ಕನ್ನಡ ಪದಗಳಿದ್ದರೂ ಪಂಡಿತರ ಬರವಣಿಗೆಗಳಲ್ಲಿ ಸಂಸ್ಕೃತ ಪ್ರಚುರವಾದ ಭಾಷೆಯಿತ್ತು.

೩. ಪೂರ್ವದ ಕನ್ನಡ ಪದರೂಪಗಳು ವ್ಯಾಕರಣ ನಿಯಮಗಳಿಗೆ ಕಟ್ಟುಬಿದ್ದು ಕನ್ನಡವು ಚೆನ್ನಾಗಿ ಬಲಿತ ಭಾಷೆಯಾಗಿತ್ತು.

೪. ಇದಕ್ಕೆ ಈ ಭಾಷೆಯೂ ಅದರ ವಾಙ್ಮಯವೂ ಕೆಲವು ಶತಮಾನಗಳ ಹಿಂದೆಯೇ ಬೆಳೆದು ಬದುಕಿ ಬಾಳಿರಬೇಕು."[೯]

ಮೇಲಿನ ಈ ಮಾತುಗಳು ಕನ್ನಡದ ಪ್ರಾಚೀನತೆಯನ್ನು ತಿಳಿಸುತ್ತವೆ ಮತ್ತು ಅದರ ಬೆಳವಣಿಗೆಗೆ ಸಹಕಾರಿಯಾಗಿರುವ ಭಾಷೆಗಳ ಸಂಬಂಧ ಅವಶ್ಯವಾಗಿತ್ತೆಂಬುದನ್ನು ಒತ್ತಿ ಹೇಳುತ್ತವೆ. ಪ್ರಬಲವಾದ ಭಾಷೆಯೊಂದು ತನ್ನ ಉನ್ನತಿಯ ಕಾಲದಲ್ಲಿ ದುರ್ಬಲ ಭಾಷೆಯನ್ನು ಮುನ್ನೆಲೆಗೆ ತರುವಲ್ಲಿ ಹೇಗೆ ಸಹಾಯಕಾರಿಯಾಗುತ್ತದೆ? ಅಲ್ಲದೇ ಸಂಸ್ಕೃತ ತನ್ನ ಬಿಗಿ ಹಿಡಿತವನ್ನು ಸಡಿಲಿಸುತ್ತ ಬಂದಿದೆ ಎಂದರೆ ೧೦ನೇ ಶತಮಾನದಲ್ಲಿಯೂ ಅದು ಅಸ್ತಿತ್ವದಲ್ಲಿ ಇತ್ತಲ್ಲ? ಎಂಬ ಪ್ರಶ್ನೆಗಳು ಸಹಜವಾಗಿ ಬರುತ್ತವೆ. ವಿದ್ವಾಂಸರ ಅಭಿಪ್ರಾಯದಲ್ಲಿ ಸಹಜವಾಗಿ ಇಂತಹ ಗುಮಾನಿಗಳು ಏಳುತ್ತವೆ. ಆದ್ದರಿಂದ ಈ ಮಾತುಗಳನ್ನು ನಂಬುವುದು ತುಸು ಕಷ್ಟ. ಕನ್ನಡ ಒಂದು ಭಾಷೆಯಾಗಿ ಬೆಳವಣಿಗೆ ಆಗಿತ್ತೆಂದರೆ ಅಲ್ಲಿನ ಪ್ರಭುತ್ವ ಅದಕ್ಕೆ ಸಹಕರಿಸಿರಬಹುದು. ಅದೇನೆ ಇರಲಿ ೪೫೦ರ ಹೊತ್ತಿಗೆ ಕದಂಬರು ಕನ್ನಡವನ್ನು ತಮ್ಮ ವ್ಯವಹಾರದ ಆಡಳಿತ ಭಾಷೆಯನ್ನಾಗಿ ರೂಢಿಸಿಕೊಂಡಿದ್ದರು ಎಂಬುದಂತೂ ಸತ್ಯ.

ಕದಂಬರ ನಂತರ ಬಾದಾಮಿಯ ಚಾಲುಕ್ಯರು ಕ್ರಿ.ಶ.ಸು. ೫೪೦ರಿಂದ ಆಳ್ವಿಕೆ ಪ್ರಾರಂಭಿಸಿದರು. 'ಚಲ್ಕಿ' ಎಂಬ ವ್ಯವಸಾಯದ ಉಪಕರಣದ ಹೆಸರಿನ ಮೂಲದಿಂದ ಬಂದಿರಬಹುದಾದ 'ಚಾಲುಕ್ಯ' ಶಬ್ದವು ವ್ಯವಸಾಯ ಪ್ರಧಾನ ಕಸುಬನ್ನು ಪ್ರತಿನಿಧಿಸುವುದರಿಂದ ಚಾಲುಕ್ಯರು ಕೃಷಿಕ ವರ್ಗಕ್ಕೆ ಸೇರಿದವರಾಗಿರಬೇಕು ಎಂದು ಊಹಿಸಬಹುದು. ಕನ್ನಡ ಪ್ರಾಂತವನ್ನು ಒಂದು ಮಾಡಿ 'ಕರ್ನಾಟಕ ಬಲ' ಎಂಬ ಸೈನ್ಯ ಕಟ್ಟಿದ ಹಿರಿಮೆ ಬಾದಾಮಿ ಚಾಲುಕ್ಯರಿಗೆ ಸಲ್ಲುತ್ತದೆ. ಇವರ ಕಾಲದಲ್ಲಿ ಹೆಚ್ಚಾಗಿ ಕೋಟೆ ದೇವಾಲಯಗಳು ನಿರ್ಮಾಣವಾದವು. ಇಂದಿಗೂ ಅವುಗಳಿದ್ದು ಕನ್ನಡಿಗರ ಮನಸ್ಸಿನಲ್ಲಿ ಚಾಲುಕ್ಯರು ಅಚ್ಚಳಿಯದಂತಿದ್ದಾರೆ. ದೇವಾಲಯಗಳ ನಿರ್ಮಾಣಕ್ಕೆ ಹೆಚ್ಚಿನ ಗಮನ ನೀಡಿದ ಚಾಲುಕ್ಯರು ಜನರಲ್ಲಿ ದೈವಭಕ್ತಿಯನ್ನು ಮೂಡಿಸಿದರು. 'ದೋ–ಅಬ್' ಪ್ರದೇಶ ಎಂದು ಕರೆಯಲ್ಪಡುವ ಕೃಷ್ಣ ಮತ್ತು ತುಂಗಭದ್ರಾ ನದಿಗಳ ನಡುವಿನ ಪ್ರದೇಶವು

ಚಾಲುಕ್ಯರ ಯುದ್ಧ ಕ್ಷೇತ್ರವಾಗಿತ್ತು. ಖನಿಜಸಂಪತ್ತು, ಬೇಸಾಯ ಯೋಗ್ಯ ಭೂಮಿಯಾದ 'ದೋ-ಅಬ್' ಪ್ರದೇಶಕ್ಕಾಗಿ ಪಲ್ಲವರೊಡನೆ ನಿರಂತರ ಸಂಘರ್ಷ ಮಾಡುತ್ತಿದ್ದರು. ಇವರಲ್ಲಿ ದೈವದ ಬಗೆಗಿನ ನಂಬಿಕೆ ದೇವಾಲಯ ಸಂಸ್ಕೃತಿ ಹುಟ್ಟಿಕೊಂಡ ಬಗೆಯನ್ನು ವಿದ್ವಾಂಸರೊಬ್ಬರು ಈ ಕೆಳಗಿನಂತೆ ವಿಶ್ಲೇಷಿಸುತ್ತಾರೆ.

'ಬಾದಾಮಿ ಚಾಲುಕ್ಯರು ವೈದಿಕ ಮತಕ್ಕೆ ಹೆಚ್ಚು ಮನ್ನಣೆ ನೀಡಿದರು. ಈ ಹೊತ್ತಿಗೆ ದೇವಾಲಯಗಳನ್ನು ನಿರ್ಮಿಸುವ ಸಂಸ್ಕೃತಿ ಬಲಗೊಂಡಿತ್ತು. ಇವರ ಆಳ್ವಿಕೆಯ ಕಾಲಾವಧಿಯಲ್ಲಿ ಐಹೊಳೆ, ಬಾದಾಮಿ, ಪಟ್ಟದಕಲ್ಲು ಸ್ಥಳಗಳಲ್ಲಿ ನೂರಾರು ದೇವಾಲಯಗಳನ್ನು ನಿರ್ಮಿಸಿದರು. ಐಹೊಳೆಯಲ್ಲಿ ಸುಮಾರು ೭೦ ದೇವಾಲಯಗಳಿವೆ ಎಂದು ತಿಳಿಯುತ್ತದೆ. ಶೈವ, ಜೈನ, ವೈಷ್ಣವ ಮತಗಳು ಬೃಹತ್ ದೇವಾಲಯಗಳನ್ನು ಹುಟ್ಟು ಹಾಕಿದವು. ಈ ದೇವಾಲಯಗಳನ್ನು ನಿಭಾಯಿಸಲು ರಾಜರು ಭೂಮಿಗಳನ್ನು ದತ್ತಿಯಾಗಿ ನೀಡಬೇಕಾಯಿತು. ದೇವಾಲಯಗಳು ಹಣ, ಆಸ್ತಿ ಮತ್ತು ಪುರೋಹಿತ ವರ್ಗವನ್ನು ಹೊಂದಿ ಶ್ರೀಮಂತವಾದವು. ಕಾಲಾನಂತರದಲ್ಲಿ ಅವುಗಳ ರಕ್ಷಣೆ, ನಿರ್ವಹಣೆ ಭಾರವಾಯಿತು. ಈ ಭಾರ ಜನಸಾಮಾನ್ಯರ ಮೇಲೆ ಬಿತ್ತು. ಕಲೆ, ಸಾಹಿತ್ಯ, ಸಂಸ್ಕೃತಿಗಳ ಪೋಷಣೆಗೆ ಬೇಕಾದ ಹಣವನ್ನು ರೈತಾಪಿವರ್ಗದಿಂದ ಕರದ ರೂಪದಲ್ಲಿ ಪಡೆಯುತ್ತಿದ್ದರು. ಸಾಮಾಜಿಕವಾಗಿ 'ಉನ್ನತ'ರೆನಿಸಿಕೊಂಡ ಬ್ರಾಹ್ಮಣರು ಈ ಕರಗಳಿಂದ ಮುಕ್ತರಾಗಿದ್ದರು. ವ್ಯಾಪಾರಸ್ಥರು ಶ್ರೀಮಂತರಾಗಿದ್ದ ಅವರು ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡಿದ್ದರು. 'ಐಯ್ಯಾವೊಳೆ ಐನೂರ್ವರು' ಎಂಬ ಪ್ರತಿಷ್ಠಿತ ಸಂಸ್ಥೆಯು ಐಹೊಳೆಯಲ್ಲಿತ್ತು. ಎಣ್ಣೆ, ಅರಿಸಿನ, ಸಕ್ಕರೆ ಮುಂತಾದ ನಿತ್ಯ ಬಳಕೆಯ ವಸ್ತುಗಳನ್ನು ಮಾರಾಟ ಮಾಡುವ ಅಂಗಡಿಗಳು ಅಲ್ಲಿ ಇರುತ್ತಿದ್ದವು. ಈ ವ್ಯಾಪಾರಸ್ಥರು ಜೈನರಾಗಿದ್ದರು. ವಾರಕ್ಕೆ ಒಮ್ಮೆ ಸಂತೆಗಳು ಹುಟ್ಟಿಕೊಂಡವು. ಈ ಸಂತೆಗಳು ವಣಿಕರಿಂದ ನಿಯಂತ್ರಿತಗೊಂಡಿರುತ್ತಿದ್ದವು. 'ಅಯ್ಯಾವೊಳೆ ಐನೂರ್ವರು' ಎಂಬ ವರ್ತಕರ ಸಂಘವು ಬಾದಾಮಿ ಚಾಲುಕ್ಯರ ಕಾಲದಿಂದ ವಿಜಯನಗರ ರಾಜ್ಯದವರೆಗೆ ತನ್ನ ವ್ಯಾಪಾರ ಚಟುವಟಿಕೆಗಳನ್ನು ನಡೆಸಿರುವುದು ಶಾಸನಗಳಲ್ಲಿ ಮಾಹಿತಿ ಸಿಗುತ್ತದೆ.'[೧೦]

ವಿದ್ವಾಂಸರ ಮೇಲಿನ ಮಾತುಗಳು ದೇವಾಲಯ ಸಂಸ್ಕೃತಿಯ ಉಗಮ ಮತ್ತು ಅದರಿಂದಾದ ಪ್ರಭಾವಗಳನ್ನು ಅನಾವರಣಗೊಳಿಸುತ್ತವೆ. ದೇವಾಲಯ ನಿರ್ಮಾಣಕ್ಕಾಗಿ ಕರ ವಸೂಲಿಯ ಪದ್ಧತಿ, ಜನರಿಗಾದ ಹೆಚ್ಚುವರಿ ಆರ್ಥಿಕ ತೊಂದರೆ, ಪ್ರಭುತ್ವದ ಗಮನಕ್ಕೆ ಬಾರದೇ ಅದು ಮೂರು ಶತಮಾನಗಳ ಕಾಲ ಪ್ರತಿರೋಧಗೊಳ್ಳದೇ ಇದ್ದದ್ದು ಪ್ರಭುತ್ವದ ಬಿಗಿ ಹಿಡಿತವನ್ನು ತಿಳಿಸಿಕೊಡುತ್ತದೆ. 'ಐಯ್ಯಾವೊಳೆ ಐನೂರ್ವರು' ಕರ್ನಾಟಕವಷ್ಟೇ ಅಲ್ಲದೆ ಕೇರಳ ತಮಿಳುನಾಡುವಿನ ಸದಸ್ಯರನ್ನು ಒಳಗೊಂಡಿತ್ತು. ಎಂಟನಾಡ ಪದಿನರ್ವರು, ಗವರೆಗಳು, ಅಂಕಕಾರರು, ಗಾತ್ರಿಗಳು, ಸೆಟ್ಟಿಯರು, ಬೀರರು, ಗಾದಿಗರು, ಗಾವುಂಡರು ಇವರೆಲ್ಲ ಸಂಘದ ಸದಸ್ಯರಾಗಿದ್ದರೆಂದು ತಿಳಿಯುತ್ತದೆ. '೧೧೫೦ರ ಬಳ್ಳಿಗಾವೆಶಾಸನದಲ್ಲಿ 'ಐಯ್ಯಾವೊಳೆ ಐನೂರ್ವರು' ಸಂಘದ ಸದಸ್ಯರು ವೀರಬಣಂಜು ಧರ್ಮ ಪ್ರತಿಪಾಳರು, ಭಗವತೀಲಬ್ಧ ವರಪ್ರಸಾದರು, ಬ್ರಹ್ಮ ವಿಷ್ಣು ಮಹೇಶ್ವರ

ಆರಾಧಕರು ಎಂಬುದಾಗಿ ಕರೆದುಕೊಂಡಿರುವುದನ್ನು ದಾಖಲಿಸುತ್ತದೆ.[೧೧] ಹಾಗಾಗಿ ಕೇವಲ ವರ್ತಕರ ಹಿತದೃಷ್ಟಿಯಿಂದ ದೇವಾಲಯಗಳು ನಿರ್ಮಾಣ ಆದವೆ ಹೊರತು ಜನಸಾಮಾನ್ಯರ ಹಿತದೃಷ್ಠಿಯಿಂದಲ್ಲ ಎಂಬ ಅಂಶವನ್ನು ಇದರಿಂದ ಗ್ರಹಿಸಬಹುದಾಗಿದೆ.

೧೨ನೇ ಶತಮಾನದಲ್ಲಿ ನಡೆದ 'ವಚನ ಚಳವಳಿ' ಇಂತಹ ದೇವಾಲಯ ಸಂಸ್ಕೃತಿಯ ವಿರೋಧವಾಗಿಯೇ ನಡೆದಂತಹುದಾಗಿದೆ. ದೇವಾಲಯಗಳ ನಿರ್ಮಾಣದಲ್ಲಿ ಜನರು ಕೊಟ್ಟ ದೇಣಿಗೆ ರೂಪದ ಕರ ಅಲ್ಲಿಗೆ ಮುಕ್ತಾಯವಾಗುತ್ತಿರಲಿಲ್ಲ. ಬದಲಾಗಿ ದಿನನಿತ್ಯ ದೇವಾಲಯಕ್ಕೆ ಬರುವ ಭಕ್ತರು ಕಾಯಿ, ಹೂ, ಕರ್ಪೂರ, ಅರಿಶಿನ ಇತ್ಯಾದಿ ವಸ್ತುಗಳನ್ನು ಕೊಂಡೊಯ್ಯುವ ಮೂಲಕ ಹರಕೆ ತೀರಿಸುವ ನೆವದಲ್ಲಿ ದಿನನಿತ್ಯ ಕರ ತೆರುವಂತಾಯಿತು. ಇದು ಜನಸಾಮಾನ್ಯರಿಗೆ ಹೆಚ್ಚುವರಿಯಾದ ತೊಂದರೆ ಎನಿಸಿತು. ಇದನ್ನು 'ವಚನ ಚಳವಳಿ' ಪ್ರಬಲವಾಗಿ ವಿರೋಧಿಸಿತು. ಆ ನಿಟ್ಟಿನಲ್ಲಿ ಅದು ಪರ್ಯಾಯ ಭಕ್ತಿಮಾರ್ಗವನ್ನು ಜನರಿಗೆ ತೋರಿಸಿಕೊಟ್ಟಿತು. 'ಉಳ್ಳವರು ಶಿವಾಲಯವ ಮಾಡುವರು; ನಾನೇನು ಮಾಡುವೆ? ಬಡವನಯ್ಯಾ, ಎನ್ನ ಕಾಲೇಕಂಬ ದೇಹವೇ ದೇಗುಲ, ಶಿರ ಹೊನ್ನ ಕಳಸವಯ್ಯ ಕೂಡಲಸಂಗಮದೇವಾ, ಕೇಳಯ್ಯ! ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲಾ' 'ದೇಹದೊಳಗೆ ದೇವಾಲಯವಿದ್ದು, ಮತ್ತೇ ಬೇರೆ ದೇವಾಲಯವೇಕೆ? ಎರಡಕ್ಕೆ ಹೇಳಲಿಲ್ಲಯ್ಯ! ಗುಹೇಶ್ವರ ನೀನು ಕಲ್ಲಾದರೆ ನಾನೇನುಪ್ಪೆನು?'[೧೨] ಬಸವಣ್ಣ ಅಲ್ಲಮಪ್ರಭುಗಳ ಈ ಮಾತುಗಳು ದೇವಾಲಯ ಸಂಸ್ಕೃತಿಗೆ ಪರ್ಯಾಯವಾಗಿ ಹೇಳಿದವುಗಳಾಗಿವೆ. ಜನಸಾಮಾನ್ಯರಿಗೆ ಹೊರೆ ಎನಿಸುವ ಇಂತಹ ದೇವಾಲಯಗಳಿಂದ ಯಾವುದೇ ಪ್ರಯೋಜನವಿಲ್ಲ. ಅದರ ಬದಲಾಗಿ ಮನಸ್ಸಿನ ಶುದ್ಧಿಯ ಅಗತ್ಯತೆ ಇದೆ. ಅದರಲ್ಲಿಯೇ ದೈವಭಕ್ತಿ ಪಾರಮ್ಯವನ್ನು ತೋರಬೇಕಾದ ಅನಿವಾರ್ಯತೆಯನ್ನು ವಚನಕಾರರು ಒತ್ತಿ ಹೇಳಿದರು.

ಚರಿತ್ರೆಯಲ್ಲಿ ಚಾಲುಕ್ಯರು ದೇವಾಲಯ ಸಂಸ್ಕೃತಿಯ ಸ್ಥಾಪಕರಾಗಿ ಕಂಡುಬರುತ್ತಾರೆ. ಒಂದನೇ ಪುಲಿಕೇಶಿ, ಇಮ್ಮಡಿ ಪುಲಿಕೇಶಿ, ೨ನೇ ವಿಕ್ರಮಾದಿತ್ಯ ಇವರು ಚಾಲುಕ್ಯರ ಪ್ರಮುಖ ಅರಸರು. ಬಾದಾಮಿ ಚಾಲುಕ್ಯರ ಕಾಲಾವಧಿಯಲ್ಲಿ ಅಪಾರ ಸಾಹಿತ್ಯ ಸೃಷ್ಟಿಯಾಯಿತು. ಚಂದ್ರಾದಿತ್ಯನ ಹೆಂಡತಿ, ವಿಜಯ ಭಟ್ಟಾರಿಕೆ, 'ಕೌಮುದಿಮಹೋತ್ಸವ' ಎಂಬ ಸಂಸ್ಕೃತ ನಾಟಕವನ್ನು ರಚಿಸಿದಳು. ಅದು ಪಾಟಲಿಪುತ್ರದ ರಾಜಕುಮಾರ ಕಲ್ಯಾಣವರ್ಮ ಹಾಗೂ ಮಥುರಾದ ರಾಜಕುಮಾರಿ ಕೀರ್ತಿಮತಿಯ ವಿವಾಹವನ್ನು ವರ್ಣಿಸುತ್ತದೆ. ಇಮ್ಮಡಿ ಪುಲಿಕೇಶಿಯ ಆಸ್ಥಾನದಲ್ಲಿದ್ದ ಪ್ರಖ್ಯಾತ ಕವಿ ಎಂದರೆ ರವಿಕೀರ್ತಿ. ಈತ ಐಹೊಳೆ ಪ್ರಶಸ್ತಿಯಲ್ಲಿ (ಶಾಸನ) ತನ್ನ ಪಾಂಡಿತ್ಯ ಪ್ರದರ್ಶಿಸಿದ್ದಾನೆ. ಚಾಲುಕ್ಯರ ಅವಧಿಯಲ್ಲಿ ಕನ್ನಡ ಭಾಷೆಯಲ್ಲಿ ರಚಿಸಿದ ಯಾವುದೇ ಕೃತಿಗಳು ಹೊರಬಂದ ಅಂಶ ತಿಳಿದುಬರುವುದಿಲ್ಲ. ಆದರೂ ಕೆಲವು ಶಾಸನಗಳಲ್ಲಿ ಸಾಹಿತ್ಯಕ ಅಂಶ ಹಾಗೂ ಕೃತಿಗಳಲ್ಲಿ ಪ್ರೌಢಿಮೆಗಳ ಗುಣಗಳು ಕಾಣಬಹುದಾಗಿದೆ. ಅಂತಹ ಶಾಸನಗಳಲ್ಲಿ ಬಾದಾಮಿಯ 'ಐಹೊಳೆ ಶಾಸನ' 'ಕಪ್ಪೆಅರಭಟ್ಟನ' ಕನ್ನಡ ಶಾಸನ ಪ್ರಮುಖವಾದವುಗಳು.

ಬಾದಾಮಿ ಚಾಲುಕ್ಯರ ನಂತರ ಕಂಡುಬರುವ ಪ್ರಮುಖ ರಾಜಮನೆತನ ಮಾನ್ಯಖೇಟ (ಮಳಖೇಡ)ದ ರಾಷ್ಟ್ರಕೂಟರು. ಇವರು ಸುಮಾರು ಎರಡು ಶತಮಾನಗಳ ಕಾಲ (ಕ್ರಿ.ಶ.೮-೧೦ನೇ ಶತಮಾನ) ಆಡಳಿತ ಮಾಡಿ ಕನ್ನಡ ಸಾಹಿತ್ಯದ ಅಧಿಕೃತ ವಕ್ತಾರರಾಗಿ ಚರಿತ್ರೆಯಲ್ಲಿ ಬಿಂಬಿತರಾಗಿದ್ದಾರೆ. ವೈಭವಯುತ ಸಾಮ್ರಾಜ್ಯ ಸ್ಥಾಪಿಸಿ ಕನ್ನಡ ಸಾಹಿತ್ಯ, ಸಂಸ್ಕೃತಿ, ನಾಡು, ನುಡಿಗೆ ರಾಷ್ಟ್ರಕೂಟರು ಸಲ್ಲಿಸಿದ ಸೇವೆ ಅವಿಸ್ಮರಣೀಯವಾದುದಾಗಿದೆ. 'ಲಟ್ಟಲೂರು ಪುರವರಾಧೀಶ್ವರರು' ಎಂದು ಸಂಭೋಧಿತರಾಗಿರುವ ರಾಷ್ಟ್ರಕೂಟರ ಮೂಲಸ್ಥಾನವು ಈಗಿನ ಮಹಾರಾಷ್ಟ್ರದ ಉಸ್ಮಾನಾಬಾದ್ ಜಿಲ್ಲೆಯ ಲಾತೂರು ಎಂದು ನಂಬಿದ್ದರೂ, ಅವರನ್ನು ಕನ್ನಡ ಪ್ರದೇಶದ ಮಾನ್ಯಖೇಟದವರೇ ಎಂದು ಹೇಳಲು ಪ್ರಬಲವಾದ ಚರಿತ್ರೆಯ ಆಧಾರಗಳಿವೆ. ಅವರ ಎಲ್ಲ ಶಾಸನಗಳು ಕನ್ನಡದಲ್ಲಿರುವುದು, ಕನ್ನಡದ ಮಹತ್ವದ ಕೃತಿ ಕವಿರಾಜಮಾರ್ಗ ಇವರ ಅವಧಿಯಲ್ಲಿಯೇ ರಚಿತವಾಗಿರುವುದು ಪ್ರಮುಖ ಆಧಾರಗಳೆನ್ನಬಹುದು.

'ಕಾವೇರಿಯಿಂದಾ-ಆ-ಗೋದಾವರಿವರಮ್-ಇರ್ದ-ನಾಡು-ಅದು-ಆ-ಕನ್ನಡದೊಳ್-ಬಾವಿಸಿದ ಜನಪದ; ಇದರಲ್ಲಿ ಕಿಸುವೊಳಲು-ಕೊಪಣ-ಪುಲಿಗೆರೆ-ಒಕ್ಕುಂದ ಈ ಊರುಗಳ ನಡುವಣ ಪ್ರದೇಶವು ಕನ್ನಡದ ತಿರುಳುಗಳು'[೧೩] ಎಂದು ಹೇಳಿರುವುದು ಕವಿರಾಜಮಾರ್ಗ ಕಾಲಕ್ಕಿದ್ದ ಗಡಿರೇಖೆಗಳನ್ನು ಖಚಿತಪಡಿಸುತ್ತವೆ. ಅಲ್ಲದೇ ಇಂದಿನ ಹೈದರಾಬಾದ್ ಕರ್ನಾಟಕ ಎಂದು ಗುರುತಿಸುವ ಪ್ರದೇಶದ ಕೊಪ್ಪಳ, ಆಗಿನ ಕಾಲದಲ್ಲಿ ಕನ್ನಡದ ಏಳಿಗೆಯಲ್ಲಿ ಮಹತ್ವದ ಪಾತ್ರವಹಿಸಿದ್ದು ತಿಳಿಯುತ್ತದೆ. ಅಲ್ಲದೇ ಸುತ್ತಣ ಪ್ರದೇಶಗಳಾದ ಪಟ್ಟದಕಲ್ಲು ಲಕ್ಕೇಶ್ವರ, ಒಕ್ಕುಂದ, ನಗರಗಳೂ ಸಹ ಆ ವ್ಯಾಪ್ತಿಗೆ ಒಳಪಟ್ಟಿದ್ದವು ಎಂದು ತಿಳಿಯುತ್ತದೆ.

ಕವಿರಾಜಮಾರ್ಗದ ಉಗಮಕ್ಕೆ ಕಾರಣಗಳನ್ನು ಹುಡುಕುತ್ತಾ ಹೋದಾಗ ಅನೇಕ ಹೊಳಹುಗಳು ದೊರೆಯುತ್ತವೆ. ೭ನೇ ಶತಮಾನದ ಅಂತ್ಯದವರೆಗೆ ಸಂಸ್ಕೃತದೊಂದಿಗೆ ಬೆರೆತು ಸಾಹಿತ್ಯ ಕೃಷಿ ಮಾಡಿಕೊಂಡು ಬಂದಿದ್ದ ಕನ್ನಡವು ತನ್ನ ಅನನ್ಯತೆಯನ್ನು ಕಟ್ಟಿಕೊಳ್ಳುವ ಕಾಲ ಒದಗಿ ಬಂದಿದ್ದು ರಾಷ್ಟ್ರಕೂಟರೆಂಬ ಹಿಂದೂ ಅರಸರ ಕಾಲದಲ್ಲಿ. ರಾಷ್ಟ್ರಕೂಟರು ಕನ್ನಡಿಗರಾಗಿ ತಮ್ಮತನವನ್ನು ತಮ್ಮ ಸಂಸ್ಕೃತಿ, ನಾಡು, ನುಡಿಗಳಿಗೆ ಪ್ರಬಲವಾದ ಆಧಾರಗಳನ್ನು, ಗಟ್ಟಿಯಾದ ಇತಿಹಾಸವನ್ನು ನಿರ್ಮಿಸಿಕೊಡಲು ಪ್ರಯತ್ನಿಸಿದ್ದರ ಫಲವೇ 'ಕವಿರಾಜಮಾರ್ಗ'ವೆನ್ನಬಹುದು. ಆವರೆಗೆ ಇಲ್ಲದ ಅಭಿಮಾನ ಕನ್ನಡದ ಈ ಕೃತಿಯಲ್ಲಿ ವ್ಯಕ್ತವಾಗಿದೆ ಎಂದರೆ ಅಲ್ಲಿ ಕನ್ನಡಿಗರನ್ನು ಒಂದುಗೂಡಿಸುವ ಹುರಿದುಂಬಿಸುವ ಕೆಲಸ ನಡೆದಿದೆ ಎಂತಲೇ ಅರ್ಥ. ಆ ನಿಟ್ಟಿನಲ್ಲಿ ಆ ಕೃತಿಯೆ ಕನ್ನಡಿಗರನ್ನು ಕುರಿತು ಈ ಕೆಳಗಿನಂತೆ ಹೇಳಿದ್ದು ಗಮನಿಸಬಹುದಾಗಿದೆ.

"ಪದನರಿದು ನುಡಿಯಲೂ ನುಡಿ
ದುದನರಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುರಿತೋ
ದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್"[೧೪]

ಎಂದು ಹೇಳಲಾಗಿದೆ. ಹೀಗೆ ಕನ್ನಡ ಜನವರ್ಗದ ಬಗೆಗೆ ಅಭಿಮಾನಭರಿತ ಮಾತುಗಳನ್ನಾಡಿ ಅಲ್ಲಿನ ಜನಸಮುದಾಯಕ್ಕೆ ಒಂದು ಭಾಷಿಕ ಅಭಿಮಾನ ಮೂಡಿಸುವ ಅಗತ್ಯತೆ ಕವಿರಾಜಮಾರ್ಗಕಾರನಿಗೆ ಇತ್ತು. ಅದರಿಂದ ಕನ್ನಡ ಭಾಷೆಯೊಂದು ಇದೆ. ಅದರತ್ತ ಎಲ್ಲರೂ ವಾಲಬೇಕಾದ ಅನಿವಾರ್ಯತೆ ಇದೆ ಎನ್ನುವ ನಿಟ್ಟಿನಲ್ಲಿ ಕೃತಿಕಾರನು ನಾಡವರ ಬಗೆಗೆ, ನುಡಿಯ ಬಗೆಗೆ ಅಭಿಮಾನದ ಮಾತುಗಳಾಡಿದ್ದಾನೆ ಎಂದೆನಿಸುತ್ತದೆ. ಆದರೂ ಕವಿ ಆಡಿದ 'ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತಮತಿಗಳ್' ಎಂಬ ಮಾತು ಕೇವಲ ಅಭಿಮಾನದ ಉತ್ಪ್ರೇಕ್ಷೆಯ ಮಾತುಗಳೆನಿಸುತ್ತವೆ. ಕನ್ನಡ ತನ್ನ ತನದ ಚಹರೆಯನ್ನು ಕಟ್ಟಿಕೊಳ್ಳಬೇಕಾದರೆ ಇಂತಹ ಅಭಿಮಾನದ ಮಾತುಗಳ ಅವಶ್ಯಕತೆ ಇತ್ತೆಂದು ಕಾಣುತ್ತದೆ. ಆದುದರಿಂದ ಕವಿರಾಜಮಾರ್ಗಕಾರ ಆ ಮಾತುಗಳಾಡಿ ಕನ್ನಡಿಗರಲ್ಲಿ ಭಾಷಾ ಅಭಿಮಾನವನ್ನು ತುಂಬುವ, ಆ ಮೂಲಕ ಅವರನ್ನು ಪ್ರೋತ್ಸಾಹಿಸುವ ಕಾರ್ಯಮಾಡಿದ್ದಾನೆ. ಈ ಕಾರ್ಯ ಪ್ರಸ್ತುತ ಒಣ ಕನ್ನಡಾಭಿಮಾನ ಹೇಳುವ, ಕೇವಲ ಸರ್ಕಾರಿ ಸವಲತ್ತುಗಳನ್ನು ಪಡೆಯಲು ಆಡುವ ಕೆಲಢೋಂಗಿಗಳಿಗೆ ಮಾದರಿಯಾಗಿದೆ.

ಈಗಿನ ಹೈದರಾಬಾದ್ ಕರ್ನಾಟಕ ಪ್ರಾಂತವು ರಾಷ್ಟ್ರಕೂಟರ ಆಡಳಿತದಿಂದಲೂ ಎಲ್ಲ ಚಟುವಟಿಕೆಗಳ ಮುಖ್ಯ ಸ್ಥಳವಾಗಿ ಕಂಡುಬರುತ್ತದೆ. ಪರದೇಶದ ವ್ಯಾಪಾರಿಗಳನ್ನು ಆಕರ್ಷಿಸಿದ್ದು ಕನ್ನಡದ ವೈಭವವನ್ನು ಉಚ್ಚಮಟ್ಟಕ್ಕೆ ಏರಿಸಿದ್ದು, ನೃಪತುಂಗನ ಆಳ್ವಿಕೆ, ಕನ್ನಡ ಭಾಷೆ, ಸಾಹಿತ್ಯ, ಜನಾಂಗ, ಧರ್ಮ, ಒಟ್ಟಿನಲ್ಲಿ ಸುಸಂಸ್ಕೃತ ಜೀವನಕ್ಕೆ ಬೇಕಾದ ಎಲ್ಲ ಬಗೆಯ ಕುರುಹುಗಳನ್ನು ನೃಪತುಂಗನ ಕವಿರಾಜಮಾರ್ಗದಲ್ಲಿ ಕಾಣಬಹುದಾಗಿದೆ. ಒಂದನೆ ಕೃಷ್ಣನು ಎಲ್ಲೋರದಲ್ಲಿ ಕಟ್ಟಿಸಿದ ಕೈಲಾಸ ದೇವಾಲಯ ಕನ್ನಡಿಗರ ಲಲಿತಕಲೆಯ, ಕುಶಲತೆಯ ಪ್ರತೀಕದಂತೆ ಇಂದಿಗೂ ಇರುವುದನ್ನು ಕಾಣಬಹುದಾಗಿದೆ.

ರಾಷ್ಟ್ರಕೂಟರ ಕಾಲದ ಮತ್ತೊಂದು ಮಹತ್ವದ ಕೃತಿ 'ವಡ್ಡಾರಾಧನೆ'. ಇದರ ಕರ್ತೃ ಶಿವಕೋಟ್ಯಾಚಾರ್ಯ ಮತ್ತು ಭ್ರಾಜಿಷ್ಣು ಎಂಬ ದ್ವಂದ್ವವಿದೆ. ಶಿವಕೋಟ್ಯಾಚಾರ್ಯ ಬಳ್ಳಾರಿಯ ಕೊಗಳಿ ಮತ್ತು ಭ್ರಾಜಿಷ್ಣು ಬೀದರಿನ ಹಳ್ಳಿಖೇಡದವನೆಂದು ನಂಬಲಾಗಿದೆ. ಹಾಗೆ ನಂಬಿರುವ ಈ ಎರಡೂ ಪ್ರದೇಶಗಳು ಹೈದರಾಬಾದ್ ಕರ್ನಾಟಕ ಪ್ರಾಂತದ ಭಾಗಗಳೇ ಆಗಿವೆ. ೧೯ ಜೈನ ಕೇವಲಿಗಳ ಜನ್ಮಾಂತರಗಳು, ಭವಾವಳಿಗಳ ಕತೆಗಳನ್ನೊಳಗೊಂಡ ಈ ಕೃತಿಯು ಜೈನಧರ್ಮದ ಕರ್ಮಾನುಸಾರ ವ್ಯಕ್ತಿ ಪಡೆಯುವ ಫಲವನ್ನು ಕುರಿತು ಹೇಳುತ್ತದೆ ಮತ್ತು ಅಹಿಂಸಾ ತತ್ವವನ್ನು ಸಾರುತ್ತದೆ. ಇದಲ್ಲದೆ ಅಸಗ, ಗುಣವರ್ಮ, ಗುಣನಂದಿ, ಜಯಕೀರ್ತಿ ಮೊದಲಾದ ಕವಿಗಳು ರಾಷ್ಟ್ರಕೂಟರ ಆಡಳಿತದಲ್ಲಿದ್ದು ಸಾಹಿತ್ಯವನ್ನು ಸಮೃದ್ಧಗೊಳಿಸಿದ್ದಾರೆ. ಸಂಸ್ಕೃತದಲ್ಲಿ 'ವರ್ಧಮಾನಚರಿತ'ವನ್ನು ಬರೆದ, 'ಛಂದೋನುಶಾಸನ'ಕಾರ ಜಯಕೀರ್ತಿಯು ಅಸಗನ ಕಾವ್ಯವನ್ನು ದೃಢಪಡಿಸುತ್ತಾನೆ. ಅದಕ್ಕಾಗಿಯೇ ಅವನು 'ಅಸಗಂಗಂನೂರ್ಮಡಿ' ಎಂದು ಹೊಗಳಿ ಹೇಳಿರುವುದು. ಹೀಗೆ ಅನೇಕ ಕೃತಿಕಾರರಿಗೆ ಆಶ್ರಯನೀಡಿದ ರಾಷ್ಟ್ರಕೂಟರು ಕನ್ನಡ ನಾಡು, ನುಡಿ, ಸಂಸ್ಕೃತಿಗೆ

ಮಹತ್ತರವಾದ ಕಾಣಿಕೆ ನೀಡಿದ್ದಾರೆ. ಅವರ ಕಾರ್ಯಕ್ಷೇತ್ರವೆಲ್ಲ ಇಂದಿನ ಹೈದರಾಬಾದ್ ಕರ್ನಾಟಕ ಪ್ರದೇಶವೆಂದು ಗುರುತಿಸಲ್ಪಡುವ ಭಾಗವೇ ಆಗಿದೆ.

೯ನೇ ಶತಮಾನದ ಅಂತ್ಯದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹತ್ತರ ಬದಲಾವಣೆಗಳಾದವು. ರಾಷ್ಟ್ರಕೂಟರ ಮೂರನೇ ಕೃಷ್ಣನ ಆಡಳಿತದಲ್ಲಿ ಕನ್ನಡಸಾಹಿತ್ಯ ಕವಿಚಕ್ರವರ್ತಿಗಳನ್ನು ಹುಡುಕಿಕೊಂಡಿತ್ತು. ಆಸ್ಥಾನ ಕವಿ, ಪೊನ್ನನು (ಸು ೯೩೯) ಶಾಂತಿಪುರಾಣ ರಚಿಸಿ ಉಭಯ ಕವಿಚಕ್ರವರ್ತಿ ಎಂಬ ಬಿರುದನ್ನು ಗಳಿಸಿದ್ದನು. ೧೦ನೇ ಶತಮಾನವು ಕರ್ನಾಟಕದ ಇತಿಹಾಸದಲ್ಲಿ ಸಾಹಿತ್ಯದ ಇತಿಹಾಸದಲ್ಲಿಯೂ ಸುವರ್ಣಾಕ್ಷರಗಳಿಂದ ಬರೆಯುವಂತದ್ದಾಗಿದೆ. ೨ನೇ ತೈಲಪನು ಕಲ್ಯಾಣಿ ರಾಜ್ಯವನ್ನು ಕಲ್ಯಾಣದಲ್ಲಿ ಸ್ಥಾಪಿಸಿ ಸಾಂಸ್ಕೃತಿಕ ಪರಿಸರವನ್ನು ನಿರ್ಮಿಸಿದನು. ಮಾನ್ಯಖೇಟದಿಂದ ಕಲ್ಯಾಣಕ್ಕೆ ಎಲ್ಲ ಚಟುವಟಿಕೆಗಳು ವರ್ಗಾವಣೆಗೊಂಡವು. ಎರಡನೇ ತೈಲಪ ಮತ್ತು ರಾಷ್ಟ್ರಕೂಟರ ಮಧ್ಯೆ ಯುದ್ಧ ಜರುಗಿ ಅನೇಕ ಮಹತ್ತರ ಗ್ರಂಥಗಳು ಅಗ್ನಿಗೆ ಆಹುತಿಯಾದವು ಎಂದು ಸೀತಾರಾಮ ಜಾಗೀರದಾರರು ಅಭಿಪ್ರಾಯಪಡುತ್ತಾರೆ.[೧೫] ಅದರಿಂದಾಗಿ ಕವಿರಾಜಮಾರ್ಗ ಕಾರನಿಗಿಂತ ಹಿಂದಿನ ಕವಿಗಳ ಸಾಹಿತ್ಯ ಅಲಭ್ಯವಾಗಿದ್ದು. ೨ನೇ ತೈಲಪನು ರನ್ನನಿಗೆ ಆಶ್ರಯನೀಡಿ ಕವಿಚಕ್ರವರ್ತಿ ಎಂಬ ಬಿರುದನ್ನು ನೀಡಿದನು. ಗದಾಯುದ್ಧ ಎಂಬ ಕೃತಿ ರಚಿಸಿದ ರನ್ನನ ಕಾರ್ಯಕ್ಷೇತ್ರವು ಮಾನ್ಯಖೇಟವೇ ಆಗಿದೆ. ಕನ್ನಡದ 'ಆದಿಕವಿ ಪಂಪ'ನೂ ಸಹ ನಿಜಾಮ್ ಭಾಗದ ವೆಂಗಿಪಳು ಸೀಮೆಯವನೆ. 'ಪಂಪ'ನಿಂದ ಕನ್ನಡ ಗಟ್ಟಿತನವನ್ನು ಪಡೆಯಿತು. ಆದಿಪುರಾಣ, ವಿಕ್ರಮಾರ್ಜುನ ವಿಜಯ ಎಂಬ ಗ್ರಂಥಗಳನ್ನು ಬರೆದ ಪಂಪನು ಕಲಿಯೂ, ಕವಿಯೂ ಆಗಿದ್ದುದುದು ವಿಶೇಷ. ಅವನು ರಾಷ್ಟ್ರಕೂಟರ ಸಾಮಂತ, ಕನ್ನಡ ಸೀಮೆಗೆ ಹೊಂದಿದ್ದ ವೇಮಲವಾಡದ (ವೆಂಗಿಪುಳು) ಎರಡನೇ ಅರಿಕೇಸರಿಯ ಆಸ್ಥಾನದಲ್ಲಿದ್ದನು. ಅವನ ಹುಟ್ಟೂರು ತಾಯಿಯ ಊರು ಪುಲಿಗೆರೆ, ಅಣ್ಣಿಗೆರೆ. ಬನವಾಸಿಯ ಪ್ರಾಂತಗಳು ಕನ್ನಡದ ಪ್ರದೇಶಗಳೇ ಆಗಿವೆ ಮತ್ತು ಆತ ಹೇಳುವ ಬನವಾಸಿ ದೇಶ ಎಂಬುದು ಅಪ್ಪಟ ಕನ್ನಡದ ಪ್ರದೇಶವೇ ಆಗಿದೆ.

ಅದುವರೆಗೆ ಕೇವಲ ಕನ್ನಡ ಸಾಹಿತ್ಯವು ಭಾಷೆ, ಲಯ, ನಿಯಮ, ಬಂಧಗಳ ಬಗೆಗೆ ಹೆಚ್ಚು ಚರ್ಚೆಗಿಳಿದಿತ್ತು. ಅಂತ ಸಂದರ್ಭದಲ್ಲಿ ಪಂಪನು ಪುರಾಣ ಕಾವ್ಯಗಳಲ್ಲಿ ರಾಜರನ್ನು ಸಮೀಕರಿಸಿ, ಹೋಲಿಸಿ ನೋಡುವ ಹೊಸ ಕ್ರಮವನ್ನು ಹುಟ್ಟುಹಾಕಿದ. ತನ್ನ ಆಶ್ರಯದಾತ ಅರಿಕೇಸರಿಯನ್ನು ಮಹಾಭಾರತದ ಅರ್ಜುನನಿಗೆ ಹೋಲಿಸಿ 'ವಿಕ್ರಮಾರ್ಜುನ ವಿಜಯ' (ಸು.೯೪೨) ಎಂಬ ಗ್ರಂಥ ರಚಿಸಿದ. ವೆಂಗಿಪಳುವಿನ ಜೊತೆ ಅನೇಕ ಕವಿಗಳು ಸಂಪರ್ಕ ವಿಟ್ಟುಕೊಂಡು ಕನ್ನಡ ಸಾಹಿತ್ಯ ರಚಿಸಿದ್ದು ಪಂಪನಂಥ ಮೇಧಾವಿಗಳ ಮಾರ್ಗದರ್ಶನ ಕನ್ನಡ ಸಾಹಿತ್ಯಕ್ಕಿತ್ತೆಂಬುದು ತಿಳಿಯುತ್ತದೆ. ಅದರಿಂದಾಗಿ ಒಂದನೇ ನಾಗವರ್ಮ, ಪೊನ್ನ, ದುರ್ಗಸಿಂಹ ಮೊದಲಾದ ಕವಿಗಳು 'ಛಂದೋಂಬುದಿ', 'ಕರ್ನಾಟಕ ಕಾದಂಬರಿ', 'ಶಾಂತಿಪುರಾಣ', 'ಗದಾಯುದ್ಧ', 'ಪಂಚತಂತ್ರದ ಕತೆಗಳು' ಮುಂತಾದ ಕೃತಿಗಳು ಹೊರಬರಲು ಸಾಧ್ಯವಾಯಿತು.

ಈ ಎಲ್ಲ ಸಾಹಿತ್ಯಿಕ ಚಟುವಟಿಕೆಗಳು ನಡೆದದ್ದಕ್ಕಾಗಿ (೧೦ನೇ ಶತಮಾನವು) ಹೈದರಾಬಾದ್ ಕರ್ನಾಟಕ ಪ್ರಾಂತಕ್ಕಷ್ಟೇ ಅಲ್ಲದೆ, ಕನ್ನಡ ಸಾಹಿತ್ಯಕ್ಕೆ ಸ್ಮರಣೀಯ ಪ್ರದೇಶವೆಂದಿನಿಸುತ್ತದೆ.

ಹೈದರಾಬಾದ್ ಕರ್ನಾಟಕ ಭೂ ಪ್ರದೇಶವು ಇತಿಹಾಸದಿಂದಲೂ ಅನೇಕ ಗಣಿಗಳಿಗೆ ಹೆಸರುವಾಸಿಯಾಗಿದೆ. ಕಡಪ, ಬಳ್ಳಾರಿ, ಬಿಜಾಪುರ, ಇತ್ಯಾದಿ ಸ್ಥಳಗಳಲ್ಲಿ ತಾಮ್ರದ ಕುರುಹುಗಳಿರುವುದು ಕಂಡುಬರುತ್ತದೆ. ಕರ್ನಾಟಕದಲ್ಲಿ ಚಿನ್ನದ ಗಣಿಗಳು ಹೇರಳವಾಗಿದ್ದವು. ಅಶೋಕನ ಕಾಲದ ಮಸ್ಕಿಶಾಸನದಲ್ಲಿ ಬಳಕೆಯಾಗಿರುವ 'ಸುವರ್ಣಗಿರಿ' ಎಂಬ ಪದವು ಬಂಗಾರದ ಗಣಿಯ ಪ್ರದೇಶವನ್ನು ಸೂಚಿಸುವುದಾಗಿದೆ. ಹಟ್ಟಿ ಚಿನ್ನದಗಣಿ ಅದಕ್ಕೆ ತಕ್ಕ ವಾಸ್ತವ ಉದಾಹರಣೆಯಾಗಿದೆ.

೧೧ನೇ ಶತಮಾನವು ಆರನೇ ವಿಕ್ರಮಾದಿತ್ಯನ ಕಾಲ (೧೦೭೬-೧೧೨೬) ದಕ್ಷಿಣದ ರಾಜರಿಂದ ಕರ್ನಾಟಕವನ್ನು ರಕ್ಷಿಸಿ ಹೊಸ ಶಕೆಯನ್ನು ಪ್ರಾರಂಭಿಸಿದ. ವಿಕ್ರಮಾದಿತ್ಯನ ಕಾಲದಲ್ಲಿ 'ವಿಕ್ರಮಶಕೆ' ಎಂಬ ಹೊಸಯುಗ ೧೦೭೬ರ ಸಂವತ್ಸರದಿಂದ ಪ್ರಾರಂಭಿಸಲಾಯಿತು. ಅವನ ಸಾಮ್ರಾಜ್ಯವು ಉತ್ತರದಲ್ಲಿ ನರ್ಮದಾ ನದಿಯಿಂದ ದಕ್ಷಿಣದಲ್ಲಿ ಮೈಸೂರು, ಕಡಪದವರೆಗೆ ಪೂರ್ವ ಪಶ್ಚಿಮದಲ್ಲಿ ಸಮುದ್ರಗಳವರೆಗೂ ಇತ್ತೆಂದು ತಿಳಿದು ಬರುತ್ತದೆ. ಇವನ ಕಾಲದಲ್ಲಿ ಶಾಸನಸಾಹಿತ್ಯ ಸಮೃದ್ಧವಾಗಿ ಬೆಳವಣಿಗೆಯಾಯಿತು. 'ಲಕ್ಷ್ಮೇಶ್ವರಶಾಸನ' ಇವನ ಸಾಧನೆಯನ್ನು ಹೊಗಳುವ ಶಾಸನವಾಗಿದೆ. ಗುಲಬರ್ಗಾ, ರಾಯಚೂರು, ಬೀದರ್, ಹೈದರಾಬಾದ್, ತೆಲಂಗಾಣ ಮುಂತಾದ ಪ್ರದೇಶಗಳಲ್ಲಿ ವಿಕ್ರಮಾದಿತ್ಯನ ಶಾಸನಗಳು ದೊರೆತಿವೆ. ಕಲ್ಯಾಣಿ ಚಾಲುಕ್ಯರ ಸಾಹಿತ್ಯ ಸಾಧನೆಯನ್ನು ಗಮನಿಸಿದಾಗ ಕಾಶ್ಮೀರದ ಕವಿ ಬಿಲ್ಹಣನು ರಚಿಸಿದ 'ವಿಕ್ರಮಾಂಕದೇವಚರಿತೆ' ಎಂಬ ಕೃತಿ ಗಮನಕ್ಕೆ ಬರುತ್ತದೆ. ವಿಕ್ರಮಾದಿತ್ಯನ ಆಸ್ಥಾನ ಕವಿಯಾಗಿದ್ದ ಬಿಲ್ಹಣನು 'ಮಿತಾಕ್ಷರ ಸಂಹಿತಾ' ಎಂಬ ಹಿಂದೂ ನ್ಯಾಯಗ್ರಂಥವನ್ನು ರಚಿಸಿದ.

ಜೈನಕವಿ ನಯಸೇನನು ರಚಿಸಿದ ಮಹತ್ವದ ಕೃತಿ 'ಧರ್ಮಾಮೃತ' ರಚಿತವಾದದ್ದು ಆರನೇ ವಿಕ್ರಮಾದಿತ್ಯನ ಕಾಲದಲ್ಲಿಯೇ. ಇವನ ತಮ್ಮನಾದ ರವಿಕೀರ್ತಿವರ್ಮನು 'ಗೋವೈದ್ಯ' ಎಂಬ ಮಹತ್ವದ ಕೃತಿ ರಚಿಸಿದ. ಶಿಲಾಹಾರರು, ಪರಮಾರರು, ಗುರ್ಜರರು, ಕಲಚುರ್ಯರು, ವಿಕ್ರಮಾದಿನತ್ಯನ ಸಾರ್ವಭೌಮತ್ವವನ್ನು ಒಪ್ಪಿಕೊಂಡಿದ್ದರು. ಅವನ ಮಗ ೩ನೇ ಸೋಮೇಶ್ವರನು ಕನ್ನಡ ಸಾಹಿತ್ಯಕ್ಕೆ ಅಪಾರಕಾಣಿಕೆ ನೀಡಿದ್ದಾನೆ. ಅವನು 'ಮಾನಸೋಲ್ಲಾಸ' ಎಂಬ ಮಹತ್ವದ ಕೃತಿರಚಿಸಿದ್ದಾನೆ. ಅದು ರಾಜನ ಕಾರ್ಯನಿರ್ವಹಣೆಯಿಂದ ಮೊದಲುಗೊಂಡು, ಪ್ರಾಣಿಗಳ ಪಾಲನೆ, ಪಾಕಶಾಸ್ತ್ರ ಮುಂತಾದ ವಿಷಯವಸ್ತುವನ್ನು ಒಳಗೊಂಡಿದ್ದಾಗಿ ತಿಳಿದು ಬರುತ್ತದೆ. ೧೦ನೇ ಶತಮಾನದ ಕಾಲಕ್ಕಾಗಲೆ ವಿವಿಧ ಶಿಸ್ತುಗಳನ್ನು ಒಂದೇ ಕೃತಿಯಲ್ಲಿ ಒಳಗೊಳ್ಳುವ ಹಾಗೆ ರಚಿತವಾದ ಆ ಕೃತಿ ಇಂದಿನ ಲೇಖಕರಿಗೆ ಮಾದರಿ ಮತ್ತು ಸವಾಲೇ ಆಗಿದೆ. ಜಾಗತೀಕರಣದ ಈ ಸಂದರ್ಭದಲ್ಲಿ ಒಂದು ವಿಷಯದ ಕುರಿತು ಬರೆಯುವುದರಲ್ಲಿ ತಿಣುಕುತ್ತಿರುವ, ಪರಿಪೂರ್ಣ ವಿಷಯುವನ್ನು ಅಧಿಕೃತವಾಗಿ ಹೇಳುವಲ್ಲಿ ಎಡವುತ್ತಿರುವ ನಮಗೆ

'ಮಾನಸೋಲ್ಲಾಸ'ದಂತಹ ವಿವಿಧ ವಸ್ತುವಿಷಯಗಳನ್ನು ಒಳಗೊಂಡ ಕೃತಿಯನ್ನು ರಚನೆ ಮಾಡುವುದು ನಿಜಕ್ಕೂ ಸವಾಲೇ ಸರಿ.

ಕಲ್ಯಾಣಿ ಚಾಲುಕ್ಯರು ಹಿಂದಿನ ರಾಜವಂಶಗಳು ವಿಸ್ತರಿಸಿದ್ದ ಕರ್ನಾಟಕವನ್ನು ರಕ್ಷಿಸಿದ್ದಷ್ಟೇ ಅಲ್ಲದೇ, ತನ್ನ ಆಳ್ವಿಕೆಯ ಎಲ್ಲಾ ಪ್ರದೇಶಗಳಲ್ಲಿ ಕನ್ನಡತನವನ್ನು ಹೆಚ್ಚಿಸುವ ಸಾರ್ಥಕ ಕಾರ್ಯ ಮಾಡಿದರು. ಜನಸಾಮಾನ್ಯರ ಭಾಷೆಯಾದ ಕನ್ನಡದಲ್ಲೇ ಶಾಸನಗಳನ್ನು ಹಾಕಿಸಿದರು. ಅನೇಕ ದೇವಾಲಯಗಳನ್ನು ನಿರ್ಮಿಸಿ ಆ ಮೂಲಕ ಕನ್ನಡಿಗರ ಕಲೆ ಸಂಸ್ಕೃತಿಯನ್ನು ಉಜ್ವಲಗೊಳಿಸುವಂತೆ ಪ್ರೋತ್ಸಾಹಿಸಿದರು. ಈಗಿನ ಮಹಾರಾಷ್ಟ್ರದ ದಕ್ಷಿಣ ಶಾಸನಗಳು ಹೆಚ್ಚಾಗಿ ಕಂಡು ಬಂದಿರುವದರಿಂದ ಅವುಗಳೆಲ್ಲವೂ ಸಹ ಅಂದಿನ ಕನ್ನಡ ಪ್ರದೇಶಗಳೇ ಆಗಿವೆ ಎಂದು ನಿಸ್ಸಂಶಯವಾಗಿ ಹೇಳಬಹುದಾಗಿದೆ. ಉತ್ತರದಲ್ಲಿ ನರ್ಮದಾ ನದಿಯಿಂದ ದಕ್ಷಿಣದಲ್ಲಿ ಕಾವೇರಿ, ಪಶ್ಚಿಮದಲ್ಲಿ ಅರಬ್ಬಿ ಸಮುದ್ರದಿಂದ ಪೂರ್ವದಲ್ಲಿ ವೆಂಗಿಮಂಡಲವನ್ನೊಳಗೊಂಡ ಆಂಧ್ರದ ವಿಶಾಖಪಟ್ಟಣದವರೆಗೆ ಹಬ್ಬಿತ್ತು. ಈಗಿನ ಗುಂಟೂರು ಜಿಲ್ಲೆ ಕರ್ನಾಟಕದ ಪ್ರದೇಶವೇ ಆಗಿತ್ತು. ಈ ಕಾಲದಲ್ಲಿ ಸಾಹಿತ್ಯ ಕೃತಿಗಳು ಅನಾವರಣಗೊಂಡು ಜನಸಾಮಾನ್ಯರಿಗೆ ಹೆಚ್ಚು ಆಪ್ತವಾಗುತ್ತ ಬಂದದ್ದು ರಂಗಪ್ರಯೋಗದಿಂದ ಎಂಬುದು ವಿಶೇಷ.

ಪ್ರಾಚೀನ ಸಾಹಿತ್ಯದ 'ಗದಾಯುದ್ಧ', 'ಪಂಪಭಾರತ' ಮೊದಲಾದ ಕೃತಿಗಳನ್ನು ದೊಡ್ಡಾಟಗಳನ್ನಾಡುವ ಮೂಲಕ ಜನರಿಗೆ ಹತ್ತಿರವಾಗುವ ಹಾಗೆ ಅಂದು ಮಾಡಿದ್ದರು. ಇಂದಿಗೂ ಸಹ ಈ ಭಾಗದ ಹಳ್ಳಿಗಳಲ್ಲಿ ಜಾತ್ರೆ, ಹಬ್ಬ ಹಾಗೂ ವಿಶೇಷ ಸಂದರ್ಭಗಳಲ್ಲಿ 'ಅಕ್ಷಯಾಂಬರ', 'ದ್ರೌಪದಿಯ ವಸ್ತ್ರಾಪಹರಣ', 'ವೀರ ಅಭಿಮನ್ಯು', 'ಗಿರಿಜಾಕಲ್ಯಾಣ', 'ಶ್ರೀಕೃಷ್ಣ-ಪಾರಿಜಾತ' ಹೀಗೆ ಪೌರಾಣಿಕ ನಾಟಕಗಳನ್ನು ಆಡುವುದನ್ನು ಕಾಣುತ್ತೇವೆ. ತೊಗಲು ಬೊಂಬೆಯಾಟ, ಡಪ್ಪಿನಾಟಗಳಲ್ಲಿ ಪೌರಾಣಿಕ ವಸ್ತುಗಳನ್ನು ಸೇರಿಸಿ ಇಂದಿಗೂ ಈ ಭಾಗದಲ್ಲಿ ನಾಟಕಗಳನ್ನು ಆಡುತ್ತಾರೆ. ಇದು ಅಂದಿನಿಂದ ಬೆಳೆದುಕೊಂಡು ಬಂದ ಪರಂಪರೆಯೇ ಆಗಿದೆ. ಒಟ್ಟಾರೆಯಾಗಿ ಈ ಭೂಪ್ರದೇಶವು ಸಾಹಿತ್ಯದ ಜೊತೆ ಜೊತೆಗೆ ಅದನ್ನು ಅರ್ಥೈಸುವ ಕಾರ್ಯವಾಗಿ ರಂಗಪ್ರಯೋಗಗಳನ್ನು ಮಾಡುವ ಮೂಲಕ ಜನಸಾಮಾನ್ಯರಿಗೆ ಹತ್ತಿರವಾಗುತ್ತಿತ್ತು. ಹಾಗಾಗಿ ಈ ಭಾಗದ ಸಾಹಿತ್ಯ ಮೊದಲಿನಿಂದ ಜನಸಾಮಾನ್ಯರಿಗೆ ಹತ್ತಿರವಾಗುವ, ಅದು ಸರಳವಾಗಿ ಜನರಿಗೆ ತಲುಪುವ ನಿಟ್ಟಿನಲ್ಲಿರುವಂತೆ ಒಂದು ಪರಂಪರೆಯನ್ನು ಬೆಳೆಸಿಕೊಂಡು ಬಂದಿರುವುದು ಇದರಿಂದ ತಿಳಿಯುತ್ತದೆ.

ಕಲಚೂರ್ಯರ ಕಾಲ ಕರ್ನಾಟಕ ಇತಿಹಾಸದಲ್ಲಿ ಕ್ರಾಂತಿಯನ್ನುಂಟು ಮಾಡಿದ ಕಾಲ. ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅನೇಕ ಮಹತ್ತರ ಬದಲಾವಣೆಗಳನ್ನು ಕಂಡ ಕಾಲವದು. ಕಲ್ಯಾಣ ಚಾಲುಕ್ಯರು ಬಲಹೀನರಾದಾಗ, ಅವರ ಮಾಂಡಲಿಕನಾಗಿದ್ದ ಬಿಜ್ಜಳನು ಅಧಿಕಾರವನ್ನು ತನ್ನ ಕೈವಶಮಾಡಿಕೊಂಡು ಆಳ್ವಿಕೆ ನಡೆಸಿದ. ಅವನ ಆಳ್ವಿಕೆಯಲ್ಲಿ ಕರ್ನಾಟಕ ಚರಿತ್ರೆಯು ಸಾಂಸ್ಕೃತಿಕ ಸಂಘರ್ಷಗಳನ್ನು ಕಂಡಿತು. ಅವನ ಮಂತ್ರಿಯಾಗಿದ್ದ ಬಸವಣ್ಣ

ಆವರೆಗೆ ಇದ್ದಂಥ ಸಮಾಜವನ್ನು ಬದಲಾಯಿಸಲು ಪ್ರಯತ್ನಿಸಿದ. ಅದರ ಫಲವೇ 'ವಚನಸಾಹಿತ್ಯ'ದ ಉಗಮ. ಶರಣರು ಕೂಡಿ ರೂಪಿಸಿದ ಈ 'ವಚನ ಚಳವಳಿ'ಯು ಜನರನ್ನು ಸಾಮಾಜಿಕ, ಸಾಂಸ್ಕೃತಿಕ ಪ್ರಜ್ಞಾವಂತಿಕೆಗೆ, ಮೂಢನಂಬಿಕೆಯಿಂದ ಬಿಡುಗಡೆಗೊಳ್ಳುವ ಹಾಗೆ ಮತ್ತು ಕಾಯಕ ಪ್ರಜ್ಞೆಯನ್ನು ಮೂಡಿಸುವಂತೆ ಕಾರ್ಯನಿರ್ವಹಿಸಿತು. ಸಮಾಜದ ಜಾತಿ ವಿಚಾರಗಳನ್ನು ಬುಡಮೇಲು ಮಾಡಿದ 'ವಚನ ಚಳವಳಿ'ಯು ಪ್ರಭುತ್ವ ನಿರ್ಮಿಸುತ್ತಿದ್ದ ದೇವಾಲಯ, ಅದಕ್ಕೇ ಜನರಿಂದ ವಸೂಲಾಗುತ್ತಿದ್ದ ಕರ, ತೆರಿಗೆ ಮುಂತಾದವುಗಳನ್ನು ವಿರೋಧಿಸಿತು. ಆ ಮೂಲಕ 'ದೇಹವೇ ದೇಗುಲ' ಎಂಬ ಮನಪರಿಕಲ್ಪನೆಯ ದೈವಕ್ಕೆ ಒತ್ತುಕೊಟ್ಟಿತು. ಈ ಎಲ್ಲಾ ಕಾರ್ಯಚಟುವಟಿಕೆಗಳು ನಡೆದದ್ದು ಕಲ್ಯಾಣದಲ್ಲಿಯೇ. ಕನ್ನಡ ಸಾಹಿತ್ಯದ ಅನೇಕ ಘಟನಾವಳಿಗೆ ಹೈದರಾಬಾದ್ ಕರ್ನಾಟಕವೇ ಮೂಲ ನೆಲೆಯಾಗಿತ್ತು. ಆದರೆ ಇಲ್ಲಿ ನಡೆದ ಅನೇಕ ಘಟನಾವಳಿಗಳು ಮುಂದೆ ಸಹಜ ಸ್ವರೂಪದ ಫಲ ಪಡೆಯದೇ ಆಯಾ ಸಂದರ್ಭದಲ್ಲಷ್ಟೇ ಪ್ರಭಾವ ಬೀರಿ ಮರೆಯಾದವೇನೋ ಎಂದು ಭಾಸವಾಗುತ್ತದೆ.

೧೨ನೇ ಶತಮಾನ ಅನೇಕ ಕಾರಣಗಳಿಗಾಗಿ ಮಹತ್ವದ್ದೆನ್ನಿಸುತ್ತದೆ. ಸಾಹಿತ್ಯದಲ್ಲಿ ಆವರೆಗಿದ್ದ ಚಂಪುಕಾವ್ಯ ಮರೆಯಾಗಿ 'ವಚನಸಾಹಿತ್ಯ' ಉದಯಸಿತು. ಜನ ಸಾಮಾನ್ಯರ ನಿತ್ಯ ಬದುಕಿನಲ್ಲಿನ ಮೌಲಿಕ ಅನುಭವಗಳನ್ನು ಕೇಂದ್ರೀಕರಿಸಿ ಅವುಗಳ ಮೌಲ್ಯವನ್ನು ದೈವಿಕಲ್ಪನೆಯ ಅಂಕಿತಗಳ ಮೇಲೆ ಪ್ರತಿಜ್ಞೆ ಮಾಡಿ ಹೇಳಿದಂತೆ 'ಸತ್ಯವಾದ ಮಾತು' ಎಂಬಂತೆ ವಚನಕಾರರು ಅವುಗಳನ್ನು ಹೇಳಿದರು. ಅದು ಸಮಾಜದಲ್ಲಿ ಅನೇಕ ಬದಲಾವಣೆಗೆ ಕಾರಣವಾಯಿತು. ವಚನಗಳಿಂದ ಜನ ತಮ್ಮನ್ನು ತಾವು ಎಚ್ಚರಗೊಳ್ಳುವಂತೆ ಆಯಿತು.

೧೨ನೇ ಶತಮಾನದ ಅಂತ್ಯದಲ್ಲಿ ರಾಜಕೀಯವಾಗಿ ಅಖಂಡವಾಗಿದ್ದ ಮಹಾರಾಷ್ಟ್ರ, ಆಂಧ್ರಪ್ರದೇಶ, ಕರ್ನಾಟಕ ರಾಜ್ಯಗಳು ಸಮರ್ಥ ರಾಜರಿಲ್ಲದೇ ಬೇರ್ಪಟ್ಟು ಪ್ರತ್ಯೇಕವಾದವು. ಮಾಂಡಲಿಕರಲ್ಲಿ ಪ್ರಬಲರಾದವರು ಪ್ರಾದೇಶಿಕವಾಗಿ ಆಳ್ವಿಕೆ ನಡೆಸುತ್ತ ತಮ್ಮ ತಮ್ಮಲ್ಲಿಯೇ ಕಚ್ಚಾಡುತ್ತ ಬಂದರು. ಹೈದರಾಬಾದ್ ಕರ್ನಾಟಕ ಪ್ರಾಂತದಲ್ಲಿ ಯುದ್ಧಗಳು ಹೆಚ್ಚಾದವು. ಇದನ್ನು ಗಮನಿಸುತ್ತಿದ್ದ ಉತ್ತರದ ದೊರೆ ಅಲ್ಲಾವುದ್ದೀನ್ ಖಿಲ್ಜಿ ದಕ್ಷಿಣದಲ್ಲಿ ರಾಜ್ಯ ವಿಸ್ತರಣೆಗೆ ಮನಸ್ಸುಮಾಡಿ ದಾಳಿ ನಡೆಸಿದ. ಅದರಿಂದ ಪ್ರತಿಫಲವನ್ನು ಪಡೆದನು. ಸೇವುಣರು ನೀಡಿದ ಕಪ್ಪಕಾಣಿಕೆಗಳಿಂದಲೆ ಅಧಿಕಾರಕ್ಕೆ ಬಂದ ಖಿಲ್ಜಿಯು ದಕ್ಷಿಣದಲ್ಲಿ 'ದೇವಗಿರಿ'ಯನ್ನು ಆಕ್ರಮಿಸಿ ಅಪಾರ ಸಂಪತ್ತು ಗಳಿಸಿದನು. ಇಲ್ಲಿನ ರಾಜರುಗಳ ಐಶ್ವರ್ಯದ ಬಗೆಗೆ ತಿಳಿದಿದ್ದ ಅಲ್ಲಾವುದ್ದೀನ್ ಖಿಲ್ಜಿ ಸೇವುಣರು, ಓರಂಗಲ್ಲಿನ ಕಾಕತೀಯರು ಮತ್ತು ದೋರಸಮುದ್ರದ ಹೊಯ್ಸಳರ ಮೇಲೆ ದಾಳಿಮಾಡಿ ಅಪಾರ ಸಂಪತ್ತನ್ನು ಲೂಟಿಮಾಡಿದನು. ಇಂತಹ ವಿಷಮ ಸ್ಥಿತಿಯಲ್ಲಿ ದೆಹಲಿಯ ತುಘಲಕನಿಗೆ ಸೇರಿದ ಸುಲ್ತಾನರ ವಿರುದ್ಧ ದಕ್ಷಿಣದ ರಾಜರುಗಳು ವಿರೋಧಿಸಿದರು. ಹರಿಹರ, ಬುಕ್ಕರ ಮುಂದಾಳತ್ವದಲ್ಲಿ ಹೋರಾಡಿದ ಫಲವಾಗಿ ವಿಜಯನಗರ ಸಾಮ್ರಾಜ್ಯ ಹುಟ್ಟಿಕೊಂಡಿತು ಕೆಲ ದಿನಗಳಲ್ಲಿಯೇ ಬಹಮನಿ ಸಾಮ್ರಾಜ್ಯವೂ ಉದಯಿಸಿತು.

ವಿಜಯನಗರದ ರಾಜರಿಗೂ ಮತ್ತು ಬಹಮನಿಗಳಿಗೂ ಕೆಲ ದಿನಗಳವರೆಗೆ ಘರ್ಷಣೆ ನಡೆದಿರಲಿಲ್ಲ. ಆದರೆ ಹಾಗೆಯೇ ಬಹಳ ದಿನ ಇರಲೂ ಇಲ್ಲ. ಎರಡೂ ಅರಸು ಮನೆತನಗಳ ನಡುವೆ ದ್ವೇಷ ಅಸೂಯೆಗಳು ಉಲ್ಬಣವಾಗಿ ಕಲಹಗಳಾದವು. ಈ ಎರಡೂ ಪಡೆಗಳು ಮಾಡಿದ ಯುದ್ಧಗಳಿಗೆ ಈ ಪ್ರದೇಶ ಕಾರ್ಯಕ್ಷೇತ್ರವಾಗಿತ್ತು. ಮುಸ್ಲೀಂ ಸುಲ್ತಾನರುಗಳಾದ ಖಿಲ್ಜಿ–ತುಘಲಕ್–ಸಂತತಿಗಳ ಆಡಳಿತದಿಂದ ಬೇಸತ್ತಿದ್ದ ಜನರನ್ನು ನೆಮ್ಮದಿಯ ನಿಟ್ಟುಸಿರು ಬಿಡುವಂತೆ ಮಾಡಿದ್ದು ವಿಜಯನಗರದ ದೊರೆಗಳು. ಹಿಂದೂ ದೊರೆಗಳಾದ ಈ ಅರಸರು ಜನಸಾಮಾನ್ಯರಿಗೆ ನೆಮ್ಮದಿಯನ್ನು ನೀಡಲು ಪ್ರಯತ್ನಿಸಿದರು. ಆ ಮೂಲಕ ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ತಂದರು. ನೀರಾವರಿ ವ್ಯವಸ್ಥೆಯನ್ನು ಪುನರುಜ್ಜೀವನಗೊಳಿಸಿದರು. ೧೨ನೇ ಶತಮಾನದಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪನೆವರೆಗೆ ಕದನಗಳಾದ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ರಚನೆಯಾಗಲಿಲ್ಲ. ಆ ಕೊರತೆಯನ್ನು ವಿಜಯನಗರದ ಅರಸರು ತುಂಬಿಸಿದರು.

ಹರಿಹರ, ಬುಕ್ಕರು ೧೩೩೬ರಲ್ಲಿ ರಾಜ್ಯ ಸ್ಥಾಪನೆಮಾಡಿ ದಕ್ಷಿಣ ಕನ್ನಡದ ಬಾರಕೂರಿನಲ್ಲಿ ಕೋಟೆ ಕಟ್ಟಿಸಿ ಸ್ವಲ್ಪ ಸಮಯದಲ್ಲಿಯೇ 'ಪೂರ್ವಪಶ್ಚಿಮ ಸಮುದ್ರಾಧಿಪತಿ' ಎನಿಸಿಕೊಂಡರು. ತನ್ನ ಸಹೋದರರ ಜೊತೆ ಸೇರಿ ದಕ್ಷಿಣಭಾರತವನ್ನೇ ಆಳಲು ಪ್ರಯತ್ನಿಸಿದರು. ವಿಜಯನಗರದ ಪ್ರತಿಯೊಬ್ಬ ಅರಸರು ತಮ್ಮ ರಾಜ್ಯದ ವಿಸ್ತರಣೆಗೆ ಮಹತ್ವ ನೀಡಿದ್ದರು. ೧ನೇ ದೇವರಾಯ ಆಂಧ್ರಪ್ರದೇಶದ ಪೂರ್ವತೀರದ ಪ್ರದೇಶ ಮತ್ತು ತೆಲಂಗಾಣವನ್ನು ಸಾಮ್ರಾಜ್ಯಕ್ಕೆ ಸೇರಿಸಿದ. ಅರೇಬಿಯಾ, ಪರ್ಶಿಯಾ ದೇಶಗಳೊಡನೆ ವ್ಯಾಪಾರ ಸಂಬಂಧ ಬೆಳೆಸಿ ತುಂಗಭದ್ರ ನದಿಗೆ ಮೊದಲು ಅಣೆಕಟ್ಟು ನಿರ್ಮಿಸುವ ಯೋಜನೆ ಹಾಕಿಕೊಂಡಿದ್ದ. ಮುಂದೆ ವಿಜಯನಗರದ ಕೃಷ್ಣದೇವರಾಯನ ಕಾಲವು ಇತಿಹಾಸದಲ್ಲಿ 'ಸುವರ್ಣಯುಗ' ಎನಿಸಿದೆ. ಅನೇಕ ಯುದ್ಧಗಳನ್ನು ಗೆದ್ದ ಕೃಷ್ಣದೇವರಾಯ ಎದುರಾಳಿ ಸುಲ್ತಾನರನ್ನು ಸೋಲಿಸಿ ತಮ್ಮ ವ್ಯಾಪ್ತಿಯಲ್ಲಿರಲು ಬಿಡುತ್ತಿದ್ದ. ಕೆಲವು ಸಾರಿ ಸುಲ್ತಾನರನ್ನು ಸೋಲಿಸಲಾಗುತ್ತಿದ್ದಿಲ್ಲ. ಕ್ರಿ.ಶ. ೧೫೨೨ರಲ್ಲಿ ನಡೆದ ಒಂದು ಕದನದಲ್ಲಿ ಕೃಷ್ಣದೇವರಾಯನಿಗೆ ಬಹಮನಿಗಳ ವಿರುದ್ಧ ವಿಜಯವಾಗಿ ಕಂದಕೂರು, ಪೆನುಗೊಂಡ, ನಾಗಾರ್ಜುನಗೊಂಡ, ಕೊಂಡವೀಡು, ಉದಯಗಿರಿ, ವಿಜಯವಾಡ, ರಾಜಮಂಡ್ರೆ, ಮೊದಲಾದ ಆಂಧ್ರಪ್ರದೇಶದ ವ್ಯಾಪ್ತಿಯ ಪ್ರದೇಶಗಳನ್ನು ವಶಪಡಿಸಿಕೊಂಡ. ಆದರೆ ತನ್ನ ಪಕ್ಕದಲ್ಲೇ ಇದ್ದ ರಾಯಚೂರು, ಬೀದರ್, ಗುಲಬರ್ಗಾ ಪ್ರದೇಶದಲ್ಲಿ ಆಳುತ್ತಿದ್ದ ಬಹಮನಿ, ಬರಿದ್‌ಶಾಹಿಗಳನ್ನು ಸೋಲಿಸಲಾಗಲಿಲ್ಲ. ಇಂತಹ ಅಖಂಡ ಹಿಂದೂ ಸಾಮ್ರಾಜ್ಯ ಎಂದು ಹೆಸರುಪಡೆದಿದ್ದ ವಿಜಯನಗರದ ಅರಸರು ೧೫೬೫ರಲ್ಲಿ ನಡೆದ ರಕ್ಕಸಗಿ ತಂಗಡಿಗಿ (ತಾಳಿಕೋಟೆ)ಯುದ್ಧದಲ್ಲಿ ಸೋತು ಪರ್ಯಾವಸಾನಗೊಂಡರು.

ಸುಮಾರು ೨೨೦ವರ್ಷಗಳ ಕಾಲ ಕರ್ನಾಟಕದ ಹಿರಿಮೆಯನ್ನು ಕಾಪಾಡಿ, ಇಡೀ ದಕ್ಷಿಣ ಭಾರತವನ್ನೊಳಗೊಂಡ ವಿಶಾಲ ಕರ್ನಾಟಕವನ್ನು ಕೊನೆಯಬಾರಿಗೆ ಆಳಿದ ಕೀರ್ತಿ ವಿಜಯನಗರದ ಅರಸರಿಗೆ ಸಲ್ಲುತ್ತದೆ. ಕನ್ನಡ ಸಾಹಿತ್ಯ, ಕಲೆ ಮತ್ತು ಸಂಸ್ಕೃತಿಗಳ ಪೋಷಕರಾಗಿ, ಅನ್ಯ

ಭಾಷೆಗಳಾದ ತೆಲುಗು, ತಮಿಳನ್ನು ಬೆಳೆಸಿದರು. ವಾಸ್ತುಶಿಲ್ಪ ಹಾಗೂ ಶಿಲ್ಪಕಲೆಗಳಿಗೆ ನೀಡಿದ ಮಹತ್ವವನ್ನು ಇಂದಿನವರೆಗೂ ನೋಡುವ ಹಾಗೆ ಮಾಡಿದ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ.

ಕನ್ನಡದ ಅನೇಕ ಕೃತಿಗಳು ವಿಜಯನಗರ ಅರಸರ ಕಾಲದಲ್ಲಿ ರಚಿತವಾಗಿವೆ. ಪಾಲ್ಕುರಿಕೆ ಸೋಮನಾಥ 'ಬಸವಪುರಾಣ', ಲಕ್ಕಣದಂಡೇಶ 'ಶಿವತತ್ವಚಿಂತಾವಣಿ', ಚಾಮರಸ 'ಪ್ರಭುಲಿಂಗ ಲೀಲೆ', 'ಗುಣಭಾಷ್ಯರತ್ನಮಾಲೆ' ಮತ್ತು 'ವೀರಶೈವಾಮೃತ ಪುರಾಣ', ನರಹರಿಯ 'ತೊರವೆ ರಾಮಾಯಣ', ವಿರೂಪಾಕ್ಷ ಕವಿ 'ಚನ್ನಬಸವ ಪುರಾಣ', ಕೃಷ್ಣದೇವರಾಯನು 'ಅಮುಕ್ತಮಾಲ್ಯದ' ನಂಜುಂಡಕವಿಯ 'ಕುಮಾರವ್ಯಾಸ ಸಾಂಗತ್ಯ' ಮುಂತಾದವುಗಳು. ಹೀಗೆ ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಈ ಅರಸರು ಮಾಡಿದರು. ವಚನ ಚಳವಳಿಯ ನಂತರ ಸ್ಥಗಿತತೆಯ ಕಡೆಗೆ ಸಾಗಿದ್ದ ಸಾಹಿತ್ಯವನ್ನು ಪುನರುಜ್ಜೀವನಗೊಳಿಸುವ ಕಾರ್ಯವನ್ನು ವಿಜಯನಗರದ ಅರಸರು ಮಾಡಿದರು. ಅದರ ಫಲವಾಗಿ ಹರಿಹರ, ರಾಘವಾಂಕ, ಚಾಮರಸ, ಲಕ್ಕಣದಂಡೇಶ, ಮೊಗ್ಗೆಯ ಮಾಯಿದೇವ, ಗುರುಬಸವ, ಕರಸ್ಥಲದ ವಿರಣ್ಣೊಡೆಯ, ಕುಮಾರವ್ಯಾಸ ಮೊದಲಾದವರ ಕಾವ್ಯಗಳು ನಮಗೆ ದೊರಕಿದವು. ಹಂಪೆಯೇ ಇವುಗಳಿಗೆ ಪ್ರಧಾನ ಕೇಂದ್ರವಾಗಿತ್ತು. ಅಲ್ಲದೇ ಅನುಭಾವಿಗಳು, ತತ್ವಪದಕಾರರು, ಸೂಫಿಗಳು, ದಾಸರು, ಈ ಪ್ರಾಂತದಲ್ಲಿ ಭಕ್ತಿಮಾರ್ಗದ ಹಿನ್ನೆಲೆಯಲ್ಲಿ ಸಾಹಿತ್ಯಾಸಕ್ತಿ ಬೆಳೆಸಿದರು. ಕಾಲಾನಂತರದಲ್ಲಾದ ಬದಲಾವಣೆಯು ಶಿಷ್ಟಸಾಹಿತ್ಯ ರಚನೆಯನ್ನು ತುಸು ಗೌಣಗೊಳಿಸಿತು. ಆದರೆ ಜನಪದರಿಗೆ ಹತ್ತಿರವಿದ್ದ ಜಾನಪದ ಸಾಹಿತ್ಯ ವಿಪುಲವಾಗಿ ಬೆಳೆಯಿತು. ದಾಸರು ಕೀರ್ತನೆಗಳ ಮೂಲಕ ಜೀವನದ ಮೌಲಿಕ ಅಂಶಗಳನ್ನು, ನೀತಿ ಧರ್ಮದ ಹಿನ್ನೆಲೆಯಲ್ಲಿ ಹೇಳಲು ತೊಡಗಿದರು. ಸಮಾಜದ ಅನಿಷ್ಟಗಳನ್ನು ಆ ಮೂಲಕ ಕಳಚಲು ಪ್ರಯತ್ನಿಸಿದ್ದು ಕನ್ನಡ ಸಾಹಿತ್ಯದ ಅನನ್ಯತೆ ಎಂದೇ ಹೇಳಬಹುದು.

ಅಲ್ಲಸಾನಿ ಪೆದ್ದಣ್ಣ, ತೆನಾಲಿ ರಾಮಕೃಷ್ಣ, ನಂದಿ ತಿಮ್ಮಣ್ಣರಂತಹ ಅಷ್ಟದಿಗ್ಗಜ ಕವಿಗಳಿಗೆ ಈ ಅರಸರು ಆಶ್ರಯ ನೀಡಿದ್ದರು. ಸಂಗೀತ ಮತ್ತು ನೃತ್ಯಕ್ಕೆ ಸಂಬಂಧಿಸಿದಂತೆ ಕಲ್ಲಿನಾಥನ 'ಸಂಗೀತ ರತ್ನಾಕರಟೀಕಾ', ಪುಂಡಲಿಕ ವಿಠಲನ 'ರಾಗಮಂಜರಿ', 'ನಟನಾನಿರ್ಣಯ' ಎಂಬ ಕೃತಿಗಳಿದ್ದವು. ಒಟ್ಟಾರೆಯಾಗಿ ವಿಜಯನಗರದ ಅರಸರು ಕನ್ನಡ ಸಾಹಿತ್ಯವನ್ನು ಉಳಿಸಿ ಬೆಳೆಸಿದರು. ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಸಾಹಿತ್ಯದ ಉಗಮ ಮತ್ತು ವಿಕಾಸವನ್ನು ಈ ಅರಸರು ಮುಂದುವರೆಸಿದ್ದರೆಂದು ತಿಳಿಯುತ್ತದೆ. ಕೀರ್ತನೆ ಸಾಹಿತ್ಯ ಹೊಸದಾಗಿ ಸೇರ್ಪಡೆಯಾಯಿತು. ಹಂಪೆ ಪ್ರದೇಶದಲ್ಲಿ ನಾಥ, ಆರೂಢ, ಕಾಪಾಲಿಕ, ಕಾಳಾಮುಖ, ವಿರಕ್ತ ಪಂಥಗಳು ಇದ್ದವು. ಅನುಭಾವ ಸಾಹಿತ್ಯವೂ ಸಹ ಬೆಳೆದವು. ಇವು ಕರ್ನಾಟಕ ಸಂಸ್ಕೃತಿಯ ವಿಭಿನ್ನ ಮುಖಗಳನ್ನು ತಿಳಿಸುತ್ತವೆ.

ಕ್ರಿ.ಶ.೧೩೪೭ರಲ್ಲಿ ಆರಂಭವಾದ ಬಹುಮನಿ ಸುಲ್ತಾನರ ರಾಜ್ಯ ತನ್ನ ೧೮೦ ವರ್ಷ ಆಳ್ವಿಕೆಯಲ್ಲಿ ೧೪ ಜನ ಸುಲ್ತಾನರನ್ನು ಕಂಡಿದೆ. ಗುಲಬರ್ಗಾ, ಬೀದರ್‌ಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡ ಇವರು ನಿಜಾಮ್ ಕರ್ನಾಟಕದ ಭಾಗದಲ್ಲಿ ಆಳಿದರು. ಕಾಲಾನಂತರದಲ್ಲಿ

ಬಹುಮನಿರಾಜ್ಯ ಆದಿಲ್ ಶಾಹಿ (ಬಿಜಾಪುರ), ನಿಜಾಮ್ ಶಾಹಿ (ಅಹಮದ್‌ನಗರ), ಕುತುಬ್ ಶಾಹಿ (ಗೋಲ್ಕೊಂಡ), ಇಮದ್ ಶಾಹಿ (ಬಿರಾರ್), ಹಾಗೂ ಬರೀದ್ ಶಾಹಿ (ಬೀದರ್) ಎಂಬ ರಾಜ್ಯಗಳಾಗಿ ಮಾಡಿಕೊಂಡು ಆಡಳಿತ ನಡೆಸಿದರು.

ಕೃಷ್ಣ ಮತ್ತು ತುಂಗಭದ್ರ ನದಿಗಳ ನಡುವೆ ಇದ್ದ ಸಮೃದ್ಧವಾದ 'ದೋ-ಅಬ್' ಪ್ರದೇಶಕ್ಕಾಗಿ ವಿಜಯನಗರ ಮತ್ತು ಬಹಮನಿಗಳ ಮಧ್ಯೆ ನಿರಂತರ ಯುದ್ಧಗಳು ನಡೆಯುತ್ತಲೇ ಬಂದಿರುವುದು ಕಂಡುಬರುತ್ತದೆ. ನೀರಾವರಿಯೋಗ್ಯ ಭೂಪ್ರದೇಶದಿಂದ ಸಮೃದ್ಧವಾದ ಕಂದಾಯದ ನಿರೀಕ್ಷೆ ಮತ್ತು ಈ ಭೂಮಿಯಲ್ಲಿ ಮುತ್ತು, ರತ್ನ, ವಜ್ರಗಳಂತಹ ಸಂಪತ್ತು ಈ ರಾಜರುಗಳಿಗೆ ಪ್ರಮುಖ ಆಕರ್ಷಣೆಯಾಗಿತ್ತು. ೧೪೩೦ರ ನಂತರ ಬೀದರ್, ಗುಲಬರ್ಗಾ, ಬಿಜಾಪುರಗಳಲ್ಲಿ ಕನ್ನಡಿಗರೇ ಹೆಚ್ಚಾಗಿದ್ದ ಈ ಪ್ರದೇಶಗಳಲ್ಲಿ ಉರ್ದುವಿನ ಪ್ರಭಾವ ಅಧಿಕವಾಗಿ ಕನ್ನಡಿಗರು ಅಲ್ಪಸಂಖ್ಯಾತರಂತೆ ಜೀವಿಸಬೇಕಾದ ಪರಿಸ್ಥಿತಿ ಉಂಟಾಗಿತ್ತು. ಆಡಳಿತಾತ್ಮಕ ನಿಯಮಗಳನ್ವಯ ನಗರಗಳು ಭಾಷಾ ಪಲ್ಲಟಕ್ಕೊಳಗಾಗಿದ್ದು, (ಹಳ್ಳಿಗಳು) ಗ್ರಾಮಗಳು ಕನ್ನಡ ಸಂಸ್ಕೃತಿಯನ್ನು ಕಳೆದುಕೊಂಡಿರಲಿಲ್ಲ ಎಂಬುದು ಜನಪದರ ಮೌಖಿಕ ಸಾಹಿತ್ಯದಿಂದ, ಅವರ ಬದುಕಿನಿಂದ ತಿಳಿಯಬಹುದು.

ಮುಂದೆ ಬಿಜಾಪುರದ ಆದಿಲ್ ಶಾಹಿಗಳು ೧೪೯೦ರಿಂದ ಸ್ವತಂತ್ರ ಸುಲ್ತಾನರಾಗಿ ಆಳತೊಡಗಿದರು. ಸೈನ್ಯಾಧಿಕಾರಿಯಾಗಿದ್ದ ಯುಸೂಫ್ ಆದಿಲ್‌ಖಾನ್ ಸುಮಾರು ಇಪ್ಪತ್ತು ವರ್ಷಗಳ ಕಾಲ ಆಡಳಿತ ನಡೆಸಿ ರಾಯಚೂರಿನಿಂದ ಸೊಲ್ಲಾಪುರದವರೆಗೆ ರಾಜ್ಯದ ಗಡಿಯನ್ನು ವಿಸ್ತರಿಸಿದನು. ವಿಜಯನಗರ ಸಾಮ್ರಾಜ್ಯವು ಪತನವಾದ ನಂತರ ಬಿಜಾಪುರದ ಆದಿಲ್ ಶಾಹಿಗಳಿಗೆ ಬೀದರ್‌ನ ಬರಿದ್ ಶಾಹಿಗಳಿಗೆ ಸೇರಿತು. ೨ನೇ ಇಬ್ರಾಹಿಂ ಎಂಬ ದೊರೆ 'ಕಿತಾಬ್-ಎ-ನವರಸ್' ಎಂಬ ಗ್ರಂಥ ರಚಿಸಿದ್ದು, ಅದು ಕರ್ನಾಟಕ ಇತಿಹಾಸದಲ್ಲಿ ಚಿರಸ್ಥಾಯಿಯಾಗಿದೆ. ಆದರೆ ಈ ಸುಲ್ತಾನರ ಕಾಲಾವಧಿಯಲ್ಲಿ ಕನ್ನಡದ ಹೇಳಿಕೊಳ್ಳುವಂಥ ಕೃತಿಗಳಾವುವೂ ರಚಿತವಾಗಲಿಲ್ಲ. ಆವರೆಗೆ ಸಮೃದ್ಧವಾಗಿ ರಾಜಾಶ್ರಯದ ನೆರವಿನಿಂದ ಬೆಳೆದುಕೊಂಡು ಬಂದಿದ್ದ ಕನ್ನಡ ಸಾಹಿತ್ಯ, ಬಹಮನಿ ಸುಲ್ತಾನರು ಕಠಿಣವಾಗಿ ಆಡಳಿತ ಭಾಷೆಯನ್ನಾಗಿ ಉರ್ದು, ಫಾರಸಿ ಇವುಗಳನ್ನು ಜಾರಿಗೊಳಿಸಿದ ಪರಿಣಾಮವಾಗಿ ಅದಕ್ಕೆ ಧಕ್ಕೆಯಾಯಿತು. ಈ ಕುರಿತು ಸೀತಾರಾಮ ಜಾಗೀರ್‌ದಾರ್ ಅವರು ತಮ್ಮ ಕೃತಿ 'ಹೈದರಾಬಾದ್ ಕರ್ನಾಟಕ'ದಲ್ಲಿ ಈ ರೀತಿ ಹೇಳುತ್ತಾರೆ.

'ಈ ಪ್ರಾಂತವು ಯುದ್ಧರಂಗವಾಗಿ ಪರಿಣಮಿಸಿದ್ದುದರಿಂದ ಇಲ್ಲಿಯವರೆಗೆ ಶಾಂತಿಯಿಂದ ಉಸಿರಾಡಿಸಲು ಅವಕಾಶವಿಲ್ಲದಂತಾಯಿತು. ಇಂಥ ಪರಿಸ್ಥಿತಿಯಲ್ಲಿ ಇವರಲ್ಲಿ ಉತ್ಪಾದಕಶಕ್ತಿ ಉಳಿಯುವುದೆಂತು. ಇವರ ವೈಶಿಷ್ಟವೇ ನಷ್ಟವಾಗಿ ಹೋಯಿತು. ತಿರುಗಿದತ್ತ ಹೊಡೆತ ಬೀಳುತ್ತಿದ್ದಾಗ ಕಾವ್ಯಗಳನ್ನು ಬರೆಯುವುದೆಂತು? ಮನೆ ಮಠಗಳನ್ನು ನಿರ್ಮಿಸುವದೆಂತು? ಲಲಿತ ಕಲೆಗಳ ಪೋಷಣೆಯೆಲ್ಲಿ? ರಕ್ಷಣೆಯೆಲ್ಲಿ? ಭಯ, ನಿರಾಶೆ, ವಿಹಲ್ವತೆಗಳು, ಇವರನ್ನಾವರಿಸಿದವು. ಇದೇ ಸಂದರ್ಭದಲ್ಲಿಯೇ ದಾಸಕೂಟ ಚಳವಳಿ ಆರಂಭವಾದದ್ದು. ಕನ್ನಡ ನುಡಿಗೆ ಈಗ ಅಧಿನಾಯಕರು

ಗಳಿಲ್ಲದಾಗಿತ್ತು. ಮಾತು ಬೀದಿ ಮಾತಾಯಿತು. ರಾಜ ಸಿಂಹಾಸವನನ್ನೇರಿ ಮೆರೆದ ಕಾಲ ಹೋಯಿತು'.[೧೬]

ಮೇಲಿನ ಈ ಮಾತುಗಳನ್ನು ಬಹಮನಿ ಸುಲ್ತಾನರ ಆಳ್ವಿಕೆಯಲ್ಲಿ ಕನ್ನಡಕ್ಕೊದಗಿದ ಸ್ಥಿತಿಯ ಚಿತ್ರಣವನ್ನು ನೀಡುತ್ತವೆ. ಕನ್ನಡ ಸಾಹಿತ್ಯದ ಸಮೃದ್ಧ ಬೆಳೆಕಂಡ ಈ ಪ್ರದೇಶದಲ್ಲಿ ಅನ್ಯಭಾಷಿಕ ಪ್ರಭುತ್ವದಿಂದ ಮೂಲ ಕನ್ನಡಿಗರಿಗೆ ಆದ ನಷ್ಟವನ್ನು ತಿಳಿಸುತ್ತದೆ. ಇದರಿಂದ ಯಾವುದೇ ಭಾಷೆಯ ಬೆಳವಣಿಗೆಯಲ್ಲಿ ಪ್ರಭುತ್ವದ ಪಾತ್ರ ಎಂತಹುದು ಎಂಬುದು ಮನದಟ್ಟಾಗುತ್ತದೆ. ಕನ್ನಡ ಪರಿಸರದಲ್ಲಿ ಇಸ್ಲಾಂ ಸಂಸ್ಕೃತಿಯ ಪರಿಣಾಮದಿಂದ ಇಷ್ಟೆಲ್ಲ ಬದಲಾವಣೆ ಕಂಡಿತು ಎಂದರ್ಥವಲ್ಲ. ಬದಲಾಗಿ ಎರಡು ಸಂಸ್ಕೃತಿಗಳು ಒಂದರೊಳಗೊಂದು ಬೆರೆತು ಸಂಪ್ರದಾಯ, ಆಚರಣೆ, ಅವುಗಳ ನಡುವೆ ನಡೆದ ಕೊಡುಕೊಳ್ಳುವ ವ್ಯವಹಾರಗಳ ಪರಿಣಾಮದಿಂದ ಸಹಜವಾಗಿ ಭಾಷೆಯಲ್ಲಿ ಬದಲಾವಣೆಗಳಾದವು. ಜನರು ಅದನ್ನು ಸಹಜವಾಗಿ ಸ್ವಿಕರಿಸಿದರು. ಆದರೆ ಪ್ರಭುತ್ವ ಅದರ ಲಾಭ ಪಡೆದು ಎರಡೂ ಧರ್ಮಗಳ ಮಧ್ಯೆ ವೈಶಮ್ಯದ ವಿಷಬೀಜ ಬಿತ್ತಿ ಗೊಂದಲಮಯ ವಾತಾವರಣವನ್ನು ಸೃಷ್ಟಿಸುತ್ತಿತ್ತು. ಅದಾವುದನ್ನು ಲೆಕ್ಕಿಸದ ಈ ಪ್ರಾಂತ್ಯದ ಜನರು ಎರಡೂ ಸಂಪ್ರದಾಯದ ಹಬ್ಬ ಹರಿದಿನಗಳಲ್ಲಿ ಭಾಗವಹಿಸಿ ಸಂಭ್ರಮಿಸುವುದನ್ನು, ಶ್ರದ್ಧೆ, ಭಕ್ತಿಗಳನ್ನು ಹೊಂದಿ ಗೌರವಿಸುವುದನ್ನು ಇಂದಿಗೂ ನಾವು ಕಾಣುತ್ತೇವೆ. ಉರುಸು, ಮೋಹರಂ ಹಿಂದುಗಳ ಜಾತ್ರೆ, ವಿವಾಹಾದಿಗಳಲ್ಲಿ, ಮಹಿಮಾಪುರಷರನ್ನು ಆರಾಧಿಸುವಲ್ಲಿ ಜಾತಿಭೇದವಿಲ್ಲದೆ ಪಾಲ್ಗೊಂಡು ಸಂಭ್ರಮ ಪಡುವುದು ಈ ಪ್ರಾಂತ್ಯದ ಜನಪದರ ವಿಶಿಷ್ಟತೆಯಾಗಿದೆ. ಅದನ್ನು ಇಂದಿಗೂ ನಾವು ಕಾಣಬಹುದಾಗಿದೆ. ಕೊಪ್ಪಳದ ಗವಿಸಿದ್ಧೇಶ್ವರ ದೇವಸ್ಥಾನಕ್ಕೆ ಮುಸ್ಲಿಂ ಬಾಂಧವರು ಹಣ್ಣು ಕಾಯಿ ಅರ್ಪಿಸುವುದು, ಕುದರಿಮೋತಿಯ ಮೋಹರಂನಲ್ಲಿ ಜಾತಿಭೇದ ಎಣಿಸದೇ ಎಲ್ಲರಿಗೂ ಆ ಊರಿನವರು ಆತಿಥ್ಯ ನೀಡುವುದು, ತಿಂತಿಣಿ ಮೌನೇಶ್ವರನಿಗೆ ಹಿಂದು ಮುಸ್ಲೀಂ ಎಂಬ ಭೇದಭಾವಗಳಿಲ್ಲದೇ ನಡೆದುಕೊಳ್ಳುವುದು ಇತ್ಯಾದಿ ಘಟನೆಗಳು ಇಂದಿಗೂ ಈ ಪ್ರಾಂತ್ಯದಲ್ಲಿ ಆಚರಣೆಯ ರೀತಿಯಲ್ಲಿ ನಡೆಯುವದನ್ನು ಕಾಣಬಹುದಾಗಿದೆ.

ಒಟ್ಟಾರೆಯಾಗಿ ಕನ್ನಡದ ಅನೇಕ ಅರಸು ಮನೆತನಗಳು ಆಳಿ, ಬಾಳಿ, ಬದುಕಿ, ತಮ್ಮ ಸಾಂಸ್ಕೃತಿಕ ಕುರುಹುಗಳನ್ನು ಹಾಕಿದ್ದು ನಿಜಾಮ್ ಕರ್ನಾಟಕ ಎಂದು ಗುರುತಿಸುವ ಪ್ರದೇಶದಲ್ಲಿಯೇ ಎಂಬುದು ಪ್ರಧಾನವಾದ ಅಂಶವಾಗಿದೆ. ಇತಿಹಾಸದ ಪ್ರಮುಖ ಪಲ್ಲಟಗಳಿಗೆ ಕಾರಣವಾದ ಈ ಭೂಪ್ರದೇಶದಲ್ಲಿ ವಸಾಹತುಶಾಹಿಯ ಪ್ರಭಾವ ಕಿಂಚತ್ತೂ ಆಗದಂತೆ ಮುಂದೆ ನೋಡಿಕೊಂಡಿದ್ದು ಗೋಲ್ಕೊಂಡದ ಸುಲ್ತಾನರು, ನಿಜಾಮರು. ಇಸ್ಲಾಂ ಸಂಸ್ಕೃತಿಯ ಪರಿಪಾಲಕರಾದ ಇವರು ಬೀದರ್, ಗುಲ್ಬರ್ಗಾ, ರಾಯಚೂರು ಪ್ರದೇಶದ ಗಡಿಯನ್ನೊಳಗೊಂಡು ೧೭೨೪ರಲ್ಲಿ ಅಸಫ್‌ಜಾಹ ಮನೆತನದಿಂದ ಆಳ್ವಿಕೆ ಆರಂಭಿಸಿದರು. ಅಲ್ಲಿಂದ ಒಂಬತ್ತು ಜನ ಸುಲ್ತಾನರನ್ನು ಕಂಡ ಈ ಪ್ರದೇಶ ಮುಂದೆ ಸ್ವಾತಂತ್ರ್ಯ ಪಡೆದದ್ದು ೧೯೪೮ ಸೆಪ್ಟಂಬರ ೧೭ರಲ್ಲಿ. ಅದರದೇ ಆದ ಒಂದು ಚರಿತ್ರೆ ಇದೆ. ಬ್ರಿಟೀಶರು ಕರ್ನಾಟಕವನ್ನು ಮುಂಬೈ ಕರ್ನಾಟಕ, ಮದ್ರಾಸ್‌ಪ್ರಾಂತ, ಹೈದರಾಬಾದ್

ಕರ್ನಾಟಕ, ಮಂಗಳೂರು ಪ್ರಾಂತ ಎಂದು ವಿಂಗಡಿಸಿ ನೇರವಾಗಿ ಆಳ್ವಿಕೆಯನ್ನು ನಡೆಸತೊಡಗಿದ್ದರು. ಹೈದರಾಬಾದ್ ಕರ್ನಾಟಕ ಪ್ರಾಂತವನ್ನು ಹೊರತುಪಡಿಸಿ ಉಳಿದ ಪ್ರಾಂತಗಳು (ವಸಾಹತುಶಾಹಿ) ಬ್ರಿಟೀಶರ ನೇರ ಆಡಳಿತದಿಂದ ಅಭಿವೃದ್ಧಿಯನ್ನು ಕಂಡರೆ, ಹೈದರಾಬಾದ್ ಕರ್ನಾಟಕ ನಿಜಾಮರ ಮತಾಂಧ ಧೋರಣೆಯಿಂದ ಅಭಿವೃದ್ಧಿ ಕಾಣದೆ ಹಾಗೆಯೆ ಉಳಿಯಿತು.

**ಕೊನೆ ಟಿಪ್ಪಣಿಗಳು**

೧. ಎಸ್ ನಿಜಲಿಂಗಪ್ಪ ಶತಮಾನೋತ್ಸವ ಸ್ಮರಣೆ, ಕರ್ನಾಟಕ ರಾಜಕೀಯ ಚಿಂತನೆ, ಪು–೨೯೭.

೨. ಬಳ್ಳಾರಿ ಗೆಜೆಟಿಯರ್, ಪು–೯೧.

೩. ಕನ್ನಡ ವಿಷಯ ವಿಶ್ವಕೋಶ, ಪು–೪೮೩.

೪. ಅದೇ, ಪು–೪೮೫.

೫. ಅದೇ, ಪು–೧೦೧೫.

೬. ಗೋಪಾಲರಾವ ಎಚ್,ಎಸ್, ಕರ್ನಾಟಕ ಏಕೀಕರಣ ಇತಿಹಾಸ, ಪು–೪.

೭. ಅಮರೇಶ ನುಗಡೋಣಿ, ಹೈದರಾಬಾದು ಕರ್ನಾಟಕದ ಹಾಡುಪಾಡು, ಪು–೨

೮. ಪಾಲಾಕ್ಷ, ಸಮಗ್ರ ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ, ಪು–೫೫.

೯. ಮುಗಳಿ ರಂ.ಶ್ರೀ., ಕನ್ನಡ ಸಾಹಿತ್ಯ ಚರಿತ್ರೆ ಕಿರಿಯ ಆವೃತ್ತಿ, ಪುಟ–೩.

೧೦. ಅಮರೇಶ ನುಗಡೋಣಿ, ಹೈದರಾಬಾದು ಕರ್ನಾಟಕದ ಹಾಡು ಪಾಡು, ಪುಟ–೬

೧೧. ಕನ್ನಡ ವಿಷಯ ವಿಶ್ವಕೋಶ, ಪು–೪೩.

೧೨. ಭೂಸನೂರಮಠ ಸಂ.ಶಿ.,(ಸಂ) ವಚನ ಸಾಹಿತ್ಯ ಸಂಗ್ರಹ, ಪು–೫೩೮.

೧೩. ಸುಬ್ಬಣ್ಣ ಕೆ.ವಿ., ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು, ಪು–೪೪.

೧೪. ರಹಮತ್ ತರೀಕೆರೆ, (ಸಂ) ಕವಿರಾಜಮಾರ್ಗ : ಸಾಂಸ್ಕೃತಿಕ ಮುಖಾಮುಖಿ, ಪು–೫೨.

೧೫. ಸೀತಾರಾಮ ಜಾಗೀರದಾರ, ಹೈದರಾಬಾದ್ ಕರ್ನಾಟಕ, ಪು–೫.

೧೬. ಅದೇ, ಪು–೧೨

# ಅಧ್ಯಾಯ ೩

# ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಂಸ್ಕೃತಿಯ ಚಾರಿತ್ರಿಕ ಸ್ಥಿತಿಗತಿಗಳ ಸಮೀಕ್ಷೆ

---

೩.೧. ನಿಜಾಮರು ಮತ್ತು ಹೈದರಾಬಾದ್ ಸಂಸ್ಥಾನ

೩.೨. ನಿಜಾಮರಿಂದ ವಿಮೋಚನೆ

## ಅಧ್ಯಾಯ ೩

# ರಾಜಕೀಯ, ಸಾಮಾಜಿಕ, ಧಾರ್ಮಿಕ ಸಂಸ್ಕೃತಿಯ ಚಾರಿತ್ರಿಕ ಸ್ಥಿತಿಗತಿಗಳ ಸಮೀಕ್ಷೆ

ದೆಹಲಿಯ ಚಕ್ರವರ್ತಿ ಔರಂಗಜೇಬನು ದಕ್ಷಿಣ ಭಾರತದಲ್ಲಿ ದಂಡಯಾತ್ರೆಯನ್ನು ಮಾಡಿದ ಮೇಲೆ ಅವನ ಆಡಳಿತ ವ್ಯಾಪ್ತಿಯಲ್ಲಿ ಮುಂಬಯಿ, ಮದರಾಸು, ಕರ್ನಾಟಕ ಹಾಗೂ ಮೈಸೂರಿನ ಕೆಲವು ಭಾಗಗಳು ಸೇರಿಕೊಂಡವು. ಈ ಭಾಗಗಳಲ್ಲಿ ಮರಾಠಿ, ತೆಲುಗು ಹಾಗೂ ಕನ್ನಡ ಮಾತನಾಡುವ ಪ್ರಜೆಗಳಿದ್ದರು. ದಕ್ಷಿಣ ಪ್ರಾಂತ್ಯವನ್ನು ನೋಡಿಕೊಳ್ಳುವುದಕ್ಕೆ ಔರಂಗಜೇಬನು ಒಬ್ಬ ಆಡಳಿತ ಅಧಿಕಾರಿಯನ್ನು ನೇಮಿಸಿದನು. ದಂಡಯಾತ್ರೆಯನ್ನು ಮುಗಿಸಿ ತನ್ನ ಮೂಲಸ್ಥಾನವಾದ ಉತ್ತರದ ಕಡೆಗೆ ಔರಂಗಜೇಬನು ಮರಳಿದ ತರುವಾಯ ಈ ಪ್ರಾಂತ್ಯದ ಆಡಳಿತಾಧಿಕಾರಿಯಾದ ಮೀರ್ ಕಮರುದ್ದೀನ್ ೧೭೨೪ರಲ್ಲಿ ತನ್ನ ಅಧೀನದಲ್ಲಿದ್ದ ಪ್ರದೇಶವನ್ನು ಸ್ವತಂತ್ರವಾಗಿ ಆಳತೊಡಗಿದನು. ಇವನಿಗೆ 'ಆಸಫ್ ಜಾಹಾ' ಎಂಬ ಬಿರುದು ಇತ್ತು. ಇವನ ವಂಶಜರು ೧೯೪೮ರ ವರೆಗೆ ಏಳು ಜನರು ಅಧಿಕಾರಕ್ಕೆ ಬಂದು ರಾಜ್ಯಭಾರ ಮಾಡಿದರು. ಇವರಿಗೆ ಹೈದರಾಬಾದ್ ನಿಜಾಮರೆಂದು ಇವರು ಆಳುತ್ತಿದ್ದ ಪ್ರದೇಶವನ್ನು 'ಹೈದರಾಬಾದ್ ಸಂಸ್ಥಾನ'ವೆಂದು ಕರೆಯಲ್ಪಟ್ಟಿತು. ಈ ಪ್ರದೇಶವು ತನ್ನದೇ ಆದ ವಿಶಿಷ್ಟ ಚರಿತ್ರೆಯನ್ನು ಹೊಂದಿದೆ.

ಅಶೋಕನ ಶಿಲಾಶಾಸನಗಳು ನಿಜಾಮರ ಪ್ರಾಂತ್ಯವಾಗಿದ್ದ ಮಸ್ಕಿ, ಕೊಪ್ಪಳ ಸ್ಥಳಗಳಲ್ಲಿ ದೊರೆತಿವೆ. ಆ ಕಾಲದಲ್ಲಿ ಅಶೋಕನಿಗೆ ಈ ಎರಡೂ ಸ್ಥಳಗಳು ದಕ್ಷಿಣ ಪ್ರಾಂತ್ಯದ ಮುಖ್ಯ ಕೇಂದ್ರಗಳಾಗಿದ್ದವು. ಬೌದ್ಧ ಸಂಘಗಳನ್ನು ರಚಿಸಿ ತನ್ನ ಬೌದ್ಧಮತವನ್ನು ಪ್ರಚಾರ ಮಾಡಲು ಆರಂಭಿಸಿದ್ದು ಇಲ್ಲಿಂದಲೇ. ಮಸ್ಕಿಯ ಹಿಂದಿನ ರೂಪವು 'ಮಾಸಂಗಿ' ಎಂದಿತ್ತು. ಮೂಲ

'ಮಹಾಸಂಘ' ಎಂಬುದು 'ಮಾಸಂಗಿ'ಯಾಗಿರಬೇಕೆಂದು, ಇದರಿಂದ ಮಸ್ಕಿಯ ಮೊದಲ ಹೆಸರು ಆ ಕಾಲದಲ್ಲಿ 'ಮಹಾಸಂಘ' ಎಂದಿರಬೇಕೆಂದು ಚಾರಿತ್ರಿಕ ದಾಖಲೆಗಳು ಉಲ್ಲೆಖಿಸುತ್ತವೆ. ಈ ಸ್ಥಳವು ಅಶೋಕನ ಕಾಲದಲ್ಲಿ ಬೌದ್ಧ ಭಿಕ್ಷುಗಳ ನೆಲೆಯಾಗಿತ್ತು. ಅಲ್ಲದೆ ಬೌದ್ಧಮತದ ಪ್ರಚಾರದ ಮುಖ್ಯ ಕೇಂದ್ರವೂ ಆಗಿತ್ತೆಂದು ಈ ಹಿಂದೆ ಹೇಳಿದೆ. ಈ ಭಾಗದ ಕೊಪ್ಪಳವು ಪ್ರಾಚೀನ ಕಾಲದಿಂದಲೂ ಬಹುಮುಖ್ಯ ಘಟನೆಗಳಿಗೆ ಕೇಂದ್ರವಾಗಿದೆ. ಇದು ಆರಂಭದಲ್ಲಿ ಬೌದ್ಧಮತಕ್ಕೂ ನಂತರ ಜೈನಮತಕ್ಕೂ ಅದು ನೆಲೆಯಾಗಿತ್ತು. ಕೊಪ್ಪಳವನ್ನು ಶ್ರೀವಿಜಯ, ರನ್ನರು ತಮ್ಮ ಕಾವ್ಯಗಳಲ್ಲಿ ಹೆಸರಿಸಿದ್ದಾರೆ. ರನ್ನನು ಇದನ್ನು ಜೈನಕ್ಷೇತ್ರವೆಂದು ಉಲ್ಲೇಖಿಸಿದ್ದಾನೆ. ರನ್ನನ 'ಸಾಹಸಭೀಮ ವಿಜಯ' ಎಂಬ ಕೃತಿಯಲ್ಲಿ ತನಗೆ ಆಶ್ರಯದಾತೆಯಾಗಿದ್ದ ಅತ್ತಿಮಬ್ಬೆಯನ್ನು ಕುರಿತು 'ನೆಗಳ್ದ ಕೋಪಣಾಚಲದಂತೆ ಪವಿತ್ರ' ಎಂದು ಬಣ್ಣಿಸಿದ್ದಾನೆ. ಇದರಿಂದ 'ನಿಜಾಮ್ ಪ್ರಾಂತ್ಯ'ದ ಈ ಕನ್ನಡ ಭಾಗವು ಪುರಾತನ ಕಾಲದಿಂದ ಚಕ್ರವರ್ತಿಗಳ ಆಳ್ವಿಕೆಗೂ, ಮತ ಪ್ರಚಾರಗಳಿಗೂ ಮುಖ್ಯ ನೆಲೆಯಾಗಿತ್ತೆಂದು ಹೇಳಬಹುದು.

ಅಶೋಕ ಚಕ್ರವರ್ತಿಯ ನಂತರ ದಕ್ಷಿಣ ಪ್ರಾಂತ್ಯದಲ್ಲಿ ಕ್ರಿ.ಶ. ಆರಂಭದಿಂದ ಮೂರು ಶತಮಾನಗಳವರೆಗೆ ಶಾತವಾಹನರು ರಾಜ್ಯಭಾರ ಮಾಡಿದರು. ಈ ಮನೆತನಕ್ಕೆ 'ಆಂಧ್ರಭೃತ್ಯ' ಎಂಬ ಹೆಸರೂ ಇದೆ. ಇವರು ಆಳಿದ ಪ್ರದೇಶದಲ್ಲಿ ನಿಜಾಮ್ ಪ್ರಾಂತ್ಯವೂ ಸೇರಿತ್ತು. ಅದರಲ್ಲೂ ಕನ್ನಡದ ಬಹುಭಾಗ ಸೇರಿಕೊಂಡಿತ್ತು. ಶಾತವಾಹನರ ಕಾಲದ ನಂತರ ಕರ್ನಾಟಕವು ಒಬ್ಬ ರಾಜನ ಅಧಿಪತ್ಯಕ್ಕೆ ಒಳಪಡದೆ ಹಲವಾರು ರಾಜಮನೆತನಗಳ ಪಾಲಾಗಿ ಬಿಡಿಬಿಡಿಯಾಗಿ ಹಂಚಿಹೋಯಿತು. ಬನವಾಸಿಯ ಕದಂಬರು, ತಲಕಾಡಿನ ಗಂಗರು, ನಳಂಬರು ಮುಂತಾದವರು ಕನ್ನಡ ರಾಜ್ಯವನ್ನು ಆಳತೊಡಗಿದರು. ಆರನೆಯ ಶತಮಾನದ ಆರಂಭದ ಹೊತ್ತಿಗೆ ಬಾದಾಮಿಯಲ್ಲಿ ಚಾಲುಕ್ಯ ರಾಜರು ರಾಜ್ಯವನ್ನು ಕಟ್ಟಿಕೊಂಡು ಅದನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡರು.

೭ನೇ ಶತಮಾನದ ಆರಂಭದಲ್ಲಿ ಎರಡನೆಯ ಪುಲಕೇಶಿಯು ಸಂಪೂರ್ಣ ಸ್ವತಂತ್ರನಾಗಿ ನರ್ಮದೆಯಿಂದ ಪಲ್ಲವ ರಾಜ್ಯದವರೆಗೆ ಸಾಮ್ರಾಜ್ಯವನ್ನು ವಿಸ್ತರಿಸಿದನು. 'ಕರ್ನಾಟಕ ಸಾಮ್ರಾಜ್ಯದ ಪ್ರಥಮ ಸಾರ್ವಭೌಮ' ಎಂದು ಪುಲಕೇಶಿಗೆ ಕರೆಯಲಾಗುತ್ತದೆ. ಇವನು ಉತ್ತರದ ಹರ್ಷವರ್ಧನನನ್ನು ನರ್ಮದಾ ನದಿಯ ದಂಡೆಯಲ್ಲಿ ತಡೆದು ಸೋಲಿಸಿ ಹಿಮ್ಮೆಟ್ಟಿಸಿದನು. ಚರಿತ್ರೆಯಲ್ಲಿ ಇದೊಂದು ಮರೆಯಲಾರದ ಘಟನೆ. ಉತ್ತರದ ಅರಸನನ್ನು ದಕ್ಷಿಣದ ಅರಸನು ಸೋಲಿಸಿದುದರ ಪರಿಣಾಮವಾಗಿ ಉತ್ತರದ ಅರಸರು ದಕ್ಷಿಣದ ಅರಸರ ಬಗ್ಗೆ ಭಯವನ್ನು ತಾಳಿದರು. ಕನ್ನಡಿಗರ ಶಕ್ತಿಯ ಅರಿವು ಉತ್ತರದವರೆಗೆ ಆದದ್ದು ವಿಶೇಷ ಎಂಬ ಅಂಶವನ್ನು ಚೀನಾದೇಶದ ಬೌದ್ಧ ಯಾತ್ರಿಕ ಹ್ಯೂಯನ್‌ತ್ಸಾಂಗ್‌ನ ಗ್ರಂಥದಿಂದ ತಿಳಿಯಬಹುದೆಂದು ಚರಿತ್ರೆಯು ಹೇಳುತ್ತದೆ. ಚಾಲುಕ್ಯರ ಕಾಲದ ಆಡಳಿತವೆಂದರೆ ಕನ್ನಡಿಗರ ಏಳಿಗೆಯ ಕಾಲವೆಂದೇ ಹೇಳಬೇಕು. ಸ್ವತಂತ್ರ ರಾಜ್ಯ ಸಿಕ್ಕದ್ದು ಕನ್ನಡಿಗರಿಗೆ ತಮ್ಮ ಸಂಸ್ಕೃತಿಯ ಸ್ವರೂಪವನ್ನು ವಿಸ್ತರಿಸಿಕೊಳ್ಳಲು ಸಾಧ್ಯವಾಯಿತು. ಭಾಷೆ, ಸಾಹಿತ್ಯ, ಧರ್ಮ, ವಾಸ್ತುಶಿಲ್ಪ ಮುಂತಾದ ಸಾಂಸ್ಕೃತಿಕ ಅರಿವು ಹೆಚ್ಚಿಸಿಕೊಳ್ಳಲು ಅಣಿಯಾದದ್ದು ಈ ಕಾಲದಲ್ಲಿಯೇ.

ರಾಷ್ಟ್ರಕೂಟರ ರಾಜ್ಯಾಡಳಿತ ಆರಂಭವಾದ ಕಾಲದಿಂದ ನಿಜಾಮ್ ಪ್ರಾಂತ್ಯದ ಕನ್ನಡ ಭಾಗವು ಎಲ್ಲ ಚಳವಳಿಗೆ ಮುಖ್ಯ ನೆಲೆಯಾಯಿತು. ರಾಷ್ಟ್ರಕೂಟರ ರಾಜಧಾನಿ ಮಳಖೇಡವಾಯಿತು. ನೃಪತುಂಗನು ಮಳಖೇಡವನ್ನು ಸಾಂಸ್ಕೃತಿಕ ಕೇಂದ್ರವನ್ನಾಗಿ ಮಾಡಿ ಇಡೀ ಹಿಂದೂಸ್ಥಾನದಲ್ಲಿ ಎದ್ದುಕಾಣುವಂತೆ ಶ್ರಮಿಸಿದನು. ಅನ್ಯದೇಶದ ವ್ಯಾಪಾರಿಗಳೂ ಕೂಡ ಮಳಖೇಡದ ಮಹತ್ವವನ್ನು ಪ್ರಸ್ತಾಪಿಸುವಂತಾಯಿತು. ನೃಪತುಂಗನ ಪೂರ್ವಿಕನಾದ ಮೊದಲನೆಯ ಕೃಷ್ಣನು ಎಲ್ಲೋರದ ಕೈಲಾಸ ದೇವಾಲಯವನ್ನು ಕಟ್ಟಿಸಿ ಕನ್ನಡಿಗರ ಶಿಲ್ಪಕಲೆಯ ಕುಶಲತೆಯನ್ನೂ ಲಲಿತಕಲೆಯ ಅಭಿರುಚಿಯನ್ನೂ ಎತ್ತಿ ಹಿಡಿದನು. ಮುಂದೆ ಮೂರನೆಯ ಕೃಷ್ಣನ ಕಾಲದ ಹೊತ್ತಿಗೆ ಅಂದರೆ ೧೦ನೇ ಶತಮಾನದಲ್ಲಿ ಕನ್ನಡ ಸಾಹಿತ್ಯವು ಕವಿ ಚಕ್ರವರ್ತಿಗಳನ್ನೂ ಪಡೆಯುವ ಕಾಲವಾಯಿತು. ಈ ಶತಮಾನವು ರಾಜಕೀಯ ಮತ್ತು ಸಾಹಿತ್ಯ ಚರಿತ್ರೆಗಳೆರಡರಲ್ಲಿಯೂ ಮಹತ್ವವನ್ನು ಪಡೆಯಿತು. ೧೦ನೇ ಶತಮಾನದ ಕೊನೆಗೆ ಚಾಲುಕ್ಯರ ಎರಡನೆಯ ತೈಲಪನು ಅಂತ್ಯವಾಗುತ್ತಿದ್ದ ಕಲ್ಯಾಣಿ ಚಾಲುಕ್ಯರ ವಂಶದ ಕುಡಿಯನ್ನು ಚಿಗುರಿಸಿದನು. ಆದರೆ ಮಾನ್ಯಖೇಟ ನಗರವನ್ನು ಯುದ್ಧದಲ್ಲಿ ಅಗ್ನಿಗೆ ಆಹುತಿ ಮಾಡಿದನೆಂದು ಹೇಳಲಾಗುತ್ತದೆ. ರಾಷ್ಟ್ರಕೂಟರ ರಾಜಧಾನಿಯಾಗಿದ್ದ ಮಳಖೇಡದಲ್ಲಿ ಅನೇಕ ಗ್ರಂಥಗಳು ನಾಶವಾದವು. 'ಕವಿರಾಜಮಾರ್ಗ'ಕಾರ ಉಲ್ಲೇಖಿಸುವ ಅನೇಕ ಕವಿಗಳ ಕಾವ್ಯ ಗ್ರಂಥಗಳು ಇಲ್ಲಿ ಅಗ್ನಿಗೆ ಆಹುತಿಯಾದವೆಂದು ತಿಳಿಯುತ್ತದೆ. ಆದರೂ ಈ ಎರಡನೆಯ ತೈಲಪನು ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿದನು. ಮಳಖೇಡದ ಸಾಂಸ್ಕೃತಿಕ ಪರಿಸರವು ಕಲ್ಯಾಣಕ್ಕೆ ವರ್ಗವಾಯಿತು. ರನ್ನ ಕವಿ ಕನ್ನಡ ರಾಜ್ಯದ ಮುಖ್ಯ ಸ್ಥಳಕ್ಕೆ ಬಂದದ್ದು, ಕವಿಚಕ್ರವರ್ತಿ ಎಂಬ ಬಿರುದು ಪಡೆದದ್ದು, ಸಾಹಿತ್ಯ ಮತ್ತೆ ಏಳಿಗೆ ಹೊಂದಿದ್ದು ಈ ಕಾಲದಲ್ಲಿಯೇ ಮತ್ತು ಈ ಪ್ರಾಂತ್ಯದಲ್ಲಿಯೇ.

೧೧ನೇ ಶತಮಾನದಲ್ಲಿ ಕರ್ನಾಟಕ ಸಾಮ್ರಾಜ್ಯವು ಪುನಃ ಒಡೆದು ಹೋಗುವ ಸ್ಥಿತಿಯಲ್ಲಿದ್ದಾಗ ೬ನೇ ವಿಕ್ರಮಾದಿತ್ಯನು ತನ್ನ ಸಾಮಾರ್ಥ್ಯದಿಂದ ರಾಜ್ಯಭಾರಕ್ಕೆ ಬಂದನು. ಇವನಿಗೆ ಶಕಪುರುಷನೆಂಬ ಖ್ಯಾತಿಯೂ ಇದೆ. ಇವನು ಸಾಮ್ರಾಜ್ಯದ ವಿಸ್ತರಣೆಯಂತೆ ಕನ್ನಡಿಗರ ಸಂಸ್ಕೃತಿಯನ್ನು ಎತ್ತಿ ಹಿಡಿದನು. ಇವನಿಂದ ಕನ್ನಡಿಗರಿಗೆ ಒಬ್ಬ 'ಶಕ ಪುರುಷ'ನು ದೊರೆತು ಅವನ ಹೆಸರಲ್ಲಿ 'ಶಕ' ಗಣನೆ ಆರಂಭವಾಯಿತು. ಈ ಕಾಲದಲ್ಲಿ ಸಾಹಿತ್ಯಕ್ಕಿಂತ ಶಾಸನಗಳು ಹೆಚ್ಚು ರಚನೆಯಾದವು. ಶಾಸನ ಸಾಹಿತ್ಯ ಪ್ರವರ್ಧಮಾನಕ್ಕೆ ಬಂತು. ಗುಲಬರ್ಗಾ, ಬೀದರ, ರಾಯಚೂರು, ಹೈದರಾಬಾದ್ ಸರಹದ್ದಿನಲ್ಲಿ ಹಾಗೂ ತೆಲಂಗಾಣದಲ್ಲಿಯೂ ಈ ವಿಕ್ರಮಾದಿತ್ಯನ ಶಾಸನಗಳು ದೊರೆಯುವಂತಾದವು. ಇವನ ಕೀರ್ತಿ ಉತ್ತರ ಹಿಂದೂಸ್ಥಾನದಲ್ಲಿಯೂ ಹರಡಿತು. ಬಿಲ್ಹಣ, ವಿಜ್ಞಾನೇಶ್ವರ ಮುಂತಾದ ಪ್ರತಿಭಾವಂತರು ಇವನ ಆಸ್ಥಾನದಲ್ಲಿದ್ದರು. 'ವಿಕ್ರಮಾಂಕದೇವ ಚರಿತ್ರೆ' ಹುಟ್ಟಿತು. ಕನ್ನಡಿಗರ ಜೀವನ ಕುರಿತ ಈ ಕೃತಿ ಸಂಸ್ಕೃತದಲ್ಲಿದ್ದರೂ ಕರ್ನಾಟಕತ್ವವನ್ನು ಬಿಂಬಿಸುತ್ತದೆ. ಬಿಲ್ಹಣನು 'ವಿಕ್ರಮಾಂಕದೇವ ಚರಿತ್ರೆ'ಯನ್ನು ಕನ್ನಡದಲ್ಲಿ ಬರೆದಿದ್ದರೆ ಅವನೂ ಪಂಪ, ರನ್ನರ ಸಾಲಿನಲ್ಲಿರುತ್ತಿದ್ದನೋ ಇಲ್ಲವೋ ಊಹೆಯ ಮಾತು. ವಿಕ್ರಮಾದಿತ್ಯನ ಕಾಲದಲ್ಲಿ ಅಸಂಖ್ಯಾತ ಶಾಸನಗಳು ಹುಟ್ಟಿದವು. ಈ ಶಾಸನಗಳ ಭಾಷೆಯೇ ಒಂದು ಭಂಡಾರವಾಯಿತು. ಕನ್ನಡ ಭಾಷೆ ಹಳೆಗನ್ನಡ

ರೂಪದಿಂದ ನಡುಗನ್ನಡ ರೂಪಕ್ಕೆ ಹೊರಳುವ ಲಕ್ಷಣಗಳು ಇದರಿಂದ ತಿಳಿಯುವಂತಾಯಿತು. ವಿಕ್ರಮಾದಿತ್ಯನ ಅಧೀನ ಮಾಂಡಲಿಕರೂ ದೇವಾಲಯಗಳನ್ನು ಕಟ್ಟಿದರು. ಈ ಕಾಲದ ವಾಸ್ತುಶಿಲ್ಪದ ಶೈಲಿಯ ದೇವಾಲಯಗಳು ಈಗಲೂ ನಿಜಾಮ್ ಪ್ರಾಂತ್ಯದಲ್ಲಿವೆ.

ಕಲ್ಯಾಣ ಚಾಲುಕ್ಯ ವಂಶದ ರಾಜರು ಕಾಲಾಂತರದಲ್ಲಿ ಶಕ್ತಿಗುಂದಿದವರಾಗಿ ಮಾಂಡಲೀಕರೆಲ್ಲರು ಸ್ವತಂತ್ರರಾಗಲು ಪ್ರಯತ್ನಿಸುತ್ತಿರುವಾಗ ಕಲಚೂರಿ ವಂಶದ ಬಿಜ್ಜಳನು ಅದರಲ್ಲಿ ಯಶಸ್ಸನ್ನು ಕಾಣುತ್ತಾನೆ. ಈತನು ಕ್ರಿ.ಶ. ೧೧೬೦ರ ಸುಮಾರಿನಲ್ಲಿ ಕಲ್ಯಾಣವನ್ನು ಆಳತೊಡಗಿದನು. ಇವನ ಮಂತ್ರಿಯಾದ ಬಸವಣ್ಣನು ರಾಜಕೀಯ ವಲಯದಲ್ಲಿದ್ದುಕೊಂಡು, ತನ್ನ ಕಾಲದ ಹೊತ್ತಿಗೆ ಎಲ್ಲ ಕ್ಷೇತ್ರಗಳಲ್ಲಿ ತುಂಬಿದ್ದ ಮೌಢ್ಯವನ್ನು, ಶೋಷಣೆಯನ್ನು, ಜಾತೀಯತೆಯನ್ನು ತಡೆಗಟ್ಟಿ ಹೊಸ ವ್ಯವಸ್ಥೆಯನ್ನು ತರಲು ಶ್ರಮಿಸಿದನು. ಕೇವಲ ಸಾಮಾನ್ಯ ಜನರನ್ನು ನಂಬಿಕೊಂಡು ಆಂದೋಲನವನ್ನು ಪ್ರಾರಂಭಿಸಿ ಧರ್ಮ, ರಾಜಕೀಯವನ್ನೂ ಎದುರು ಹಾಕಿಕೊಂಡು, ಸಮಾಜದ ಬದಲಾವಣೆಗೆ ಪ್ರಯತ್ನಿಸಿದನು. ಅಸಂಖ್ಯಾತ ಜನರನ್ನು ಒಂದೆಡೆಯಲ್ಲಿ ಸೇರಿಸಿ 'ಶರಣ' ವ್ಯವಸ್ಥೆಯನ್ನು ಹುಟ್ಟುಹಾಕಿದ ಕೀರ್ತಿ ಬಸವಣ್ಣನಿಗೆ ಸಲ್ಲುತ್ತದೆ. ಜಾತಿ ನಿರ್ಮೂಲನೆ, ಕಡ್ಡಾಯ ದುಡಿಮೆ, ಸಮಾನ ಬಾಳು ಇವು ಸಮಾಜದಲ್ಲಿ ನೆಲೆಗೊಳ್ಳುವಂತೆ ಹೋರಾಡಿದ. ಇದರ ಪರಿಣಾಮವಾಗಿ ಸಮಾಜದಲ್ಲಿ ಪರಿವರ್ತನೆ ಕಾಣುವಂತಾಯಿತು. ಜೈನ, ಬ್ರಾಹ್ಮಣ ಮತಾವಲಂಬಿಗಳಿಗೆ ನೆಲೆಯಾದ ನಾಡನ್ನು 'ಜಂಗಮ' ನಾಡನ್ನಾಗಿ ಪರಿವರ್ತಿಸಲು ಶರಣರು, ಜನಸಾಮಾನ್ಯರು ಶ್ರಮಿಸಿದರು. ಆ ಕಾಲದಲ್ಲಿ ನೂರಾರು ಶರಣರು ಸೃಷ್ಟಿಸಿದ 'ವಚನ'ಗಳು ಇಂದಿಗೂ ಸಮಾಜ ಪರಿವರ್ತನೆಗೆ ಪ್ರೇರಕವಾಗಿವೆ. ಬೌದ್ಧಿಕ ಸಂಘರ್ಷಕ್ಕೆ ನೆಲೆಯಾಗಿವೆ. ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಮಾದರ ಚೆನ್ನಯ್ಯ, ನುಲಿಯ ಚಂದಯ್ಯ, ಆಯ್ದಕ್ಕಿ ಲಕ್ಕಮ್ಮ, ಮುಕ್ತಾಯಕ್ಕ ಮುಂತಾದವರು ಜಾತಿಮತವನ್ನು ಮೀರಿದ ಪ್ರತಿಭೆಗಳಾಗಿ ಸೃಷ್ಟಿಯಾದದ್ದು ಈ ಕಾಲದಲ್ಲಿ. ಅಲ್ಲದೇ ಅನ್ಯರಾಜ್ಯಗಳಿಂದ ಬಂದ ಶರಣರು ಇಲ್ಲಿ ಕನ್ನಡ ಭಾಷೆಯನ್ನು ಕಲಿತು ಕನ್ನಡದಲ್ಲಿಯೇ ವಚನಗಳನ್ನು ಬರೆದಿದ್ದಾರೆ. ಕಾಶ್ಮೀರದ ಮಹಾದೇವ, ಅಪಘಾನಿಸ್ತಾನದ ಮರಳಾ ಶಂಕರದೇವ, ತೆಲಂಗಾಣದ ಬೊಮ್ಮಯ್ಯ, ಸೌರಾಷ್ಟ್ರದ ಆದಯ್ಯ ಮುದಲಾದವರು ಪ್ರಮುಖರು. ಇಂತ ವೈಚಾರಿಕ ಸಂಘರ್ಷಕ್ಕೆ ನೆಲೆಯಾದ ಬಸವಕಲ್ಯಾಣವು ನಿಜಾಮ್ ಪ್ರಾಂತ್ಯದಲ್ಲಿರುವುದು ವಿಶೇಷವಾಗಿದೆ.

ಬಿಜ್ಜಳನ ತರುವಾಯ ಅವನ ಮಕ್ಕಳು ಹೆಚ್ಚು ಕಾಲ ರಾಜ್ಯಭಾರ ಮಾಡಲಿಲ್ಲ. ಒಂದು ಕಡೆಯಿಂದ ಕಾಕತೀಯ ರುದ್ರನು, ಮತ್ತೊಂದು ಕಡೆಯಿಂದ ಸೇವುಣರ ಭಿಲ್ಲಮನು, ಇನ್ನೊಂದು ಕಡೆಯಿಂದ ಹೊಯ್ಸಳರ ವೀರಬಲ್ಲಾಳನು ಕಲ್ಯಾಣಿ ಚಾಲುಕ್ಯರ ಸಾಮ್ರಾಜ್ಯವನ್ನು ಆಕ್ರಮಿಸಲು ಪ್ರಯತ್ನಿಸಿ ಸಫಲರಾದರು. ರುದ್ರದೇವನು ಕಾಕತೀಯ ಸಿಂಹಾಸನವನ್ನು ಏರಿದನು. ಮುಂದೆ ಈ ರಾಜ್ಯವೇ ತೆಲುಗು ರಾಜ್ಯವಾಯಿತು. ಸೇವುಣರ ಭಿಲ್ಲಮನು ಯಾದವ ರಾಜ್ಯಕ್ಕೆ ಅಧಿಪತಿಯಾದನು. ಮುಂದೆ ಇದು ಮಹಾರಾಷ್ಟ್ರವಾಯಿತು. ಇನ್ನುಳಿದ ಭಾಗವೆಲ್ಲವೂ ವೀರಬಲ್ಲಾಳನಿಗೆ ಸೇರಿತು. ತುಂಗಭದ್ರೆಯ ದಕ್ಷಿಣ ಪ್ರಾಂತ್ಯವೆಲ್ಲವೂ ಬರಿ ಕರ್ನಾಟಕವಾಗಿ

ಉಳಿಯಿತು. ೧೨ನೇ ಶತಮಾನದ ಕೊನೆಯ ಹೊತ್ತಿಗೆ ಮಹಾರಾಷ್ಟ್ರ, ಆಂಧ್ರ ಹಾಗೂ ಕರ್ನಾಟಕಗಳೆಂಬ ಪ್ರತ್ಯೇಕವಾದ ಪ್ರಾಂತ್ಯಗಳ ವಿಭಜನೆಗೆ ಕಾರಣವಾಯಿತು. ಈ ಮೂರು ರಾಜ್ಯಗಳ ಅರಸರ ನಡುವೆ ನಡೆದ ಹೋರಾಟವು ನಿರಂತರವಾಗಿ ಮುಂದುವರಿಯುತ್ತಲೇ ಹೋಯಿತು. ಒಬ್ಬ ರಾಜನ ತರುವಾಯದಲ್ಲಿ ಪಟ್ಟಕ್ಕೆ ಬಂದ ರಾಜನು ಕೂಡಲೇ ತನ್ನ ನೆರೆಯ ರಾಜನೊಡನೆ ಯುದ್ಧ ಹೂಡುವುದು ಒಂದು ಸಂಪ್ರದಾಯವಾಗಿ ಹೋಯಿತು. ಆದರೂ ಈ ರಾಜ ಮನೆತನದವರು ಅವಕಾಶ ಸಿಕ್ಕಾಗಲೆಲ್ಲ ಸಾಹಿತ್ಯ ಕಲೆಗಳಿಗೆ ಪ್ರೋತ್ಸಾಹಿಸಿ ಬೆಳೆಸಿದರು. ಸೇವುಣ, ಯಾದವರ ಕಾಲದಲ್ಲಿ 'ಹೇಮಾಂಡ ಪಂತ' ಎಂಬ ಹೊಸ ವಾಸ್ತುಶೈಲಿಯು ಪ್ರಚಾರದಲ್ಲಿ ಬಂತು. ಈ ಶೈಲಿಯ ಕಟ್ಟಡಗಳು ನಿಜಾಮ್ ಪ್ರಾಂತ್ಯದಲ್ಲಿಯೂ, ಮಹಾರಾಷ್ಟ್ರದಲ್ಲಿಯೂ ಇವೆ. ಹೊಯ್ಸಳರು ಹಿಂದಿನ 'ಚಾಲುಕ್ಯ ಶೈಲಿ'ಯಲ್ಲಿಯೇ ಮಾರ್ಪಾಡು ಮಾಡಿಕೊಂಡು ಹೊಯ್ಸಳರ ರೀತಿಯ ಕಟ್ಟಡಗಳ ನಿರ್ಮಾಣಕ್ಕೆ ತೊಡಗಿದರು.

೧೩ನೇ ಶತಮಾನದಲ್ಲಿ ಈ ಮೂರು ಮನೆತನಗಳ ನಡುವೆ ನಿರಂತರ ಕದನದಿಂದಾಗಿ ಉತ್ತರದವರು ಇಲ್ಲಿಗೆ ಬರಲು ಕಾರಣವಾಯಿತು. ಈ ಶತಮಾನದ ಕೊನೆಯಲ್ಲಿ ಅಲ್ಲಾವುದ್ದೀನ ಖಿಲ್ಜಿ ಅಪಾರ ಸೈನ್ಯದೊದಿಗೆ ಬಂದು ದೇವಗಿರಿಯನ್ನು ಮುತ್ತಿಗೆ ಹಾಕಿದನು. ಅಲ್ಲಿನ ರಾಜ ರಾಮಚಂದ್ರನನ್ನು ಸೋಲಿಸಿ ಅಪಾರ ಸಂಪತ್ತಿನೊಡನೆ ದೆಹಲಿಗೆ ಮರಳಿದನು. ಇವನ ಹಾದಿಯಲ್ಲಿಯೇ ಮಲಿಕಾಫರ್ ಬಂದು ಕಾಕತೀಯರನ್ನು ಸೋಲಿಸಿ ಅಪಾರ ಸಂಪತ್ತಿನೊಂದಿಗೆ ಹಿಂದಿರುಗಿದನು. ಹೀಗೆ ಉತ್ತರದವರ ದಾಳಿಗೆ ದಕ್ಷಿಣ ಪ್ರಾಂತ್ಯದ ಸಣ್ಣಪುಟ್ಟ ರಾಜರೆಲ್ಲ ಸೋತುಹೋದ ಪರಿಣಾಮವಾಗಿ ಹದಿನಾಲ್ಕನೇ ಶತಮಾನದ ಹೊತ್ತಿಗೆ ಕಣ್ಮರೆಯಾದರು. ಇದರಿಂದ ಉತ್ತರದವರ ದಾಳಿಗೆ ಸಿಕ್ಕ ದಕ್ಷಿಣ ಪ್ರಾಂತ್ಯದ ಜನಸಮುದಾಯಗಳು ಹಿಂಸೆಗೆ ಗುರಿಯಾದವು. ಅರಾಜಕತೆ ಹೆಚ್ಚಾಯಿತು. ಮೇಲಿಂದ ಮೇಲೆ ನಡೆದ ಸೈನಿಕ ದಾಳಿಗಳಿಗೆ ಪ್ರಜೆಗಳು ಬೇಸತ್ತರು. ಹೊಸ ರಾಜ್ಯದ ಕನಸು ಕಂಡರು. ಇದರ ಪರಿಣಾಮವಾಗಿ ವಿಜಯನಗರ ಸಾಮ್ರಾಜ್ಯ ಉದಯವಾಯಿತು. ಈ ರಾಜ್ಯ ಸ್ಥಾಪನೆಯ ಉದ್ದೇಶವು ಅನ್ಯರ ಆಕ್ರಮಣವನ್ನು ತಡೆಯುವುದು, ತನ್ನತನವನ್ನು ಕಾಪಾಡಿಕೊಳ್ಳುವುದಾಗಿತ್ತು.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ಬೆನ್ನಲ್ಲಿಯೇ ಬಹಮನಿ ರಾಜ್ಯ ಹುಟ್ಟಿಕೊಂಡಿತು. ಇದರ ಮುಖ್ಯಸ್ಥಳವು ನಿಜಾಮ್ ಪ್ರಾಂತ್ಯದ ಗುಲಬರ್ಗಾ ಆಯಿತು. ಈ ಎರಡೂ ರಾಜ್ಯಗಳು ಬಹಳ ಕಾಲ ನಿರ್ಲಿಪ್ತದಿಂದಿರಲು ಸಾಧ್ಯವಾಗಲಿಲ್ಲ. ವಿಜಯನಗರದ ರಾಜರು ತುಂಗಭದ್ರಾ ನದಿಯನ್ನು ದಾಟಿ ಬಹಮನಿ ರಾಜ್ಯವನ್ನು ನುಗ್ಗುವುದು, ಬಹಮನಿ ರಾಜರು ಇವರನ್ನು ತಡೆಯಲು ಸೈನ್ಯದೊಂದಿಗೆ ತುಂಗಭದ್ರೆಯತ್ತ ಸಾಗುತ್ತ ಬರುವುದು ನಡೆಯಿತು. ಹೀಗೆ ಈ ಎರಡೂ ರಾಜಪ್ರಭುತ್ವಗಳು ತಾವು ಆಕ್ರಮಿಸಿದ ಪ್ರದೇಶಗಳನ್ನು ಅಪಾರ ಹಾನಿಗೀಡಾಗುವಂತೆ ಮಾಡಿದವು. ಹೀಗೆ ಹಾನಿಗೀಡಾದ ಪ್ರಾಂತ್ಯವು ನಿಜಾಮ್ ಕರ್ನಾಟಕದ ಭಾಗವಾಗಿತ್ತು. ಸುಮಾರು ೨೫೦ವರ್ಷಗಳ ಕಾಲ ಈ ಭಾಗದ ಜನ ಸಮುದಾಯಗಳು ಯುದ್ಧದ ನೆರಳಿನಲ್ಲಿಯೇ ಬದುಕುವಂತಾಯಿತು.

ಬಹಮನಿ ರಾಜರು ದುರ್ಬಲರಾಗಲು ಅವರ ಅಧೀನದಲ್ಲಿದ್ದ ಮಾಂಡಲೀಕರು ಸ್ವತಂತ್ರರಾಗಿ ತಮ್ಮತಮ್ಮಲ್ಲಿ ಒಳ ಜಗಳಕ್ಕೆ ತೊಡಗಿದರು. ವಿಸ್ತಾರವಾದ ಬಹಮನಿ ಸಾಮ್ರಾಜ್ಯ ಒಡೆದುಹೋಗಿ ಐದು ಭಾಗಗಳಾದವು. ಆಗಲೂ ನಿಜಾಮ್ ಪ್ರಾಂತ್ಯದ ವಿಜಾಪುರ, ಬೀದರ್ ಹೊಸ ರಾಜ್ಯಗಳ ರಾಜಧಾನಿಗಳಾದವು. ತಾಳಿಕೋಟೆಯ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯವು ಸೋತು ತನ್ನೆಲ್ಲ ಶಕ್ತಿಯನ್ನೂ ಕಳೆದುಕೊಂಡಿತು. ಉಳಿದವುಗಳೆಲ್ಲ ಉತ್ತರದ ಔರಂಗಜೇಬನ ದಾಳಿಗೆ ನಾಶವಾದವು. ಇದ್ದಕ್ಕಿದ್ದಂತೆ ಉಂಟಾದ ಈ ರಾಜಕೀಯ ಶೂನ್ಯದಿಂದ ಆಸಫ್‌ಜಾಹಿ ಮನೆತನದವರು ಹೈದರಾಬಾದ್ ಸಂಸ್ಥಾನವನ್ನು ಆಳಲು ಪ್ರಾರಂಭಿಸಿದರು.

**೩.೧. ನಿಜಾಮರು ಮತ್ತು ಹೈದರಾಬಾದ್ ಸಂಸ್ಥಾನ**

ಔರಂಗಜೇಬನು ದಕ್ಷಿಣದಲ್ಲಿ ತನ್ನ ದಂಡಯಾತ್ರೆಯನ್ನು ಮುಗಿಸಿ ಮರಳುವಾಗ, ತನ್ನ ವಶವಾಗಿದ್ದ ಮುಂಬಯಿ, ಮದರಾಸು, ಕರ್ನಾಟಕ ಹಾಗೂ ಮೈಸೂರು ಈ ಭಾಗಗಳ ದಕ್ಷಿಣ ಪ್ರಾಂತ್ಯವನ್ನು ನೋಡಿಕೊಳ್ಳಲು ಸುಬೇದಾರರನ್ನು ನೇಮಿಸಿದ್ದನು. ಕೆಲ ಸಮಯದ ನಂತರ ಔರಂಗಜೇಬನ ಸುಬೇದರನಾಗಿದ್ದ ಮೀರ ಕಮರುದ್ದೀನ್ (೧೭೨೪-೪೮) (ಇವನು ಆಸಫ್ ಜಾಹಿ ಎಂಬ ಬಿರುದನ್ನು ಹೊಂದಿದ್ದ) ಸ್ವತಂತ್ರನಾಗಿ ಔರಂಗಬಾದನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ಇವನ ತರುವಾಯ ಇವನ ಮಗ ನವಾಬ್ ನಿಜಾಮ್ ಅಲಿಖಾನ್(೧೭೬೬-೧೮೦೮) ಪಟ್ಟಕ್ಕೆ ಬಂದನು. ಈ ಹೊತ್ತಿಗಾಗಲೇ ಬ್ರಿಟೀಶರು ಭಾರತವನ್ನು ಮುತ್ತಿಬಿಟ್ಟಿದ್ದರು. ಇವನು ಮರಾಠರನ್ನು ಹತ್ತಿಕ್ಕಿದನು. ಇಂಗ್ಲೀಶರೊಡನೆ ಮೈಸೂರು ಯುದ್ಧದಲ್ಲಿ ಭಾಗಿಯಾಗಿ ಹೋರಾಡಿದನು. ಈ ಯುದ್ಧದ ನಂತರ ಮೈಸೂರಿನ ಕೆಲವು ಭಾಗಗಳು ನಿಜಾಮ್ ಅಲಿಖಾನ್‌ಗೆ ದೊರೆತವು.

ಕೆಲ ದಿನಗಳಲ್ಲಿಯೇ ಈಸ್ಟ್ ಇಂಡಿಯಾ ಕಂಪೆನಿಯು ಈ ಭಾಗಗಳನ್ನು ಮರಳಿ ಪಡೆಯಿತು. ಇವನ ತರುವಾಯ ನಿಜಾಂ ಸಿಕಂದರ್ ಬಹದ್ದೂರ (೧೮೦೮-೧೮೨೮) ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ಪುಢಾರಿಗಳ ಹಾವಳಿ ಹೆಚ್ಚಾಗಿತ್ತು. ಇದನ್ನು ಇವನು ತಡೆದನು. ಇವನ ಕಾಲದಲ್ಲಿಯೇ ಔರಂಗಬಾದಿನ ಬದಲಾಗಿ ಹೈದರಾಬಾದ್ ರಾಜಧಾನಿಯಾಯಿತು. ಸಿಕಂದರ್ ಬಹದ್ದೂರನ ತರುವಾಯ ಅವನ ಹಿರಿಯ ಮಗ ನಾಜಿರುದ್ ದೌಲ್ ಬಹದ್ದೂರು (೧೮೨೯-೧೮೫೭) ರಾಜ್ಯಭಾರಕ್ಕೆ ಬಂದನು. ಇವನ ತರುವಾಯ ಬಂದ ಆಫ್ ಜಾಲುನ್ ದೌಲ್ ಬಹದ್ದೂರ್ (೧೮೫೭-೧೮೬೯) ಚೌಮೊಹಲ್ಲ ಕಟ್ಟಡಗಳನ್ನು ಕಟ್ಟಿಸಿದನು. ಇವನ ಕಾಲದಲ್ಲಿ 'ಸುಬೆ' ಎಂಬ ಜಿಲ್ಲೆಗಳು ರಚನೆಯಾದವು. ಸುಬೆದಾರರನ್ನು ತಾಲೂಕುದಾರರನ್ನು ನೇಮಿಸಲಾಯಿತು. ಈ ವ್ಯವಸ್ಥೆಗಿಂತ ಹಿಂದೆ ಮೊಗಲರು ರೂಪಿಸಿದ್ದ ವ್ಯವಸ್ಥೆಯ ದೇಶಮುಖ, ದೇಶಪಾಂಡೆ, ಸರ್ ದೇಶಪಾಂಡೆ, ಪರಗಣಿದಾರ, ಕಿಲ್ಲೆದಾರ ಎಂಬ ವತನದಾರರನ್ನು ಬದಲಾಯಿಸಲಾಯಿತು. ಹೊಸ ವ್ಯವಸ್ಥೆಗೆ ಹೊಂದಿಕೊಳ್ಳಲು ಹೊಸ ಶಿಕ್ಷಣವನ್ನು ಪಡೆದವರಿಗೆ ಅವಕಾಶಗಳು ದೊರೆತವು. ಜಾಗೀರುಗಳು ಮನ್ಸಬುಗಳು ಮಾಯವಾದವು. ಈ ನವಾಬನ ಕಾಲದಲ್ಲಿಯೇ ಆಂಗ್ಲ ಪದ್ಧತಿಯ ಶಾಲೆಗಳು ಪ್ರಾರಂಭವಾದವು. ಸಾಲಾರ್‌ಜಂಗ್ ಬಹದ್ದೂರ್

ಮದಾರುಲ್ ಮಹಾಮ್ (ದಿವಾನ) ಆದರು. ಇಂಗ್ಲೀಶ್ ಅಮಲ್ದಾರಿಯ ಪರಿಣಾಮವಾಗಿ ಸಂಸ್ಥಾನದಲ್ಲಿ ಇಂಗ್ಲೀಶ್ ಪದ್ದತಿಗಳು ಆರಂಭವಾದವು. ಕೊತ್ವಾಲಿ, ನ್ಯಾಯ (ಅದಾಲತ್), ಬಂದೋಬಸ್ತ್ (ಭೂಮಿ ಅಳತೆ) ಮತ್ತಿತರ ಹಲವು ಖಾತೆ ಇಂಗ್ಲೀಶ್ ಮಾದರಿಯಲ್ಲಿ ಸಾಗಿದವು. ಇವನ ತರುವಾಯ ಮಗ ಮೀರ್ ಮಹಿಬೂಬ್ ಅಲಿಖಾನ್‌ನು (೧೮೬೯-೧೯೧೧) ರಾಜ್ಯಭಾರಕ್ಕೆ ಬಂದು ಹಿಂದಿನ ವ್ಯವಸ್ಥೆಗೆ (ಅಂದರೆ ಇಂಗ್ಲೀಶ್ ಪದ್ಧತಿಯಂತೆ) ಅನುಗುಣವಾಗಿ ಆಡಳಿತ ನಡೆಸಿದ. ಈ ಕಾಲದಲ್ಲಿ ಹೈದರಾಬಾದಿನಿಂದ ಗುಲಬರ್ಗಾಕ್ಕೆ ರೈಲಿನ ವ್ಯವಸ್ಥೆಯಾಯಿತು. ಕ್ಯಾಬಿನೆಟ್ ಕೌನ್ಸಿಲ್ ಸ್ಥಾಪನೆಯಾಯಿತು. ೧೮೮೫ರಲ್ಲಿ 'ಸತಿಪದ್ಧತಿ'ಯು ನಿಂತಿತು. ೧೮೭೪ರಲ್ಲಿ ಸರಕಾರಿ ಭಾಷೆ ಫಾರಸಿಯ ಸ್ಥಾನದಲ್ಲಿ ಉರ್ದು ಭಾಷೆ ಬಂದಿತು. ಹೈಕೋರ್ಟು ಸ್ಥಾಪಿತವಾಯಿತು. ಇವನ ಆಳ್ವಿಕೆಯಲ್ಲಿ ಹೈದರಾಬಾದಿನ ನಾಣ್ಯವು 'ಮಹಬೂಬಿಯಾ' ಎಂಬ ಹೆಸರಿನಿಂದ ಪ್ರಚಾರಕ್ಕೆ ಬಂತು.

ಮಹಿಬೂಬ್ ಅಲಿಖಾನ್‌ನ ತರುವಾಯ ನವಾಬ್ ಮೀರ್ ಉಸ್ಮಾನ್ ಅಲಿಖಾನ್ ಬಹದ್ದೂರ್ (೧೯೧೧-೧೯೪೮) ಸಂಸ್ಥಾನದ ಅಧಿಕಾರ ಹಿಡಿದನು. ಈ ನವಾಬನಿಗೆ ಕಟ್ಟಡಗಳ ಮೇಲೆ ವಿಶೇಷ ಆಸಕ್ತಿಯಿತ್ತು. ಹೈದರಾಬಾದಿನ ಹೈಕೋರ್ಟ್, ಉಸ್ಮಾನಿಯ ಆಸ್ಪತ್ರೆ, ಸಿಟಿಕಾಲೇಜ್, ಅಸಫಿಯಾ ಗ್ರಂಥಾಲಯ, ಯುನಾನೀ ಆಸ್ಪತ್ರೆ, ಉಸ್ಮಾನಿಯಾ ವಿಶ್ವವಿದ್ಯಾಲಯ ಮುಂತಾದ ಕಟ್ಟಡಗಳನ್ನು ಈತ ಕಟ್ಟಿಸಿದನು. ಹಿಯಾಮತ್ ಸಾಗರ, ನಿಜಾಮ್ ಸಾಗರಗಳು ಇವನ ಕಾಲದಲ್ಲಿ ಆದವು. ಬ್ರಿಟೀಶರು ಅನೇಕ ಸವಲತ್ತುಗಳನ್ನು ನೀಡಿದ್ದರು. ಮೊದಲಿನಿಂದಲೂ ನಿಜಾಮರು ಪ್ರತ್ಯೇಕವಾದ ಸೈನ್ಯ, ನಾಣ್ಯ, ಸಾರಿಗೆ, ರೈಲ್ವೆ, ಅಂಚೆ, ಆಕಾಶವಾಣಿ, ಶಿಕ್ಷಣ ಮುಂತಾದ ಸೌಲಭ್ಯಗಳನ್ನು ಹೊಂದಿದ್ದರು. ಒಂದು ಪೈಸೆಯಿಂದ ನೂರು ರೂಪಾಯಿವರೆಗಿನ ನಾಣ್ಯಗಳ ಮೇಲೆ ನಿಜಾಮನ ಮುದ್ರೆಯಿತ್ತು. ಈ ನಾಣ್ಯಗಳಿಗೆ ಪ್ರಪಂಚದ ಮಾರುಕಟ್ಟೆಯಲ್ಲಿ ವಿನಿಮಯದ ದರವು ಗೊತ್ತಾಗಿ ಅಂತರಾಷ್ಟ್ರೀಯ ಮಾನ್ಯತೆಯೂ ಇತ್ತು. ಮೀರ್ ಉಸ್ಮಾನ್ ಅಲಿಖಾನನು ಇಂಗ್ಲೆಂಡ್, ಫ್ರಾನ್ಸ್, ಅಮೆರಿಕಾ, ತುರ್ಕಿಸ್ಥಾನ, ಕೆನಡಾ ಮುಂತಾದ ದೇಶಗಳ ಜತೆ ಸಂಪರ್ಕ ಹೊಂದಿದ್ದನು. ೧೯೪೭ಕ್ಕೆ ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಈ ನವಾಬನು ಅಧಿಕಾರವನ್ನು ಬಿಟ್ಟುಕೊಡಲಿಲ್ಲ. 'ಹೈದರಾಬಾದ್ ಸಂಸ್ಥಾನ'ವನ್ನು ಸ್ವತಂತ್ರ ಭಾರತದಲ್ಲಿ ವಿಲೀನಗೊಳಿಸಲು ಒಪ್ಪದೆ ಸ್ವತಂತ್ರವಾಗಿ ಉಳಿಯಲು ಇಚ್ಛಿಸಿದನು.

ಹೈದರಾಬಾದಿನ ನಿಜಾಮ್ ಸಂಸ್ಥಾನವು ಭೌಗೋಳಿಕವಾಗಿ ಮತ್ತು ಜನಸಂಖ್ಯೆ ದೃಷ್ಟಿಯಿಂದ ಭಾರತದಲ್ಲಿ ಬಹುದೊಡ್ಡ ಸಂಸ್ಥಾನವಾಗಿತ್ತು. ತೆಲಂಗಾಣದ ಎಂಟು ಜಿಲ್ಲೆಗಳು, ಮರಾಠವಾಡದ ಐದು ಜಿಲ್ಲೆಗಳು, ಕರ್ನಾಟಕದ ಮೂರು ಜಿಲ್ಲೆಗಳು ಹೀಗೆ ಹದಿನಾರು ಜಿಲ್ಲೆಗಳ ಪ್ರದೇಶವನ್ನು ಅದು ಹೊಂದಿತ್ತು. ತೆಲಂಗಾಣದ ಎಂಬತ್ತು ಲಕ್ಷ, ಮರಾಠವಾಡದ ನಲವತ್ತು ಲಕ್ಷ, ಕರ್ನಾಟಕದ ಇಪ್ಪತ್ತು ಲಕ್ಷ ಹೀಗೆ ಒಂದೂವರೆ ಕೋಟಿ ಜನಸಂಖ್ಯೆಯನ್ನು ಹೊಂದಿತ್ತು. ಸಂಸ್ಥಾನದಲ್ಲಿ ಐದು ಕೋಟಿ ಎಕರೆ ಜಮೀನು ಸಾಗುವಳಿಯಲ್ಲಿತ್ತು. ಇದರಲ್ಲಿ ಎರಡು ಕೋಟಿ ಎಕರೆ ಜಮೀನು ಜಹಗೀರುದಾರರು, ಒಂದು ಕೋಟಿ ಎಕರೆ ಜಾಮೀನು ದೇಶಮುಖ ಹಾಗೂ ದೇಸಾಯಿಗಳ

ಒಡೆತನದಲ್ಲಿತ್ತು. ಸ್ವತಃ ನಿಜಾಮನಿಗೆ ಐವತ್ತು ಲಕ್ಷ ಎಕರೆಗಿಂತಲೂ ಹೆಚ್ಚು ಜಮೀನಿತ್ತೆಂದು ತಿಳಿದುಬರುತ್ತದೆ. ಇಡೀ ಸಂಸ್ಥಾನದಲ್ಲಿ ಬಹುಸಂಖ್ಯಾತರು ಹಿಂದುಗಳು. ಮುಸ್ಲೀಮರು ಅಲ್ಪಸಂಖ್ಯಾತರರಾಗಿದ್ದರು. 'ನಿಜಾಮ್ ಕರ್ನಾಟಕ'ವೆಂದು ಕರೆಯಲಾಗುವ ಈ ಪ್ರದೇಶವು ಸುಮಾರು ಇಪ್ಪತ್ತು ಲಕ್ಷಕ್ಕಿಂತಲೂ ಅಧಿಕ ಜನಸಂಖ್ಯೆಯನ್ನು ಹೊಂದಿತ್ತು. ಈ ಭಾಗದ ಸಾಮಾನ್ಯ ಜನತೆ ರಾಜಕೀಯ, ಆರ್ಥಿಕ ಸ್ವಾತಂತ್ರ್ಯಕ್ಕಾಗಿ ಬ್ರಿಟೀಶರ ವಿರುದ್ಧ, ನಿಜಾಮರ ವಿರುದ್ಧ, ಜಹಗೀರುದಾರರ ವಿರುದ್ಧ ಹೀಗೆ ಮೂರು ಪ್ರಭುತ್ವಗಳ ವಿರುದ್ಧ ಹೋರಾಟ ನಡೆಸಬೇಕಾಗಿ ಬಂತು. ಬ್ರಿಟೀಶರ ಅಧೀನದಲ್ಲಿ ನಿಜಾಮರಿದ್ದರು. ನಿಜಾಮರ ಅಧೀನದಲ್ಲಿ ಜಹಗೀರುದಾರರಿದ್ದರು. ಇವರ ಅಧೀನದಲ್ಲಿ ದೇಶಮುಖ, ದೇಸಾಯಿ, ಪಟೇಲರಿದ್ದರು. ಸಾಮಾನ್ಯ ಜನರು ಇವರ ಅಧೀನದಲ್ಲಿದ್ದರು. ಹೀಗಾಗಿ ಹಲವು ಪ್ರಭುತ್ವಗಳ ಕಪಿಮುಷ್ಟಿಯಲ್ಲಿದ್ದ ಸಾಮಾನ್ಯ ಜನರು ಈ ಎಲ್ಲ ಪ್ರಭುತ್ವಗಳ ವಿರುದ್ಧ ಹೋರಾಡಬೇಕಾಗಿ ಬಂತು.

ನಿಜಾಮರು ಬ್ರಿಟೀಶರ ಅಧೀನದಲ್ಲಿದ್ದರೂ ಆಡಳಿತಾತ್ಮಕವಾಗಿ ಅನೇಕ ವಿಷಯಗಳಲ್ಲಿ ಸ್ವತಂತ್ರರಾಗಿದ್ದರು. ಉರ್ದು ರಾಜ್ಯದ ಆಡಳಿತ ಭಾಷೆಯಾಗಿಯೂ, ಶಿಕ್ಷಣದ ಭಾಷೆಯಾಗಿಯೂ ಪ್ರಭುತ್ವ ಪಡೆದಿತ್ತು. ಎಲ್ಲ ಮಾಧ್ಯಮಗಳು ನಿಜಾಮರ ವಶದಲ್ಲಿದ್ದವು. ಭಾರತದ ಜನತೆ ಸ್ವಾತಂತ್ರ್ಯಕ್ಕಾಗಿ ಹಂಬಲಿಸಿ ಬ್ರಿಟೀಶರ ಜತೆ ಹೋರಾಟಕ್ಕಿಳಿದಾಗ, ನಿಜಾಮನ ವಿರುದ್ಧ 'ಹೈದರಾಬಾದ್ ಕರ್ನಾಟಕ'ದ ಜನತೆ ಹೋರಾಡಬೇಕಾಗಿ ಬಂತು. ಕೊನೆಯ ನಿಜಾಮ ಮೀರ್ ಉಸ್ಮಾನ್ ಅಲಿಖಾನ್ ಬಹದ್ದೂರ್ (೧೯೧೧-೧೯೪೮) ಕಾಲದಲ್ಲಿ ಇಲ್ಲಿಯ ಪ್ರಜೆಗಳಲ್ಲಿ ಸ್ವಾತಂತ್ರ್ಯದ ಹಂಬಲ ಹೆಚ್ಚಾಯಿತು. ಇದಕ್ಕೆ ಸಂಸ್ಥಾನದ ಹೊರಗೆ ಅನೇಕ ರಾಷ್ಟ್ರೀಯ ನಾಯಕರ ನೇತೃತ್ವದಲ್ಲಿ ನಡೆದ ಚಳವಳಿಗಳು, ಸತ್ಯಾಗ್ರಹಗಳು ಇಲ್ಲಿಯ ಪ್ರಜೆಗಳಿಗೆ ಸ್ಫೂರ್ತಿಯನ್ನು ನೀಡಿದವು.

ಜನತೆಯಲ್ಲಿ ಆಧುನಿಕ ಶಿಕ್ಷಣದ ಪ್ರಸಾರವಾದರೆ ರಾಜಕೀಯ ಜಾಗೃತಿ ಉಂಟಾಗುತ್ತದೆ ಎಂದು ನಿಜಾಮರು ಭಾವಿಸಿದ್ದರು. ಅದರಿಂದ ಜನತೆ ತಮಗೆ ವಿರುದ್ಧವಾಗಿ ಬಂಡೇಳುವ ಸಾಧ್ಯತೆ ಅವರ ಮನದಲ್ಲಿತ್ತು. ಹೀಗಾಗಿ ಅವರು ಶಿಕ್ಷಣಕ್ಕೆ ಅಷ್ಟೊಂದು ಮಹತ್ವ ನೀಡಿರಲಿಲ್ಲವೆನಿಸುತ್ತದೆ. ಇಡೀ ರಾಜ್ಯದಲ್ಲಿ ೪೨ ಹೈಸ್ಕೂಲುಗಳು, ೧೯೮ ಮಾಧ್ಯಮಿಕ ಶಾಲೆಗಳು, ೨೯೭೭ ಪ್ರಾಥಮಿಕ ಶಾಲೆಗಳು, ೬ ಇಂಟರ್ ಮೀಡಿಯೇಟ್ ಕಾಲೇಜುಗಳು, ಒಂದೇ ಒಂದು ಡಿಗ್ರಿ ನಿಜಾಮ್ ಕಾಲೇಜ್ ಹಾಗೂ ಉಸ್ಮಾನಿಯಾ ವಿಶ್ವವಿದ್ಯಾಯಲ ಇತ್ತೆಂದು ತಿಳಿಯುತ್ತದೆ.[೧] ಇಲ್ಲಿನ ಕನ್ನಡಿಗರಿಗೆ ಕನ್ನಡತನದ ಅರಿವು ಅಳಿದೂ ಹೋಗಿತ್ತೆಂದರೆ ತಪ್ಪಾಗಲಾರದು. ರಾಜಕೀಯವಾಗಿ ಮರಾಠಿ, ಫಾರಸಿ, ಉರ್ದು ಭಾಷೆಗಳು ಪ್ರಾಬಲ್ಯವನ್ನು ಸಾಧಿಸಿದ್ದವು. ಕನ್ನಡವನ್ನು ಕೇಳುವವರಿಲ್ಲವಾಯಿತು. ಬೀದರ್ ಗುಲಬರ್ಗಾಗಳಲ್ಲಿ ಕನ್ನಡ ಕಾಣೆಯಾದರೆ, ರಾಯಚೂರಿನಲ್ಲಿ 'ಅಯ್ಯನವರ ಶಾಲೆ'ಗಳಲ್ಲಿ ಕನ್ನಡ ಅಭ್ಯಾಸ ಆಗುತ್ತಿತ್ತು. ಜೈಮಿನಿ ಭಾರತದ ಕೆಲವು ಪದ್ಯಗಳು ಓದಲು ಬಂದಿತೆಂದರೆ ಅವರು ಪಂಡಿತರೆಂದು ಭಾವಿಸಲಾಗುತ್ತಿತ್ತು.

೧೯೦೦ರ ನಂತರ 'ಮಾಂಟೆಗೋ ಜೇಮ್ಸ್ ಫೋರ್ಡ್' ಸುಧಾರಣೆಗಳು ಜಾರಿಗೆ ಬಂದವು. ಆದರೆ ಇವು ಹೈದರಾಬಾದ್ ಸಂಸ್ಥಾನದಲ್ಲಿ ಯಾವ ಪರಿಣಾಮವನ್ನುಂಟು ಮಾಡಲಿಲ್ಲ.

ಇದರಿಂದ ಪ್ರಜೆಗಳಲ್ಲಿ ಅಸಮಾಧಾನ ಹೆಚ್ಚಾಯಿತು. ಇದನ್ನು ಕಂಡ ನಿಜಾಮ್ ಒಂದು ಫರಮಾನ ಹೊರಡಿಸಿ, ಶಾಸನ ಸಭೆಗೆ ಬೇಕಾದ ಮಾಹಿತಿಯನ್ನು ಒದಗಿಸಲು 'ಸರ್ ಅಲೀ ಇಮ್ಮಾಮ' ಎಂಬುವರನ್ನು ನೇಮಿಸಿದ. ಇವರಿಗೆ ಸಹಾಯ ಮಾಡಲೆಂದು 'ರಾಯಬಾಲ್ ಮುಕ್ಕುಂದ' ಎಂಬುವವರನ್ನು ಸೇರಿಸಿಕೊಂಡರು. ಇವರು ಕಾರ್ಯನಿರ್ವಹಿಸಿ ೧೯೨೧ರಲ್ಲಿ ತಮ್ಮ ವರದಿಯನ್ನು ಶಾಸನಸಭೆಗೆ ಒಪ್ಪಿಸಿದರು. ಆದರೆ ಈ ವರದಿಯನ್ನು ನಿಜಾಮ್ ಜಾರಿಗೆ ತರಲಿಲ್ಲ. ಈ ವಿದ್ಯಮಾನ ಪ್ರಜೆಗಳಲ್ಲಿ ತೀವ್ರ ಸ್ವರೂಪದ ಅಸಮಾಧಾಕ್ಕೆ ಕಾರಣವಾಯಿತು. ಈ ಅಸಮಾಧಾನವನ್ನು ಅಡಗಿಸಲು ನಿಜಾಮನು ಬ್ರಿಟೀಶ್ ಅಧಿಕಾರಿಗಳನ್ನು ನೇಮಿಸಿಕೊಂಡು ಜನತೆಯ ಮೇಲೆ ಅಧಿಕಾರವನ್ನು ಚಲಾಯಿಸಿದನು.

ಸಂಸ್ಥಾನದ ಪ್ರಜೆಗಳು 'ಸುಧಾರಣಾ ಸಮಿತಿ'ಯನ್ನು ರಚಿಸಿಕೊಂಡು ಸಾಮೂಹಿಕವಾಗಿ ಸಂಘಟನೆಗೊಂಡು ನಿಜಾಮನ ಮೇಲೆ ಒತ್ತಡ ಹೇರಲು ನಿಂತರು. ಇದನ್ನು ತಡೆಯಲು ನಿಜಾಮನು 'ಗಸ್ತಿ ನಂಬರ್ ೫೩' ಜಾರಿಗೆ ತಂದನು. ಇದರ ಪ್ರಕಾರ ಪ್ರಜೆಗಳು ಯಾವುದೇ ಗುಂಪು ಚಟುವಟಿಕೆಗಳನ್ನೂ ಸರಕಾರದ ಅನುಮತಿಯಿಲ್ಲದೆ ಮಾಡುವಂತಿಲ್ಲ. ಇದನ್ನೂ ಎದುರಿಸಲು ಪ್ರಜೆಗಳು ನಿಜಾಮ್ ಸರಕಾರಕ್ಕೆ ನಾಗರಿಕ ಹಕ್ಕುಗಳ ಬಗೆಗೆ ತಿಳುವಳಿಕೆಯನ್ನು ನೀಡಲು ಪ್ರಯತ್ನಿಸಿದರು. ಹೈದರಾಬಾದ್ ಕರ್ನಾಟಕದಲ್ಲಿ ಅನೇಕ ಮುಖಂಡರು ನಿಜಾಮನ ವಿರುದ್ಧ ಹೋರಾಡಲು ಸಂಘಟನಾತ್ಮಕ ಚಟುವಟಿಕೆಗಳನ್ನು ರೂಪಿಸಿಕೊಂಡರು. ಪಂಡಿತ ತಾರಾನಾಥರು ನಿಜಾಮನ ವಿರುದ್ಧ 'ಇಂಡಿಯನ್ ಡಯ್ಯಾರ್' ಎಂಬ ಲೇಖನವನ್ನು ಬರೆದು ಪ್ರಕಟಿಸಿದರು. 'ಇಂರೋಜ್' ಎಂಬ ಉರ್ದು ಪತ್ರಿಕೆಯ ಸಂಪಾದಕ ಷೋಯಬುಲ್ಲಾಖಾನನು 'ಸ್ವಾತಂತ್ರ್ಯ ಪರಿಕಲ್ಪನೆ', 'ಜಮೀನ್ದಾರಿ ಪದ್ಧತಿಯ ದೋಷಗಳು', ತೆಲಂಗಾಣದ 'ಸಮತಾವಾದಿಗಳ ಸಿದ್ಧಾಂತ' ಮುಂತಾದ ಲೇಖನಗಳನ್ನು ಬರೆದರು. ಈ ಸಂಸ್ಥಾನದಲ್ಲಿ ನಡೆಯುವ ವಿದ್ಯಮಾನಗಳನ್ನು ರಾಷ್ಟ್ರದ ನಾಯಕರೂ ಗಮನಿಸಿ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಬೆಂಬಲ ನೀಡತೊಡಗಿದರು. ೧೯೨೦ರಲ್ಲಿ ವಿದೇಶಿ ಬಟ್ಟೆಗಳ ಬಹಿಷ್ಕಾರ ಆಂದೋಲನ ಆರಂಭವಾಯಿತು. ಗಾಂಧೀಜಿಯವರು ಮದ್ರಾಸಿನಿಂದ ಬೊಂಬಾಯಿಗೆ ಹೋಗುವಾಗ ರಾಯಚೂರು ಮಾರ್ಗವಾಗಿ ಹೋದರು. ರಾಷ್ಟ್ರೀಯ ನಾಯಕನನ್ನು ರೈಲ್ವೆ ನಿಲ್ದಾಣದಲ್ಲಿ ನೋಡಿದ ಜನರು ಅವರ ಕರೆಯ ಮೇರೆಗೆ ಸ್ವದೇಶಿ ಬಟ್ಟೆಗಳ ಬಳಕೆಗೆ ಬದ್ಧರಾದರು. ಜೊತೆಗೆ ಸ್ವಾತಂತ್ರ್ಯ ಹೋರಾಟಕ್ಕೆ ಶಕ್ತಿ ಪಡೆದುಕೊಂಡರು. ಮಹಾತ್ಮ ಗಾಂಧಿಯವರು ೧೯೨೯ರಲ್ಲಿ ಕೊಪ್ಪಳದ ಬಾನಾಪುರಕ್ಕೆ ಭೇಟಿನೀಡಿ ಈ ಭಾಗದ ಜನರನ್ನು ಸ್ವಾತಂತ್ರ ಸಂಗ್ರಾಮದಲ್ಲಿ ಭಾಗವಹಿಸಲು ಕರೆ ನೀಡಿದರು.

ಜನತೆಯ ಸಂಘಟನೆಯಾದ 'ಹೈದರಾಬಾದ್ ರಾಜಕೀಯ ಪರಿಷತ್ತು' ಅಧಿವೇಶನವು ೧೯೨೩ರಲ್ಲಿ ಕಾಕಿನಾಡದಲ್ಲಿ ನಡೆಯಿತು. ಸರೋಜಿನಿ ನಾಯ್ಡು, ಸಿ.ಆರ್. ದಾಸ್ ಹಾಗೂ ಸರದಾರ ವಲ್ಲಭಬಾಯಿ ಪಟೇಲರು ಅಲ್ಲಿ ಬಂದಿದ್ದರು. ಪ್ರಜೆಗಳಿಗೆ ಜವಾಬ್ದಾರಿಯುತ ಸರಕಾರವನ್ನು ಸ್ಥಾಪಿಸುವ ಬಗ್ಗೆ ಕರೆ ನೀಡಿದರು. ಈ ಪರಿಷತ್ತು ರಾಜಕೀಯ ಚಟುವಟಿಕೆಗಳನ್ನು ನಿಜಾಮನ ವಿರುದ್ಧ ಹಮ್ಮಿಕೊಂಡಿತು. ೧೯೨೬ರಲ್ಲಿ ಮುಂಬೈಯಲ್ಲಿ ೧೯೨೮ರಲ್ಲಿ ಪುಣೆಯಲ್ಲಿ ಸಭೆ ನಡೆಸಿತು.

ಮೂರನೆಯ ಸಭೆಗೆ ನೇತಾಜಿ ಸುಭಾಷ್ ಚಂದ್ರ ಭೋಸ್ ಬಂದು ಭಾಷಣ ಮಾಡಿದರು. ಆ ಸಭೆಯಲ್ಲಿ ಹೈದರಾಬಾದ್ ಸಂಸ್ಥಾನದ ನಿಜಾಮನ ರಾಜಕೀಯ ಹಾಗೂ ಸಾಮಾಜಿಕ ನಿಲುವುಗಳನ್ನು ಖಂಡಿಸಲಾಯಿತು. ರಾಷ್ಟ್ರದಲ್ಲಿ ಸ್ವಾತಂತ್ರ್ಯಕ್ಕಾಗಿ ನಡೆದ ಚಟುವಟಿಕೆ, ಸತ್ಯಾಗ್ರಹಗಳೆಲ್ಲ 'ಹೈದರಾಬಾದ್ ಕರ್ನಾಟಕ'ದ ಜನತೆಗೆ ಸ್ಫೂರ್ತಿ ನೀಡಿದವು. ಇದರಿಂದ 'ಹೈದರಾಬಾದ್ ಸ್ವದೇಶಿ ಲೀಗ್' 'ನಿಜಾಮ್ ಪ್ರಜಾ ಪರಿಷತ್' (೧೯೩೫) 'ಹೈದರಾಬಾದ್ ಪೀಪಲ್ಸ್ ಕನ್‌ವೆನ್ಷನ್' ಮುಂತಾದ ಜನ ಸಂಘಟನೆಯ ಸಂಸ್ಥೆಗಳು ಹುಟ್ಟಿಕೊಂಡು ನಿಜಾಮನ ವಿರುದ್ಧ ಹೋರಾಟಕ್ಕೆ ನಿಂತವು.

೧೯೩೪ರಲ್ಲಿ 'ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ'ವು ರಾಯಚೂರಿನಲ್ಲಿ ನಡೆಯಿತು. ಈ ಸಮ್ಮೇಳನದ ಅಧ್ಯಕ್ಷರು ಪಂಜೆ ಮಂಗೇಶರಾಯರು. ನಾಡಿನ ಪ್ರತಿಭಾವಂತ ಸಾಹಿತಿಗಳು, ರಾಜಕೀಯ ಮುಖಂಡರು, ಹೋರಾಟಗಾರರು ಸಮ್ಮೇಳನಕ್ಕೆ ಬಂದಿದ್ದರು. ಸಂಸ್ಥಾನದ ಹಾಗೂ ದೇಶದ ರಾಜಕೀಯ ಪರಿಸ್ಥಿತಿಗಳನ್ನು ಕುರಿತು ಇವರು ಚರ್ಚಿಸಿದರು. ಇದೇ ಸಂದರ್ಭದಲ್ಲಿ ಹೈದರಾಬಾದ್ ಕರ್ನಾಟಕದ ಪ್ರಜ್ಞಾವಂತ ಸಾಹಿತಿಗಳು ಕೂಡಿಕೊಂಡು, 'ನಿಜಾಮ್ ಕರ್ನಾಟಕ ಪರಿಷತ್ತ'ನ್ನು ಸ್ಥಾಪಿಸಿದರು. ಉರ್ದು ಭಾಷಾ ಹೇರಿಕೆಯನ್ನು ಖಂಡಿಸುವ ಹಾಗೂ ಸ್ವಾತಂತ್ರ್ಯಕ್ಕಾಗಿ ಹೋರಾಡುವ ರಾಜಕೀಯ ನಿಲುವುಗಳನ್ನು ತೆಗೆದುಕೊಂಡರು. ನಂತರ ಈ ಪರಿಷತ್ತಿನ ಸಭೆಗಳು ಬೀದರ, ಗುಲಬರ್ಗಾ, ರಾಯಚೂರಿನ ಅನೇಕ ಕಡೆಗಳಲ್ಲಿ ನಡೆದವು.

ಕನ್ನಡದ ಮುಖಂಡರು ಭಾಷೆ, ಸಾಹಿತ್ಯ, ಸಂಸ್ಕೃತಿ ಮುಂತಾದವುಗಳ ಬಗ್ಗೆ ಅಭಿಮಾನ ಬೆಳೆಯುವಂತೆ ಪ್ರೇರೇಪಿಸಿದರು. ರಾಜಕೀಯ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ಸಜ್ಜಾದರು. ಇಂಥ ಅನೇಕ ಘಟನೆಗಳು ನಡೆದು ೨೪ ಅಕ್ಟೋಬರ್ ೧೯೩೮ರಲ್ಲಿ 'ಹೈದರಾಬಾದ್ ಸ್ಟೇಟ್ ಕಾಂಗ್ರೆಸ್' ಸ್ಥಾಪನೆಯಾಯಿತು. ಬೆರಳಣಿಕೆಯಷ್ಟಿದ್ದ ಸದಸ್ಯರ ಸಂಖ್ಯೆ ೧೨೦೦ನ್ನು ದಾಟಿತ್ತು. ಅದರಿಂದ ಜನರ ಒಲವು ಸಾಮಾಜಿಕ ನಿಲುವಿನ ಕಡೆಗಿತ್ತೆಂದು ತಿಳಿಯುತ್ತದೆ. ಇದು 'ಆಂಧ್ರ ಮಹಾಸಭಾ', 'ಕರ್ನಾಟಕ ಪರಿಷತ್ತು' ಮತ್ತು 'ಮಹಾರಾಷ್ಟ್ರ ಪರಿಷತ್ತು'ಗಳನ್ನು ಒಳಗೊಂಡಿತ್ತು. ಈ ಮೂರು ಸಂಘಟನೆಗಳ ಉದ್ದೇಶಗಳು ಒಂದೇ ಆಗಿರುವುದರಿಂದ ಒಗ್ಗಟ್ಟಿನಿಂದ ಹೋರಾಡಲು ಅದನ್ನು ಸ್ಥಾಪಿಸಿಕೊಂಡವು. ಮೊದಲೇ ಕಾಂಗ್ರೆಸ್ ಎಂದರೆ ಉರಿಯುತ್ತಿದ್ದ ನಿಜಾಮನಿಗೆ ಈ ಸಂಸ್ಥಾನ ಕಾಂಗ್ರೆಸ್ ಸ್ಥಾಪನೆ, ಅದರ ಚಟುವಟಿಕೆಗಳನ್ನು ತಡೆಯಲಾಗಲಿಲ್ಲ. ಸ್ವಾಮಿ ರಮಾನಂದತೀರ್ಥರು ಈ ಸಂಸ್ಥೆಯ ಮುಖಂಡರಾಗಿ ಹೈದರಾಬಾದ್ ಅನೇಕ ಕರ್ನಾಟಕ ಭಾಗಗಳಲ್ಲಿ ಸಂಚರಿಸಿ ಜನರಲ್ಲಿ ಸ್ವಾತಂತ್ರ್ಯದ ಬಗ್ಗೆ ತೀವ್ರ ಸ್ವರೂಪದ ಹಂಬಲವನ್ನು ಹುಟ್ಟಿಸಿದರು. ಸ್ಥಳೀಯವಾಗಿ ಅನೇಕ ಮುಖಂಡರು ನಿಜಾಮನ ವಿರುದ್ಧ ಹೋರಾಡಲು ನಿಂತರು. ನಿಜಾಮನ ವಿರುದ್ಧ ಪ್ರತಿಭಟನೆಗೆ ಇಳಿದ ಸಂಘಟನೆಗಳಲ್ಲಿ ಮೂರನ್ನು ಪ್ರಮುಖವಾಗಿ ಉಲ್ಲೇಖಿಸಬಹುದು. 'ಹೈದರಾಬಾದ್ ಸ್ಟೇಟ್ ಕಾಂಗ್ರೆಸ್', 'ಹಿಂದೂ ಮಹಾಸಭಾ' ಮತ್ತು 'ಆರ್ಯಸಮಾಜ'. ಮೊದಲನೆಯದು ರಾಜನೈತಿಕ ಹಿತಾಸಕ್ತಿಗಳಿಗಾಗಿ ಹೋರಾಡುತ್ತಿದ್ದರೆ, 'ಹಿಂದೂ ಮಹಾಸಭಾ'ವು ಸಾಮಾಜಿಕ ಹಕ್ಕುಗಳಿಗಾಗಿ ಮತ್ತು 'ಆರ್ಯಸಮಾಜ'ವು ಧಾರ್ಮಿಕ ಉದ್ದೇಶಗಳಿಗಾಗಿ ಹೋರಾಡುತ್ತದ್ದವು. ಈ ಮೂರು ಸಂಘಟನೆಗಳ ಆಂತರಿಕ ಹಿತಾಸಕ್ತಿಗಳೇನೇ ಇದ್ದರೂ ಮೂಲತಃ ನಿಜಾಮನ ಆಡಳಿತವನ್ನು ಕೊನೆಗಾಣಿಸುವುದೇ ಆಗಿತ್ತು.

ಇದೇ ಸಂದರ್ಭದಲ್ಲಿ ರಾಘವೇಂದ್ರ ದೇಸಾಯಿಯವರು ನಿಜಾಮನ ಕಾಲೇಜಿನಿಂದ ಹೊರಬಂದು ಕುಕನೂರಿನಲ್ಲಿ 'ವಿದ್ಯಾನಂದ ಗುರುಕುಲ' ಸ್ಥಾಪಿಸಿದರು. ಮುಂದೆ ಅದು ದೊಡ್ಡ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯಾಗಿ ಬೆಳೆಯಲು ಶ್ರಮಿಸಿದರು. ಈ ಸಂಸ್ಥೆ ಸಂಸ್ಥಾನದಲ್ಲಿ ರಾಷ್ಟ್ರೀಯ ಪ್ರಜ್ಞೆಗೆ ಸ್ಫೂರ್ತಿಯಾಯಿತು. ಹಲವು ಕಡೆ ಶಿಕ್ಷಣ ಸಂಸ್ಥೆಗಳು ಹಾಗೂ ಗ್ರಂಥಾಲಯಗಳು ಆರಂಭವಾದವು. ವಾಚನಾಲಯಗಳಂತೂ ಬಿರುಸಿನಿಂದಲೇ ಹುಟ್ಟಿಕೊಂಡವು. ವಿಠ್ಠಲರಾವ್ ದೇವಾಲ್ಗಾಂವಕರ್ ಗುಲಬರ್ಗಾದಲ್ಲಿ 'ರಾಷ್ಟ್ರೀಯ ಗ್ರಂಥಾಲಯ ಸಂಘ'ವನ್ನೂ, 'ನೂತನ ವಿದ್ಯಾಲಯ ಸಂಸ್ಥೆ'ಯನ್ನು ಸ್ಥಾಪಿಸಿದರು(೧೯೦೭). 'ವೀರಶೈವ ಬಂಧು ವಾಚನಾಲಯ'ವನ್ನು ಶರಣಬಸವೇಶ್ವರ ದಾಸೋಹ ಪೀಠವು ಸ್ಥಾಪಿಸಿತು. ಉಸ್ಮಾನಿಯಾ ಮಾಧ್ಯಮಿಕ ಶಾಲೆಯ ಉಪಾಧ್ಯಾಯ ಬಳಗವು ಚಿಂಚೋಳಿಯಲ್ಲಿ 'ಭಾರತ ವಾಚನಾಲಯ'ವನ್ನು ತೆರೆಯಿತು. ಪಂಡಿತ ತಾರಾನಾಥರು ರಾಯಚೂರಿನಲ್ಲಿ 'ಹಮ್ದರ್ದ ಹೈಸ್ಕೂಲ್'(೧೯೨೦) ಸ್ಥಾಪಿಸಿದರು, 'ಶಾರದಾ ಕನ್ಯಾಶಾಲೆ', 'ಹರಿಜನ ಶಾಲೆ', 'ಭಾರತ್ ರೀಡಿಂಗ್ ರೂಮ್', ಸಿಂಧನೂರಿನಲ್ಲಿ 'ಶಾರದಾ ವಾಚನಾಲಯ', ಗಂಗಾವತಿಯಲ್ಲಿ 'ಕರ್ನಾಟಕ ವಾಚನಾಲಯ', 'ವಿಶ್ವನಾಥ ವಾಚನಾಲಯ' ಆಡೂರು, 'ಶ್ರೀ ವಿಠ್ಠಲ ವಾಚನಾಲಯ' ಹನುಮಸಾಗರ, 'ಸಾರ್ವಜನಿಕ ವಾಚನಾಲಯ' ಕುಷ್ಟಗಿ, ಸುರಪುರದ 'ಕರ್ನಾಟಕ ಸಂಘ', ಶಹಪುರದ 'ಶ್ರೀ ವೇಣುಗೋಪಾಲ ವಾಚನಾಲಯ', ರಂಗಂಪೇಟೆಯ 'ಕನ್ನಡ ಸಾಹಿತ್ಯ ಸಂಘ', ಯಾದಗಿರಿಯ 'ಶಂಕರ ಸಂಸ್ಕೃತ ಮಹಾವಿದ್ಯಾಲಯ', ಬಸವಕಲ್ಯಾಣ, ಬೀದರ್, ಭಾಲ್ಕಿ, ಇಟಗಿ, ಚಿತಾಪುರ ಮುಂತಾದ ಹೈದರಾಬಾದ್ ಕರ್ನಾಟಕದ ಹಲವೆಡೆಯಲ್ಲಿ ಗ್ರಂಥಾಲಯ ಹಾಗೂ ವಾಚನಾಲಯಗಳು ಪ್ರಾರಂಭವಾಗಿ ಈ ಭಾಗದ ಕನ್ನಡ ಜಾಗೃತಿಗೆ ಕಾರಣವಾದವು. ನಂತರ ಅವುಗಳು ಚಳವಳಿಯ ರೂಪದಲ್ಲಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಹಿಸಿದವು.

ಇಲ್ಲಿನ ಧಾರ್ಮಿಕ ಕೇಂದ್ರಗಳು ಜನರಲ್ಲಿ ಅಧ್ಯಾತ್ಮಿಕ ಜೀವನದ ವಿಕಾಸವನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತ ಬಂದಿರುವುದನ್ನು ಪರಂಪರೆಯಿಂದ ನಾವು ಕಾಣುತ್ತೇವೆ. ಋಷಿಮುನಿಗಳಿಗೆ, ವಿರಕ್ತರಿಗೆ, ಸೂಫಿ ಸಂತರಿಗೆ, ತತ್ವಜ್ಞಾನಿಗಳಿಗೆ, ಅವತಾರ ಪುರುಷರಿಗೆ, ಮತಸ್ಥಾಪನಾಚಾರ್ಯರಿಗೆ ಹೀಗೆ ಅನೇಕ ಅಧ್ಯಾತ್ಮಿಕರಿಗೆ ಈ ಭೂಮಿ ನೆಲೆಯನ್ನು ಒದಗಿಸಿದೆ. ಇಲ್ಲಿನ ಪುಣ್ಯಕ್ಷೇತ್ರಗಳು ಆಧ್ಯಾತ್ಮ ಜೀವನದ ಪ್ರತಿಫಲಗಳಾಗಿ ಇಂದಿಗೂ ಇವೆ. ತಿಂಥಿಣಿಯ ಮೌನೇಶ್ವರ, ಲಿಂಗಸಗೂರಿನ ಶ್ರೀ ಅಮರೇಶ್ವರ, ಬೀದರಿನ ಝರಣಿ ನರಸಿಂಹ ದೇವಾಲಯ, ಗುಲಬರ್ಗಾದ ಶ್ರೀ ಶರಣಬಸವೇಶ್ವರ ದೇವಾಲಯ, ಕೊಪ್ಪಳದ ಶ್ರೀ ಗವಿಸಿದ್ಧೇಶ್ವರಮಠ, ಮಾಣಿಕನಗರದ ಮಾಣಿಕ್ಕೇಶ್ವರಿ ದೇವಾಲಯ, ಶ್ರೀ ಪ್ರಭುಗಳ ದೇವಾಲಯ, ಮುಂತಾದ ಪುಣ್ಯಕ್ಷೇತ್ರಗಳು ಈ ನಾಡಿನ ಆಧ್ಯಾತ್ಮ ಜೀವನವನ್ನು ಬೆಳಗಿಸಿದವುಗಳಾಗಿವೆ.

ಭಾರತ ಸ್ವಾತಂತ್ರ್ಯ ಚಳವಳಿಯಲ್ಲಿ 'ವಂದೇ ಮಾತರಂ' ಚಳವಳಿ ದೇಶದಾದ್ಯಂತ ಐಕ್ಯತೆಯನ್ನು ಮೂಡಿಸಲು ಪ್ರಮುಖ ಪಾತ್ರ ವಹಿಸಿತ್ತು. ೧೯೪೨ರ ನಂತರ ಹೈದರಾಬಾದ್ ಸಂಸ್ಥಾನದಲ್ಲಿ ಅದರ ಪರಿಕಲ್ಪನೆ ಹುಟ್ಟಿ ಹಬ್ಬಿತು. ಉಸ್ಮಾನಿಯಾ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆ 'ವಂದೇ

ಮಾತರಂ' ಹಾಡಿದಾಗ ಅಲ್ಲಿನ ಸರ್ಕಾರ ಅದನ್ನು ನಿರ್ಬಂಧಿಸಿತು. ಮೊದಲೇ ಸರ್ಕಾರಕ್ಕೂ ಇಲ್ಲಿನ ಜನಕ್ಕೂ ಆಗದಂತ ವಾತಾವರಣದಲ್ಲಿ 'ವಂದೇ ಮಾತರಂ' ಹಾಡಲು ನಿರ್ಬಂಧಿಸಿದ್ದು ಜನರ ಆಕ್ರೋಶಕ್ಕೆ ಕಾರಣವಾಯಿತು. ಇದರಿಂದ ಚಳವಳಿಗೆ ಮತ್ತಷ್ಟು ಶಕ್ತಿ ಬಂದಂತಾಯಿತು. 'ವಂದೇ ಮಾತರಂ' ಹಾಡಿದ ವಿದ್ಯಾರ್ಥಿಗಳನ್ನು ವಿಶ್ವವಿದ್ಯಾಲಯದಿಂದ ಹೊರಹಾಕಲಾಯಿತು. ವಿದ್ಯಾರ್ಥಿಗಳು ವಿದ್ಯಾಭ್ಯಾಸಕ್ಕೆ ಎಲ್ಲೇ ಹೋದರು ಅವರನ್ನು ಪ್ರವೇಶ ಸಿಗದ ಹಾಗೆ ಮಾಡಿದರು. ಕೆಲ ವಿದ್ಯಾರ್ಥಿಗಳು ನಾಗಪುರ ವಿಶ್ವವಿದ್ಯಾಲಯಕ್ಕೆ ಹೋಗಿ ಪ್ರವೇಶ ಪಡೆದರು. ಅಂತಹ ಮಹನಿಯರಲ್ಲಿ ದಿ. ಪಿ.ವಿ. ನರಸಿಂಹರಾವ್, ಮತ್ತು ಶರಣಬಸವ ಇನಾಂದಾರ ಅವರು ಪ್ರಮುಖರು. 'ವಂದೇ ಮಾತರಂ' ಹಾಡಿದ ಹನುಮಸಾಗರದ ದಾಸಪ್ಪನೆಂಬ ವಿದ್ಯಾರ್ಥಿಯನ್ನು ಹಿಂಸಿಸಿ ಕೊಲ್ಲಲಾಗಿತ್ತು.

೧೯೪೨ರ 'ಚಲೇಜಾವ್' ಚಳವಳಿಯಲ್ಲಿ ಹೈದರಾಬಾದ್ ಕರ್ನಾಟಕದ ಜನತೆ ಪಾಲ್ಗೊಂಡು ಸೆರೆವಾಸ ಕಂಡಿತು. ಹೀಗೆ ರಾಷ್ಟ್ರೀಯ ಚಳವಳಿಗಳು, ಸತ್ಯಾಗ್ರಹಗಳು ಇಲ್ಲಿನ ಜನರಿಗೆ ಪ್ರೇರಣೆ ನೀಡುತ್ತಲೇ ನಿಜಾಮನಿಂದ ಮುಕ್ತರಾಗಲು ಪ್ರೇರೇಪಿಸಿದವು. ಇದರಿಂದ ಹುಟ್ಟಿಕೊಂಡ ಅನೇಕ ಸಂಘಟನೆಗಳು, ಸಂಘ-ಸಂಸ್ಥೆಗಳು ನಿಜಾಮನಿಗೆ ಒತ್ತಡ ಹೇರಿದವು. ಇವೆಲ್ಲ 'ಜಾತೀಯ' ಸಂಘಟನೆಗಳೆಂದು, ಆದುದರಿಂದ ಇವು ಯಾವುವೂ ಸಭೆ ಸೇರುವಂತಿಲ್ಲವೆಂದು ನಿಜಾಮನು ನಿಷೇಧಿಸಿಬಿಟ್ಟನು. ಆದರೆ ೧೯೪೦ರ ಹೊತ್ತಿಗೆ ಮುನ್ನವೆ ಹುಟ್ಟಿಕೊಂಡಿದ್ದ 'ಇತ್ತೇಹಾದುಲ್ ಮುಸಲ್ಮೀನ್' ಎಂಬ ಮತೀಯ ಸಂಘಟನೆ ಮತ್ತು ಅದರ ಚಟುವಟಿಕೆಗಳಿಗೆ ತಾನೇ ಬೆಂಬಲವಿತ್ತನು. ಹೈದರಾಬಾದ್ ಸಂಸ್ಥಾನದಲ್ಲಿ ಅಲ್ಪಸಂಖ್ಯಾತರಾಗಿದ್ದ ಮುಸ್ಲೀಮರನ್ನು 'ಇಸ್ಲಾಮ್ ಖತರೇಮೇಹೈ' ಎಂಬ ವಾದವನ್ನು ಮುಂದುಮಾಡಿ ಅವರನ್ನು ಕೆರಳಿಸಲಾಯಿತು. ಇದರ ಸಹಾಯಕ್ಕೆ 'ಇತ್ತೇಹಾದುಲ್ ಮುಸಲ್ಮೀನ್' ಸಂಸ್ಥೆ ನಿಂತಿತು. ಇದೇ ಸಮಯದಲ್ಲಿ ನಿಜಾಮನು ಒಂದು ಫರ್ಮಾನನ್ನು ಹೊರಡಿಸಿದ. 'ಮುಸಲ್ಮಾನರು ಬೇರೆ ಜಾತಿಯವರಿಂದ ಜಮೀನು ಖರೀದಿಸಬಹುದು. ಆದರೆ ಬೇರೆ ಜಾತಿಯವರು ಮುಸಲ್ಮಾನರ ಜಮೀನನ್ನು ಖರೀದಿಸಬಾರದು. ಜಮೀನು ಒತ್ತೆ ಹಾಕಿ ಸಾಲ ಪಡೆದವರು (ದಲಿತರು) ಮುಸಲ್ಮಾನರಾದರೆ ಅಂಥವರು ಸಾಲದಿಂದ ಮುಕ್ತರು. ದಲಿತರು ಭೂ-ಮಾಲೀಕರಲ್ಲಿ ಮಾಡಿದ್ದ ಸಾಲದ ಹೊರೆಯಿಂದ ಹೊರಬರಲು ಇದರಿಂದ ಅವಕಾಶ ದೊರೆಯಿತು. ಮತಾಂತರದ ಕೆಲಸ ಭರದಿಂದ ನಡೆಯಿತು. ಇದನ್ನು ತಡೆಯಲು 'ಆರ್ಯ ಸಮಾಜ' 'ಹಿಂದೂ ಸಿವಿಲ್ ಲಿಬರ್ಟೀಸ್ ಲೀಗ್' ಚುರುಕಾದವು.

ಆಗಸ್ಟ್ ೧೫, ೧೯೪೭ರಂದು ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ಲಭಿಸಿತು. ಆದರೆ 'ಹೈದರಾಬಾದ್ ಸಂಸ್ಥಾನ'ಕ್ಕೆ ಅದು ದೊರೆಯಲಿಲ್ಲ. ಬ್ರಿಟೀಶರು ಭಾರತವನ್ನು ಬಿಟ್ಟು ಹೊರಡುವ ಮುನ್ನ ಸಂಸ್ಥಾನಿಕರಿಗೆ, ಸ್ವತಂತ್ರ ಭಾರತದಲ್ಲಿ ವಿಲೀನವಾಗಬಹುದು ಇಲ್ಲವೆ ಸ್ವತಂತ್ರವಾಗಿಯೇ ಮುಂದುವರಿಯಬಹುದು ಎಂಬ ಆಯ್ಕೆಯ ಪ್ರಶ್ನೆಯನ್ನು ಮುಂದಿಟ್ಟರು. ಇದರ ಪರಿಣಾಮವಾಗಿಯೇ ನಿಜಾಮನು ಜೂನ್ ೨೬, ೧೯೪೭ರಂದು ಹೈದರಾಬಾದ್ ಸಂಸ್ಥಾನವು ಸ್ವತಂತ್ರವಾಗಿಯೇ ಮುಂದುವರಿಯುವುದು. ಪ್ರಜೆಗಳು ಸಂಸ್ಥಾನಕ್ಕೆ ನಿಷ್ಠೆಯಿಂದಿರಬೇಕು ಎಂದು ಒಂದು ಪರ್ಮಾನು

ಹೊರಡಿಸಿದನು. ಆಗಸ್ಟ್ ೧೫, ೧೯೪೭ರಂದು ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ಸಂಭ್ರಮದ ದಿನವಾದರೆ, ಭಾರತದ ಒಳಗಿರುವ ಈ ಸಂಸ್ಥಾನದ ಜನರಿಗೆ ಆತಂಕದ ದಿನವಾಯಿತು. ಭಾರತ ರಾಷ್ಟ್ರದ ಧ್ವಜವನ್ನು ಎಲ್ಲೂ ಹಾರಿಸಬಾರದೆಂದು ನಿಜಾಮ್ ಸರಕಾರ ಕಠೋರ ನಿರ್ಬಂಧ ವಿಧಿಸಿತು. ಸ್ವಾಭಿಮಾನಿ ಜನ ರಾಷ್ಟ್ರಧ್ವಜ ಹಾರಿಸಿ ಬಂಧನಕ್ಕೊಳಗಾದರು, ಹಿಂಸೆಗೆ ಗುರಿಯಾದರು.

### ೩.೨. ನಿಜಾಮರಿಂದ ವಿಮೋಚನೆ

ನಿಜಾಂ ಸರಕಾರದಲ್ಲಿ ಅವರ ನಿಲುವುಗಳನ್ನು ಬೆಂಬಲಿಸಲು 'ಇತ್ತೇಹಾದುಲ್ ಮುಸಲ್ಮೀನ್' ಎಂಬ ಸಂಘಟನೆ ಕಟಿಬದ್ಧವಾಗಿತ್ತು. ಈ ಸಂಘಟನೆಯ ಸದಸ್ಯರ ಸಂಖ್ಯೆ ಪ್ರಾರಂಭದಲ್ಲಿ ಕಡಿಮೆ ಪ್ರಮಾಣದಲ್ಲಿತ್ತು. ನಂತರ ಬೆಳೆಯುತ್ತ ಅರೆಮಿಲಿಟರಿಯ ರೂಪದಲ್ಲಿ ಬದಲಾಗುತ್ತ 'ರಜಾಕಾರರು' (ಸ್ವಯಂಸೇವಕ ದಳ) ಎಂಬ ಹೆಸರಿನಲ್ಲಿ ಇವರು ಕಾಣಿಸಿಕೊಂಡರು. ಇವರ ಮುಖಂಡ ಖಾಶಿಂ ರಜ್ವಿ ಮತೀಯವಾದಿಯಾಗಿದ್ದ ಇವನು ನಿಜಾಮ್ ಆಳ್ವಿಕೆಯನ್ನು ಬೆಂಬಲಿಸುತ್ತ, ನಿಜಾವ್ ಸರಕಾರದ ಸವಲತ್ತುಗಳನ್ನು ಸ್ವೇಚ್ಛೆಯಿಂದ ಬಳಸುತ್ತ ಮತಾಂಧನಾಗಿ ರೂಪುಗೊಂಡವನಾಗಿದ್ದ. ತನ್ನ ಅಧೀನದಲ್ಲಿದ್ದ ರಜಾಕಾರರಿಗೆ ಸಂಸ್ಥಾನದಲ್ಲೆಲ್ಲ ನಿಜಾಮ್ ಪ್ರಭುತ್ವವನ್ನು ಒಪ್ಪಿಕೊಳ್ಳುವಂತೆ ಜನರನ್ನು ಒತ್ತಾಯಿಸಲು ಹೇಳಿದ. 'ಕಾಟೋ, ಲೂಟೋ, ಆಪಸಮೆ ಬಾಟೋ' (ಕಡಿದು ಹಾಕಿ, ಮನಬಂದಂತೆ ಲೂಟಿ ಮಾಡಿ, ಎಲ್ಲರೂ ಹಂಚಿಕೊಳ್ಳಿ) ಎಂದು ಅವನು ತನ್ನ ಸಹಚರರಿಗೆ ಆದೇಶಿಸುತ್ತಿದ್ದನು. ಈ ರಜಾಕರರು ಸಂಸ್ಥಾನದ ತುಂಬ ಜನರ ಮೇಲೆ ಕ್ರೌರ್ಯದಿಂದ ದಬ್ಬಾಳಿಕೆ ನಡೆಸತೊಡಗಿದರು.

೧೯೪೮ರ ಹೊತ್ತಿಗೆ ರಜಾಕಾರರ ಸಂಖ್ಯೆ ಒಂದು ಲಕ್ಷಕ್ಕೆ ಬೆಳೆಯಿತು. ತಮ್ಮ ಪಡೆಗೆ ಜನರನ್ನು ಬಲವಂತದಿಂದ ಸೇರಿಸಿಕೊಳ್ಳಲಾಯಿತು. ಇದರ ಜತೆ ಪಠಾಣರು, ನಿಜಾಮ್ ಪೊಲೀಸರು ಸೇರಿಕೊಂಡು ಹಳ್ಳಿ ಹಳ್ಳಿಗಳಲ್ಲಿ ದಾಳಿ ಮಾಡಿದರು. ಅತ್ಯಾಚಾರ, ದರೋಡೆ, ಸಾವು ನೋವುಗಳಿಂದ ಇಡೀ ಸಂಸ್ಥಾನವೇ ತಲ್ಲಣಗೊಂಡಿತು. ಹಿಂದೂಗಳೊಂದಿಗೆ ಸೌಹಾರ್ದಯುತವಾಗಿ ಬಾಳುತ್ತಿದ್ದ ನಿಜಾಮನಿಗೆ ಹೋರಾಟಗಾರರನ್ನು ನಿಯಂತ್ರಿಸುವುದು ಬಿಸಿತುಪ್ಪವಾಗಿ ಪರಿಣಮಿಸಿತು. ಮಹಾತ್ಮಾ ಗಾಂಧಿ ಅವರ ಅನುಯಾಯಿಗಳು ಬ್ರಿಟೀಶರ ವಿರುದ್ಧ ಹೋರಾಡುತ್ತಿರುವಾಗ ಅದನ್ನು ನಿಜಾಮರ ವಿರುದ್ಧದ ಹೋರಾಟವೆಂದು ನಿಜಾಮನ ಸುತ್ತಮುತ್ತಲಿದ್ದವರು ತಪ್ಪಾಗಿ ತಿಳಿದರು. ಈ ತಪ್ಪುತಿಳುವಳಿಕೆ ನಿಜಾಮ ಸರ್ಕಾರ ಮತ್ತು ಸಾರ್ವಜನಿಕರ ಮಧ್ಯೆ ಸಂಘರ್ಷಕ್ಕೆ ನಾಂದಿಯಾಯಿತು.

ಬೀದರ್, ರಾಯಚೂರು, ಗುಲಬರ್ಗಾ ಜಿಲ್ಲಾ ಪ್ರದೇಶದ ಜನರು ರಜಾಕಾರರ ಕ್ರೌರ್ಯಕ್ಕೆ ಅಂಜಿ ಗಡಿಗಳನ್ನು ದಾಟಿ ವಲಸೆ ಹೋದರು. ರಜಾಕಾರರೆಂದು ಹೇಳಿಕೊಂಡು ಹಣ, ಅಧಿಕಾರಗಳು ಹೇಗೆ ಬಳಕೆಯಾಗುತ್ತಿದ್ದವು ಎಂಬುದನ್ನು ಈ ಭಾಗದ ಹಿರಿಯ ಸಾಹಿತಿಯೊಬ್ಬರು ತಮ್ಮ ಜೀವನಾನುಭವದಲ್ಲಿ ಈ ರೀತಿ ದಾಖಲಿಸಿದ್ದಾರೆ. 'ಹಳ್ಳಿಗಳಲ್ಲಿ ದುಡಿಯಲಾರದೇ ಉಡಾಳರಾಗಿ ತಿರುಗಾಡುತ್ತಿದ್ದ ತರುಣರೆಲ್ಲ 'ಖಾಕಿ' ಸಮವಸ್ತ್ರ ಧರಿಸಿ, ಲಾಟಿ(ಬಡಿಗೆ)ಯನ್ನೋ ಬಂದುಕನ್ನೋ

ಹಿಡಿದುಕೊಂಡು ಓಡಾಡುವ ಠೀವಿಯನ್ನು ನೋಡಬೇಕಾಗಿತ್ತು. ಶ್ರೀಮಂತರಿಂದ ಹಣ ಕೇಳಿ ಪಡೆಯುತ್ತಿದ್ದರು. ಕೊಡದಿದ್ದರೆ ಏನಾಗುವುದೋ? ಎಂಬ ಭಯ ಅಂತೂ ಮುಸಲ್ಮಾನೇತರ (ಹಿಂದುಗಳು?)ರನ್ನು ಕಾಡುತ್ತಿತ್ತು. ಗೌಡ-ಊರ ಹಿರಿಯರನ್ನು ಕಂಡು ದೂರದಲ್ಲಿ ನಿಂತು ವಿನಯದಿಂದ ಮಾತನಾಡುತ್ತಿದ್ದ ತೀರ ಸಾಮಾನ್ಯ ಮುಸಲ್ಮಾನನು ತಾನು ರಜಾಕಾರರೆಂದು ಭಾವಿಸಿ ಖಾಕಿ ಸಮವಸ್ತ್ರ ಧರಿಸಿ ಗೌಡರು ಹಿರಿಯರು ಕುಳಿತುಕೊಳ್ಳುತ್ತಿದ್ದ ಕಟ್ಟೆಯ ಮೇಲೆ ಕುಳಿತು ಕಾಸಿಮ್ ರಜ್ವಿಯ ಗುಣಗಾನ ಮಾಡುತ್ತಿದ್ದನು'[೨] ಲೇಖಕರ ಈ ನೆನಪಿನ ಮಾತುಗಳು ಜಾತಿ, ಮತ, ಪಂಥಗಳನ್ನು ಪ್ರಶ್ನಿಸಿರುವುದು, ಅವರ ಜಾತ್ಯತೀತ ಮನೋಭಾವನ್ನು ತೋರಿಸುತ್ತದೆ. ಮಾನವರಾದ ಪ್ರತಿಯೊಬ್ಬರೂ ಅವುಗಳನ್ನು ಗುಮಾನಿಯಿಂದ ನೋಡಬೇಕಾಗಿದೆ ಎಂಬ ಅರ್ಥವನ್ನೂ ಸಹ ಅದು ನೀಡುತ್ತದೆ. ಅಲ್ಲದೆ ರಜಾಕಾರರ ದಬ್ಬಾಳಿಕೆಯು ಯಾವೆಲ್ಲ ರೀತಿಯಿಂದ ಬಳಕೆಯಾಗುತ್ತಿತ್ತು ಎಂಬುದನ್ನು ತೋರಿಸುತ್ತದೆ.

ರಜಾಕಾರರು ಕ್ರೌರ್ಯ, ದಬ್ಬಾಳಿಕೆ, ಅನೀತಿಯಿಂದ ವರ್ತಿಸುತ್ತದ್ದರೆಂಬುದಕ್ಕೆ ಅನೇಕ ಘಟನೆಗಳು ಸಾಕ್ಷಿಯಾಗಿವೆ. ಉಸ್ಮಾನಿಯಾ ವಿಶ್ವವಿದ್ಯಾಲಯದ ಪದವಿಧರನಾದ ಶೋಯೇಬುಲ್ಲಾಖಾನನು 'ತಾಜ' ಎಂಬ ಪತ್ರಿಕೆಯ ಸಾಪ್ತಾಹಿಕದಲ್ಲಿ ಕಾಸಿಂ ರಜ್ವಿಯ 'ಇತ್ತೇಹಾದುಲ್ ಮುಸಲ್ಮೀನ್' ಕುರಿತು ಕಟುವಾಗಿ ಟೀಕಿಸಿದ್ದನೆಂದು ತಿಳಿಯುತ್ತದೆ. ಶೋಯೇಬುಲ್ಲಾಖಾನನು ಈ ಭಾಗದ ಹಿರಿಯ ಸಾಹಿತಿ ಮಾನ್ವಿ ನರಸಿಂಗರಾಯರ ಶಿಷ್ಯನಾಗಿದ್ದನು. ಅವನು ನರಸಿಂಗರಾಯರ 'ರೈಯತ' ಪತ್ರಿಕೆಯ ಉಪ ಸಂಪಾದಕನಾಗಿ ಕಾರ್ಯ ನಿರ್ವಹಿಸುತ್ತಿದ್ದನು. 'ಇಂರೋಜ್' ಎಂಬ ಉರ್ದು ಪತ್ರಿಕೆಯ ಸಂಪಾದಕ ಶೋಯೇಬುಲ್ಲಾಖಾನನು 'ರಜಾಕಾರರ ದಬ್ಬಾಳಿಕೆ' ಎಂದು ಒಂದು ಲೇಖನ ಬರೆದನು. ಕಟುವಾಗಿ ಟೀಕಿಸಿ ಬರೆದಕ್ಕಾಗಿ ಅವನನ್ನು ರಜಾಕಾರರು ಗುಂಡಿಟ್ಟುಕೊಂದರು. ಜಾತಿಭೇದ ಮರೆತು ಸಾಮಾಜಿಕ ನ್ಯಾಯಕ್ಕಾಗಿ ಹೋರಾಡಿದ ಅಂತ ಮಹಾನ್ ವ್ಯಕ್ತಿಯನ್ನು ಕೊಲೆಮಾಡಲಾಗಿತ್ತು. ಸೆಕ್ಯೂಲರ್ ರಾಷ್ಟ್ರವೆಂದು ಹೇಳಿಕೊಳ್ಳುತ್ತಿರುವ ಇಂದಿನ ಸ್ವಾರ್ಥ ರಾಜಕಾರಣಿಗಳಿಗೆ ಶೋಯೇಬುಲ್ಲಾಖಾನನಂಥ ರಾಷ್ಟ್ರವಾದಿಗಳ ಹೆಸರು ಎಷ್ಟರ ಮಟ್ಟಿಗೆ ಉಳಿದುಕೊಂಡಿದೆಯೋ ಪ್ರಗತಿಶೀಲರಿಗೆ ಯೋಚಿಸತಕ್ಕ ವಿಚಾರವಾಗಿ ಕಾಡುತ್ತದೆ. ನಂತರ ರಜಾಕಾರರು ಹಳ್ಳಿ ಹಳ್ಳಿಗಳಲ್ಲಿ ದರೋಡೆಗಳು, ಮಾನಭಂಗಗಳು, ಸಾವುಗಳು ಸಹಜ ಎಂಬಂತೆ ನಡೆಸತೊಡಗಿದರು. ಈ ಪರಿಸ್ಥಿತಿಯನ್ನು ಅರಿತ ಭಾರತ ಸರಕಾರವು, ನಿಜಾಮನಿಗೆ ಮೊದಲು ಹಿಂಸೆ, ದಬ್ಬಾಳಿಕೆ, ಸಾವುಗಳನ್ನು ನಿಲ್ಲಿಸಲು ಸೂಚಿಸಿತು. ಆದರೆ ಇದು ನಿಜಾಮನಿಂದ ಸಾಧ್ಯವಾಗಲಿಲ್ಲ. ಯಾಕೆಂದರೆ ರಜಾಕಾರರ ಕೈಗೊಂಬೆಯಾಗಿ ಆತ ಅಸಹಾಯಕನಾಗಿದ್ದ. ರಜಾಕಾರರು ಸಾರಿಗೆ ವ್ಯವಸ್ಥೆ, ಸೈನ್ಯ, ಮದ್ದು ಗುಂಡುಗಳನ್ನು ಮತ್ತು ಆಕಾಶವಾಣಿಯನ್ನೂ ಸ್ವತಂತ್ರವಾಗಿ ಬಳಸುವಷ್ಟು ಶಕ್ತಿ ಪಡೆದುಕೊಂಡಿದ್ದರು.

'ಹೈದರಾಬಾದ್ ಕರ್ನಾಟಕ'ದ ಅನೇಕ ರಾಜಕೀಯ ಮುಖಂಡರು ಜನರನ್ನು ಸಂಘಟಿಸಿ ನಿಜಾಮನ ವಿರುದ್ಧ ಹೋರಾಡುವ ಬದಲು ರಜಾಕರರ ವಿರುದ್ಧ ಹೋರಾಡುವ ಬಗ್ಗೆ ಗಂಭೀರವಾಗಿ ಆಲೋಚಿಸಿದರು. ರಾಷ್ಟ್ರೀಯ ಕಾಂಗ್ರೆಸ್ ನಾಯಕರ ಜತೆ ಸಮಾಲೋಚಿಸಿದರು.

ಹಿಂಸಾತ್ಮಕ ಹೋರಾಟಕ್ಕೆ ಹಿರಿಯ ನಾಯಕರ ಒಪ್ಪಿಗೆ ದೊರೆಯಲಿಲ್ಲ. ಆದರೆ ಪರಿಸ್ಥಿತಿಯ ಒತ್ತಡಕ್ಕೆ ಚಳವಳಿಗೆ ಆದೇಶ ನೀಡಿದರು. ರಜಾಕಾರರ ದಾಳಿಗೆ ತಲ್ಲಣಗೊಂಡು ಪರಪ್ರಾಂತ್ಯಗಳಿಗೆ ವಲಸೆ ಹೋಗಲು ಪ್ರಾರಂಭಿಸಿದ್ದ ಜನರಿಗೆ ಧೈರ್ಯ ತುಂಬುವುದಕ್ಕೆ ಹಾಗೂ ಜನರನ್ನು ಸಂಘಟಿಸಿ ಜನಾಂದೋಲನ ನಡೆಸುವ ಸಲುವಾಗಿ ಹೈದರಾಬಾದ್ ಕರ್ನಾಟಕದ ಕಾಂಗ್ರೆಸ್ ನಾಯಕರು ತೀವ್ರವಾಗಿ ಶ್ರಮಿಸಿದರು. ಹೋರಾಟಕ್ಕಾಗಿ 'ಕ್ರಿಯಾಸಮಿತಿ' ರಚನೆಯಾಯಿತು. ಪ್ರಮುಖ ರಾಜಕೀಯ ಹೋರಾಟಗಾರರ ನೇತೃತ್ವದಲ್ಲಿ ಶಿಬಿರಗಳನ್ನು ಸ್ಥಾಪಿಸಲಾಯಿತು. ಈ ಶಿಬಿರಗಳಲ್ಲಿ ಒಬ್ಬ ಶಿಬಿರಾಧಿಪತಿ, ದಳನಾಯಕ, ಕೋಶಾಧಿಪತಿ ಹಾಗೂ ಅವರಿಗೆ ಆಹಾರ ವ್ಯವಸ್ಥೆ ಮಾಡುವರು ಇದ್ದು, ಒಂದೊಂದು ಶಿಬಿರದಲ್ಲಿ ಮುಖ್ಯಸ್ಥರ ಜೊತೆಗೆ ನೂರಾರು ಜನರು ಹೋರಾಟಕ್ಕೆ ಸಿದ್ಧರಾಗಿರುತ್ತಿದ್ದರು. ರಜಾಕಾರರ ವಿರುದ್ಧ ಸಂಸ್ಥಾನದಲ್ಲಿ (ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ) ಸಶಸ್ತ್ರ ಹೋರಾಟ ಮಾಡುವುದೇ ಈ ಶಿಬಿರಗಳ ಉದ್ಧೇಶವಾಯಿತು. ಈ ಶಿಬಿರಗಳಲ್ಲಿ ಸೇರುವವರಿಗೆ ಸೈನಿಕ ತರಬೇತಿಯನ್ನು ವ್ಯವಸ್ಥಿತವಾಗಿ ನೀಡಲಾಯಿತು. ಅವರಿಗೆ ತರಬೇತಿ ನೀಡಲು 'ಆಜಾದ್ ಹಿಂದ್' ಸೈನ್ಯದಲ್ಲಿದ್ದವರೂ ಸಹ ಬಂದಿದ್ದರು. ತೆಲಂಗಾಣ, ಮದ್ರಾಸ್, ಮಹಾರಾಷ್ಟ್ರ ಗಡಿಗಳಲ್ಲಿ ಶಿಬಿರಗಳು ಹೆಚ್ಚು ಕ್ರಿಯಾಶೀಲವಾಗಿ ಹೋರಾಡಿ ರಜಾಕಾರರಿಗೆ ಭಯಹುಟ್ಟಿಸಿದವು. ಇದರಿಂದ ಹಳ್ಳಿ ಹಳ್ಳಿಗಳಲ್ಲಿ ಜನರಿಗೆ ಧೈರ್ಯ ಬಂದಿತು. ಶಿಬಿರಗಳಿಗೆ ಹೆಚ್ಚಿನ ನೆರವು ದೊರೆಯಿತು.

ಹೈದರಾಬಾದ್ ಕರ್ನಾಟಕದ ತುಂಬ ನೂರಾರು ಶಿಬಿರಗಳು ಹುಟ್ಟಿಕೊಂಡು ರಜಾಕಾರರ ವಿರುದ್ಧ ಹೋರಾಡಲು ಎಲ್ಲ ರೀತಿಯ ನೆರವು ದೊರೆಯಿತು. ಮಹಿಳೆಯರು ಈ ಶಿಬಿರಾರ್ಥಿಗಳಿಗೆ ತಮ್ಮ ತಮ್ಮ ನೆಲೆಗಳಲ್ಲಿ ಸಹಾಯ ಮಾಡಿದರು. ಮುಂಡರಗಿ, ಗಜೇಂದ್ರಗಡ, ಸಿಂಧಗಿ, ದುದನಿ, ತಾಳಿಕೋಟೆ, ತುಂಗಭದ್ರ, ಕಂಪ್ಲಿ, ಆದವಾನಿ, ಸಾಲೋಟಗಿ, ಗುಡ್ಡದ ಮಲ್ಲಾಪುರ, ಹೆಸರೂರು, ಸೂಡಿ, ನರೇಗಲ್ಲು, ಮಂತ್ರಾಲಯ ಮುಂತಾದ ಕಡೆಗಳಲ್ಲಿ ಮುಖ್ಯ ಶಿಬಿರಗಳಿದ್ದವು. ಈ ಶಿಬಿರದಲ್ಲಿ ಶರಣಗೌಡ ಇನಾಮದಾರ, ಗುರುಭೀಮರಾವ್ ಪಾಟೀಲ್, ಸಿದ್ದಣ್ಣ, ಬ್ಯಾರಿಸ್ಟರ್ ವೆಂಕಟಪ್ಪ ನಾಯಕ, ರಾಘವೇಂದ್ರರಾವ್ ಗುಡ್ಡದ, ಎಂ ನಾಗಪ್ಪ, ಅಳವಂಡಿ ಶಿವಮೂರ್ತಿಸ್ವಾಮಿ, ವಿರುಪಾಕ್ಷಪ್ಪ, ಮುಂತಾದವರು ಶಿಬಿರಾಧಿಪತಿಗಳಾಗಿ ನೇಮಕವಾಗಿದ್ದರು. ಶಿಬಿರಾಧಿಪತಿಗಳು ಹಾಗೂ ರಜಾಕಾರರ ನಡುವೆ ಕೆಲವು ಕಡೆ ಯುದ್ಧದ ರೀತಿಯಲ್ಲಿ ಕದನಗಳಾಗಿ ಸಾವಿರಾರು ಜನ ಪ್ರಾಣ ಕಳೆದುಕೊಂಡರು.

ಈ ಶಿಬಿರಗಳ ಮೂಲಕ ಜನರು ಹೋರಾಡಿದ ಪರಿಣಾಮವಾಗಿ ರಜಾಕಾರರು ಧೈರ್ಯಗುಂದಿದರು. ಕೊಪ್ಪಳದ ಸರಹದ್ದಿನ ಎಷ್ಟೋ ಹಳ್ಳಿಗಳು ಸ್ವತಃ 'ಸ್ವಾತಂತ್ರ್ಯ'ವನ್ನು ಘೋಷಿಸಿಕೊಂಡು ಸ್ಥಳೀಯ ಸರಕಾರವನ್ನು ಪಂಚಾಯತಿ ರಾಜ್ಯ ಮಾದರಿಯಲ್ಲಿ ರಚಿಸಿಕೊಂಡವು. ಆದರೂ ಸಂಸ್ಥಾನದಲ್ಲಿ ಕದನಗಳು ನಡೆದು ಸಾವು ನೋವಿನಿಂದ ಅರಾಜಕತೆ ಉಂಟಾಗಿದ್ದನ್ನು ಕಂಡ ಭಾರತ ಸರಕಾರವು ನಿಜಾಮ್ ಸಕಾರದ ವಿರುದ್ಧ ಪೊಲೀಸ್ ಕಾರ್ಯಾಚರಣೆಯನ್ನು ನಡೆಸಲು ನಿರ್ಧರಿಸಿತು. ಉಪಪ್ರಧಾನಿಗಳಾಗಿದ್ದ ಸರದಾರ ವಲ್ಲಭಭಾಯಿ ಪಟೇಲರು, ಜನರಲ್

ಚೌಧರಿಯವರ ನೇತೃತ್ವದಲ್ಲಿ ಭಾರತೀಯ ಸೇನೆಯನ್ನು ಸೆಪ್ಟೆಂಬರ್ ೧೩, ೧೯೪೮ರಂದು ನಿಜಾಮನ ವಿರುದ್ಧ ಹೋರಾಡಲು ಕಳುಹಿಸಿದರು. ಭಾರತೀಯ ಸೇನೆ ಹೈದರಾಬಾದ್ ಸಂಸ್ಥಾನವನ್ನು ಪ್ರವೇಶಿಸಿ ರಜಾಕಾರರಿಂದ ಉಂಟಾದ ಅರಾಜಕತೆಯನ್ನು ಶಾಂತಗೊಳಿಸಿತು. ಹಳ್ಳಿ ಹಳ್ಳಿಗಳಲ್ಲಿ ನಡೆದ ಕದನಗಳು ತಣ್ಣಗಾದವು. ಸೆಪ್ಟೆಂಬರ್ ೧೭, ೧೯೪೮ರಂದು ನಿಜಾಮ ಶರಣಾಗತನಾದನು. ಹೈದರಾಬಾದ್ ಸಂಸ್ಥಾನ ನಿಜಾಮನ ಆಳ್ವಿಕೆಯಿಂದ ಸ್ವತಂತ್ರವಾಯಿತು. ಇದನ್ನು ೨ನೇ ಸ್ವಾತಂತ್ರ್ಯ ಸಂಗ್ರಾಮವೆಂದರೆ ತಪ್ಪಾಗಲಾರದು. ಹೈದರಾಬಾದ್ ಕರ್ನಾಟಕ ರಾಜಕೀಯವಾಗಿ ವಿಮೋಚನವಾಯಿತು. ಅಂದಿನಿಂದ ಪ್ರತಿವರ್ಷ ಈ ಪ್ರಾಂತದಲ್ಲಿ ಸೆಪ್ಟೆಂಬರ್ ೧೭ ರಂದು 'ಹೈದರಾಬಾದ್ ಕರ್ನಾಟಕ ವಿಮೋಚನಾ ದಿನಾಚರಣೆ'ಯನ್ನು ಆಚರಿಸಲಾಗುತ್ತದೆ.

೧೯೪೭ರ ಆಗಸ್ಟ್ ೧೫ರ ನಂತರ ಹೈದರಾಬಾದ್ ಸಂಸ್ಥಾನದ ಭಾಗವಾದ ಬೀದರ್, ಗುಲಬರ್ಗಾ, ರಾಯಚೂರು ಜಿಲ್ಲಾ ಪ್ರದೇಶಗಳಲ್ಲಿ, ಗಡಿಗಳಲ್ಲಿ ಜನಸಮುದಾಯಗಳು ಅಪಾರ ನೋವನ್ನು ಅನುಭವಿಸಿದವು. ಹೈದರಾಬಾದ್ ಕರ್ನಾಟಕವು ೧೯೪೮ ಸೆಪ್ಟೆಂಬರ್ ೧೭ರಂದು ಸ್ವತಂತ್ರ ಭಾರತದಲ್ಲಿ ವಿಲೀನವಾದ ಮೇಲೆಯೂ ಅನೇಕ ಸಮಸ್ಯೆಗಳು ತಲೆದೋರಿದವು. ಹೊಸದಾಗಿ ರೂಪುಗೊಂಡ ಹೈದರಾಬಾದ್ ರಾಜ್ಯದಲ್ಲಿ ವಿವಿಧ ಕೋಮುಗಳ ನಡುವೆ ಒಡೆದ ಮನಸ್ಸುಗಳು ಸೌಹಾರ್ದತೆಯಿಂದಿರಲು ಸಾಧ್ಯವಾಗಲಿಲ್ಲ. ತೆಲುಗು ಭಾಷೆಯನ್ನಾಡುವ ಜನ ಭಾಷಾವಾರು ಪ್ರಾಂತ್ಯ ರಚನೆಗಾಗಿ ಪ್ರತ್ಯೇಕ ಆಂಧ್ರಕ್ಕಾಗಿ ಚಳವಳಿಯನ್ನು ಆರಂಭಿಸಿದರು. ಕನ್ನಡ ಭಾಷೆಯನ್ನಾಡುವ ಜನರೂ ಈ ದಿಸೆಯಲ್ಲಿ ಹೋರಾಟಕ್ಕೆ ಸಜ್ಜಾದರು. ಭಾಷಾವಾರು ಪ್ರಾಂತ್ಯ ರಚನೆಗಾಗಿ ಈ ಹಿಂದಿನಿಂದಲೇ ಚಳವಳಿಗಳು ಆರಂಭವಾಗಿದ್ದವು. ಅದರಲ್ಲೂ ಉರ್ದುಭಾಷೆ ಆಡಳಿತ ಭಾಷೆಯಾಗಿದ್ದರಿಂದ ಜನರಲ್ಲಿ ಅಸಮಾಧಾನವಿತ್ತು.[1] ಕನ್ನಡ ಭಾಷೆಯನ್ನಾಡುವ ಜನರ ಚಳವಳಿ ತೀವ್ರವಾದ ಪರಿಣಾಮವಾಗಿ ಹೈದರಾಬಾದ್ ರಾಜ್ಯದಲ್ಲಿದ್ದ ಬೀದರ್, ಗುಲಬರ್ಗಾ, ರಾಯಚೂರು ಜಿಲ್ಲೆಗಳು ಹೊಸದಾಗಿ ರಚನೆಯಾಗಿದ್ದ ಮೈಸೂರು ರಾಜ್ಯದಲ್ಲಿ ೧೯೫೬ರಲ್ಲಿ ಸೇರಿಕೊಂಡವು. ಮುಂದೆ ೧೯೭೩ರಲ್ಲಿ 'ಕರ್ನಾಟಕ ರಾಜ್ಯ'ವಾಯಿತು. ಈಚೆಗೆ ಆಡಳಿತದ ಅನುಕೂಲಕ್ಕಾಗಿ ಗುಲಬರ್ಗಾವನ್ನು ವಿಭಾಗವನ್ನಾಗಿ ಮಾಡಿ ಈ ಮೂರು ಜಿಲ್ಲೆಗಳ ಜೊತೆಗೆ ಬಳ್ಳಾರಿಯನ್ನು ಸೇರಿಸಲಾಯಿತು. ಈಗ ಕೊಪ್ಪಳ, ಯಾದಗಿರಿ ಜಿಲ್ಲೆಗಳಾಗಿವೆ. ಹೀಗಾಗಿ ಮೊದಲು 'ಹೈದರಾಬಾದ್ ಕರ್ನಾಟಕ' ಎಂದರೆ ಮೂರು ಜಿಲ್ಲೆಗಳಿಗೆ ಬದಲಾಗಿ ಈಗ ಆರು ಜಿಲ್ಲೆಗಳಾಗಿವೆ.

**ಕೊನೆ ಟಿಪ್ಪಣಿಗಳು**

೧. ಭಾಲಚಂದ್ರ ಜಯಶೆಟ್ಟಿ, ಹೈದರಾಬಾದ್ ಕರ್ನಾಟಕ ವಿಮೋಚನಾ ಚಳವಳಿ, ಪು ೧೪.

೨. ಚೆನ್ನಬಸವಪ್ಪ ಬೆಟ್ಟದೂರು, ನನ್ನ ಜೀವನಾನುಭವಗಳು, ಪು-೭೧.

# ಅಧ್ಯಾಯ ೪

## ಅನ್ಯಭಾಷೆಗಳ ಬೆಳವಣಿಗೆಯಲ್ಲಿ ಕನ್ನಡ ಸಾಹಿತ್ಯ ರಚನೆಯ ಅಡ್ಡಿ-ಆತಂಕಗಳು

ಳ.೧. ರಾಜಕೀಯ ಸ್ಥಿತ್ಯಂತರಗಳಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿ

ಳ.೨. ಮೋಡಿಲಿಪಿ ಬಳಕೆ

ಳ.೩. ನಿಜಾಮ್ ಆಡಳಿತ ಮತ್ತು ಬಹುಭಾಷೆಗಳ ತೊಡಕು

ಳ.ಳ. ಕನ್ನಡ ಅಭಿಮಾನ ಮತ್ತು ಶೈಕ್ಷಣಿಕ ಭಾಷೆಯಾಗಿ ಉರ್ದುವಿನ ಹೇರಿಕೆ

ಳ.೫. ಹೈದರಾಬಾದ್ ಕರ್ನಾಟಕ ಮತ್ತು ಆಧುನಿಕ ಕನ್ನಡ ಸಾಹಿತ್ಯ

## ಅಧ್ಯಾಯ ೪

# ಅನ್ಯಭಾಷೆಗಳ ಬೆಳವಣಿಗೆಯಲ್ಲಿ ಕನ್ನಡ ಸಾಹಿತ್ಯ ರಚನೆಯ ಅಡ್ಡಿ–ಆತಂಕಗಳು



ಭಾಷೆ ಎಂಬುದು ಒಂದು ವ್ಯವಸ್ಥೆ. ಅದು ಧ್ವನಿ ಸಂಕೇತಗಳ ವ್ಯವಸ್ಥೆ. ಅದೊಂದು ಸಾಮರ್ಥ್ಯ. ಅದು ಮನುಷ್ಯನ ನಡುವೆ ಸಂಪರ್ಕ ಸಾಧಿಸುವ ಉಪಯುಕ್ತವಾದ ಸಂವಹನ ಮಾಧ್ಯಮವಾಗಿದೆ. ಲಾಕ್ಷಣಿಕ ದಂಡಿ ಹೇಳುವಂತೆ 'ಜಗತ್ತಿನಲ್ಲಿ ಭಾಷೆ ಇಲ್ಲದೆ ಇದ್ದಿದ್ದರೆ ಜಗತ್ತು ಕತ್ತಲೆಯಲ್ಲಿ ಮುಳುಗಿರುತ್ತಿತ್ತು' ಎಂಬ ಮಾತು ಅಕ್ಷರಶಃ ನಿಜವೆನಿಸುತ್ತದೆ. ಅದನ್ನು ಬೆಳಕಿಗೆ, ಜ್ಯೋತಿಗೆ ಹೋಲಿಸಿರುವುದನ್ನು ಅಲ್ಲಮನ ವಚನದಲ್ಲಿ ಇಂದಿಗೂ ನಾವು ಕಾಣಬಹುದಾಗಿದೆ. ಇಂದು ಭಾಷೆಯೆನ್ನುವುದು ಇರದೇ ಹೊಗಿದ್ದರೆ ಕೇವಲ ಸಂಜ್ಞೆಗಳ ಮೂಲಕ ನಾವು ವ್ಯವಹರಿಸಬೇಕಾಗಿತ್ತು. ಅದು ನಮ್ಮ ಕಲ್ಪನೆಗೂ ಮೀರಿದ್ದಾಗಿದೆ. ಭಾಷೆಯು ಮಾನವನನ್ನು ಪ್ರಾಣಿ ಲೋಕದಿಂದ ಬೇರ್ಪಡಿಸುತ್ತದೆ. ಮನುಷ್ಯ ಭಾಷಿಕವಾಗಿ ತನ್ನ ಅಭಿವ್ಯಕ್ತಿಯನ್ನು ವ್ಯಕ್ತಪಡಿಸಿದರೆ, ಪ್ರಾಣಿಗಳು ಸಂಜ್ಞೆಯ ಮೂಲಕ ವ್ಯವಹರಿಸುತ್ತವೆ. ಉದಾಹರಣೆಗೆ ಬೆಕ್ಕೊಂದು ಬಾಲ ಅಲ್ಲಾಡಿಸಿದರೆ, ಅದಕ್ಕೆ ತಿನ್ನಲು ಕೊಡುವಂತೆ ಅದು ಕೇಳುತ್ತಿರಬಹುದು. ಹಾಗಂತ ಅದು ತನಗೆ ಹಾಲನ್ನೆ ಕೊಡು ಅಂತ ಕೇಳುವುದಿಲ್ಲ. ಮನುಷ್ಯ ತನಗೆ ಬೇಕಾದುದನ್ನು ಕೇಳಿ ಪಡೆದುಕೊಳ್ಳುವ ವಿಶಿಷ್ಟ ಸಾಮರ್ಥ್ಯ ಪಡೆದಿದ್ದಾನೆ. ಅದೇ ಭಾಷೆ ಮನುಷ್ಯನನ್ನು ಉಳಿದೆಲ್ಲ ಪ್ರಾಣಿಗಳಿಂದ ಬೇರ್ಪಡಿಸುವ ಅಂಶ. ಯಾವುದೇ ಭಾಷೆಗೆ ಎರಡು ರೀತಿಯ ಸ್ಪಷ್ಟವಾದ ಅಭಿವ್ಯಕ್ತಿ ಕ್ರಮಗಳು ಇರುತ್ತವೆ. ಒಂದು ಯಾವುದೇ ವಿಚಾರವನ್ನು ಬಾಯಿಮಾತಿನಿಂದ ವ್ಯಕ್ತಪಡಿಸುವುದು. ಎರಡನೆಯದು ವ್ಯಕ್ತಪಡಿಸಿದ್ದನ್ನು ಕಣ್ಣಿಗೆ ಗೋಚರವಾಗುವಂತೆ ರೂಪ ನೀಡುವುದು. ಅಂತೆಯೆ ಅದನ್ನು ಶಬ್ದವೆಂದು, ಎರಡನೆಯದನ್ನು ಬರಹ ರೂಪವೆಂದು, ಸಾಹಿತ್ಯವೆಂದು ಕರೆಯಲಾಗುತ್ತದೆ. ಭಾಷೆ ಕಾಲಕ್ಕೆ ತಕ್ಕಂತೆ ಬದಲಾಗುತ್ತ ಹೊಸತನವನ್ನು ಪಡೆಯುತ್ತಿರುತ್ತದೆ. ಅಕ್ಷರ ರೂಪ

ಪಡೆಯುವ ಭಾಷೆಯು ಸಾಹಿತ್ಯವೆನಿಸುತ್ತದೆ. ಸಾಹಿತ್ಯವು ಲೋಕಗ್ರಹಿಕೆಯನ್ನು, ಜನಜೀವನದ ಆಗುಹೋಗುಗಳನ್ನು ದಾಖಲಿಸುವ ಕೆಲಸವನ್ನು ಮಾಡುತ್ತದೆ. ಆ ಮೂಲಕ ಮುಂದಿನ ಪೀಳಿಗೆಗೆ ನೈತಿಕ ಮೌಲ್ಯಗಳನ್ನು, ಸಾಮಾಜಿಕ ವಾಸ್ತವವನ್ನು, ರಂಜನೆಯನ್ನು, ಸಂಪ್ರದಾಯವನ್ನು, ಸಂಸ್ಕೃತಿಯನ್ನು, ಸಂತೋಷವನ್ನು ನೀಡುತ್ತದೆ.

ಒಂದು ಭಾಷೆಯು ನಿತ್ಯವೂ ನಮಗೆ ತಿಳಿದೋ, ತಿಳಿಯದೆಯೋ ಬದಲಾಗುತ್ತಿರುತ್ತದೆ. ಸಾಮಾನ್ಯವಾಗಿ ಭಾಷೆಯಲ್ಲಿ ಬದಲಾವಣೆ, ವ್ಯತ್ಯಾಸ, ಪರಿವರ್ತನೆ, ಮುಂತಾದ ಪದಗಳು ಸಮಾನಾರ್ಥವನ್ನು ಹೊಂದಿವೆ. ಅವುಗಳ ಮಧ್ಯೆ ಹೇಳಿಕೊಳ್ಳುವಂತ ವ್ಯತ್ಯಾಸವನ್ನು ಕಾಣಲಾಗದು. ಸಮಾಜವು ಹೊರ ಜಗತ್ತಿನೊಂದಿಗೆ ಸಂಪರ್ಕ ಕಳೆದುಕೊಂಡಾಗ ಭಾಷೆಯಲ್ಲಿ ಬದಲಾವಣೆ ಕಡಿಮೆಯಾಗುತ್ತದೆ. ಸಾಮಾಜಿಕ, ರಾಜಕೀಯ, ವ್ಯಾಪಾರ, ಪ್ರವಾಸ ಸಂಬಂಧವಾದ ಸಂಪರ್ಕಗಳಿಂದ ಹಲವಾರು ಭಾಷೆಯ ಶಬ್ದಗಳು ಒಂದು ಭಾಷೆಯಲ್ಲಿ ಬಂದು ಸೇರಿಕೊಳ್ಳುತ್ತವೆ. ಅದು ನಿಜವಾದ ಅರ್ಥದಲ್ಲಿ ಭಾಷಾ ಬದಲಾವಣೆ ಎನಿಸಿಕೊಳ್ಳುತ್ತದೆ.

ಕರ್ನಾಟಕದ ಚರಿತ್ರೆಯಲ್ಲಿ ಅನೇಕ ಅರಸು ಮನೆತನಗಳು ಆಳಿವೆ. ಅವು ತಮ್ಮ ಭಾಷಾ ಅಭಿಮಾನವನ್ನು ಆಡಳಿತ ಕ್ಷೇತ್ರದಲ್ಲೂ ಮೆರೆದಿವೆ. ಅದರ ಪ್ರತಿಫಲವಾಗಿ ಇಂದು ಕನ್ನಡದಲ್ಲಿ ಅರೇಬಿಕ್, ಗ್ರೀಕ್, ರೋಮನ್, ಪಾರಸಿ, ಉರ್ದು, ಇಂಗ್ಲೀಶ್ ಮುಂತಾದ ಭಾಷೆಯ ಪದಗಳು ನಮ್ಮವೆನಿಸುವಷ್ಟು ಆಪ್ತವಾಗಿ ಬಳಕೆಯಲ್ಲಿವೆ. ಅವು ಇಂತಿವೆ: ತನಖ, ಪರೇಷಾನ್, ನಾಲಾಯಕ್, ದುಖಾನ್, ತರೀಖ, ಕಿಚಡಿ, ದಗದ, ಪೋಣೆಆಟ್, ಭಕ್ರಿ, ಅಟಾಪ್, ಸಡಕ್, ಶಿರ್ಫ್, ಹವಲ್ದಾರ್, ನಾಮರ್ದ, ಸಿಪಾಯಿ, ಗೋರಿ, ಖೂನಿ, ದಫೇದಾರ್, ಶಹರು, ಜಾಗೀರು, ಹಮಲ್ದಾರ್, ಫಿರಂಗಿ, ಹಫೀಮು, ತಾಯಿತ, ಯೂನಾನಿ, ರುಜು, ಹಜಾಮ, ಜೇಬು, ಜಾಮೀನು, ತಾರೀಖು, ಮುಸ್ಕಿಲ್, ಕತಲ್, ಮೆಹನತ್ ಇತ್ಯಾದಿ. ಭಾಷೆಯಲ್ಲಿ ವ್ಯತ್ಯಾಸಗಳಾಗಲು ಭಾಷಾ ವಿಜ್ಞಾನಿಗಳು ಸೋಮಾರಿತನ, ಸೌಲಭ್ಯಾಕಾಂಕ್ಷೆ, ಉಚ್ಚಾರಣೆಯ ಕಷ್ಟ, ನಾಗರಿಕತೆ, ಭಾಷಾ ಸುಧಾರಣೆಗಳು, ಪ್ರಭಾವಿ ವ್ಯಕ್ತಿಗಳು ಇತ್ಯಾದಿ ಬಹುಮುಖ್ಯ ಕಾರಣಗಳನ್ನು ತಿಳಿಸುತ್ತಾರೆ. ಬೇರೆ ಬೇರೆ ಭಾಷೆಗಳ ಪದಗಳು ಕನ್ನಡದಲ್ಲಿ ಬರಲು ಯಾವ ಅಂಶಗಳು ಕಾರಣವಾಗಿವೆ ಎಂಬುದನ್ನು ಗಮನಿಸುವುದು ಸೂಕ್ತವೆನಿಸುತ್ತದೆ.

ಸ್ವಾತಂತ್ರ್ಯಪೂರ್ವ ಕಾಲದಲ್ಲಿ ರಾಜ್ಯಗಳಿಗೆ ಸ್ಥಿರವಾದ ಗಡಿಗಳು ಇರಲಿಲ್ಲ. ನದಿಗಳು ರಾಜ್ಯಗಳ ಗಡಿಗಳನ್ನು ಸಂಕೇತಿಸುತ್ತಿದ್ದವು. ಉತ್ತರ ಮತ್ತು ದಕ್ಷಿಣ ಎಂಬ ಮಧ್ಯ ಗಡಿರೇಖೆಗಳು ಭಾರತಕ್ಕಿದ್ದಂತೆ ಕರ್ನಾಟಕಕ್ಕೂ ಇದ್ದವು. ಭಾರತದ ದಖ್ಖನ್ (ದಕ್ಷಿಣ) ಪ್ರಾಂತ್ಯಕ್ಕೆ ಉತ್ತರ ಭಾರತದ ಅಲ್ಲಾವುದ್ಧೀನ್ ಖಿಲ್ಜಿ ೧೨೯೬ರಲ್ಲಿ ದಾಳಿ ಮಾಡಿದನು. ಅವನ ನಂತರ ಮಲ್ಲಿಕಾಫರ್ ೧೩೦೭ರಲ್ಲಿ ದಾಳಿ ಮಾಡಿದನು. ಈತನು ೧೩೦೯, ೧೩೧೧ರಲ್ಲಿ ದಾಳಿ ಮಾಡಿದ ಪರಿಣಾಮ ಕರ್ನಾಟಕದ ಅರಸರು ಮೂಲೆಗುಂಪಾದರು. ತುಘಲಕ್‌ನ ಕಾಲದಲ್ಲಿ ಕರ್ನಾಟಕದಲ್ಲಿ ಅರಸರ ಕಾಲ ಮುಗಿಯಿತು ಎಂಬಂತಾಯಿತು. ಆದರೂ ಕರ್ನಾಟಕದ ತುಂಗಭದ್ರಾ ನದಿ ಪ್ರದೇಶದ

ಹಂಪೆಯಲ್ಲಿ ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯ ಹುಟ್ಟಿಕೊಂಡಿತು. ಇದರ ಬೆನ್ನ ಹಿಂದೆಯೇ ೧೩೪೭ರಲ್ಲಿ ಬಹಮನಿ ಸಾಮ್ರಾಜ್ಯವು ಹುಟ್ಟಿಕೊಂಡಿತು. ಈ ಎರಡು ರಾಜ್ಯಗಳಿಗೆ ಗಡಿರೇಖೆಯಾಗಿ ಕರ್ನಾಟಕದ ಉತ್ತರಕ್ಕೆ ಕೃಷ್ಣಾನದಿ, ದಕ್ಷಿಣದ ಕಡೆ ತುಂಗಭದ್ರಾ ನದಿ ಗಡಿಗಳಾಗಿ ಇದ್ದವು. ಉತ್ತರದ ಅರಸರು ದಾಳಿ ಮಾಡಿದಂದಿನಿಂದ ಉತ್ತರ ಕರ್ನಾಟಕ ಎಂದು ಈಗ ನಾವು ಗುರುತಿಸುವ ಪ್ರದೇಶವು 'ಅನ್ಯ ಸಂಸ್ಕೃತಿ' ಪ್ರಭುತ್ವದ ಕೈಯಲ್ಲಿ ಉಳಿಯಿತು. ಅಂದರೆ ಬಹಮನಿ, ಆದಿಲ್ ಶಾಹಿಗಳ ಅಧಿಕಾರ ನಡೆದು ಇಲ್ಲಿನ ವಿಜಾಪುರ, ಗುಲಬರ್ಗಾ, ರಾಯಚೂರು, ಬೀದರ, ಹುಬ್ಬಳ್ಳಿ, ಅಥಣಿ, ರಾಯಭಾಗ ಮುಂತಾದವು ನಗರಗಳಾಗಿ, ವ್ಯಾಪಾರ ಕೇಂದ್ರಗಳಾಗಿ ಅಭಿವೃದ್ಧಿ ಹೊಂದಿದವು. ಆದರೆ ಅವು ೧೬೮೬ರಲ್ಲಿ ನಡೆದ ಮೊಗಲರ ದಾಳಿಗೆ ತುತ್ತಾದವು.

ಔರಂಗಜೇಬನು ಈ ಪ್ರಾಂತ್ಯದಲ್ಲಿ ಉಳಿದು ರಾಜ್ಯಾಡಳಿತ ನಡೆಸಲಿಲ್ಲ. ಮೇಲಾಗಿ ಮರಾಠರ ದಾಳಿಯನ್ನು ಎದುರಿಸುವಲ್ಲಿ ಕಾಲ ಕಳೆದು ಸಾಕಾಗಿ ರೋಸಿ ಮರಳಿ ಹೋದನು. ಈ ಅವಧಿಯಲ್ಲಿ ವಿಜಾಪುರ, ಗುಲಬರ್ಗಾ, ಬೀದರ್, ರಾಯಚೂರು ನಗರಗಳು ನೆಲೆನಿಂತು ಆಡಳಿತ ನಡೆಸುವ ಪ್ರಭುತ್ವಗಳಿಲ್ಲದೆ ಬಹಮನಿ ಆದಿಲ್ ಶಾಹಿಗಳ ಕಾಲಾವಧಿಯಲ್ಲಿ ಸಾಧಿಸಿದ್ದ ಪ್ರಗತಿಯಿಂದ ಕುಸಿದು ಹೋದವು. ೧೭೨೪ರಲ್ಲಿ ನಿಜಾಮ್ ರಾಜ್ಯ ಆರಂಭವಾಯಿತು. ಮೊಗಲರ ಅಧೀನದ ದಖ್ಖನ್ ಪ್ರಾಂತ್ಯವು ನಿಜಾಮರ ಅಧೀನಕ್ಕೆ ಬಂದರೂ, ಪೇಶ್ವೆಗಳ ಅಧೀನದಲ್ಲಿ ವಿಜಾಪುರ, ಬೆಳಗಾವಿ, ಧಾರವಾಡ, ಹುಬ್ಬಳ್ಳಿಗಳು ಉಳಿದವು. ಈ ಅವಧಿಯಲ್ಲಿಯೇ ಡಚ್ಚರು, ಫ್ರೆಂಚರು, ಬ್ರಿಟೀಶರು ಮೊದಲು ವ್ಯಾಪಾರ ಮನೋಭಾವದಿಂದ ಬಂದು ನಂತರ ರಾಜ್ಯಾಧಿಕಾರದ ಮನೋಭಾವಕ್ಕೆ ತಿರುಗಿದರು. ಅದರಲ್ಲಿ ತುಸುಮಟ್ಟಿನ ಸಾಫಲ್ಯವನ್ನು ಪಡೆದರು. ವಿದೇಶಿ ಪ್ರಭುತ್ವಗಳ ಅಧಿಕಾರ ದಾಹಕ್ಕಾಗಿ ನಡೆದ ಯುದ್ಧಗಳಲ್ಲಿ ಸ್ಥಳೀಯ ಪ್ರಭುತ್ವಗಳು ತಮ ತಮಗೆ ಸರಿ ಕಂಡವರ ಜತೆಗೆ ಉಳಿದವು. ಅತಿ ವಿಧೇಯತೆಯಿಂದ ಎಲ್ಲ ನೆರವು ನೀಡಿ ಕೊನೆಗೆ ತಾವೇ ಅವನತಿ ಹೊಂದಿದವು. ಬ್ರಿಟೀಶ್ ವಸಾಹತುಶಾಹಿ ಆಳ್ವಿಕೆ ಆರಂಭವಾದರೂ ಅವರ ಅಧೀನದಲ್ಲಿಯೆ ನಿಜಾಮನ ಸಂಸ್ಥಾನ ಅಧಿಕಾರ ನಡೆಸಿತು.

ಬ್ರಿಟೀಶರು ೧೮೧೮ರಲ್ಲಿ ಪೇಶ್ವೆಗಳ ಆಳ್ವಿಕೆಯನ್ನು ಅಂತ್ಯಗೊಳಿಸಿದ ನಂತರ ಅವರ ಅಧೀನದ ಪ್ರದೇಶಗಳನ್ನು ಸಣ್ಣಸಣ್ಣ ಸಂಸ್ಥೆಗಳನ್ನಾಗಿ ಮಾಡಿದರು. ಅಲ್ಲಿ ಪೇಶ್ವೆ ವಂಶಸ್ಥರನ್ನೇ ಅಧಿಕಾರದಲ್ಲಿ ಕೂಡಿಸಿದರು. ಅಕ್ಕಲಕೋಟೆ, ಕುಂದರವಾಡ, ಜತ್ತು, ಕಿರಿಮಿರಜು, ಮುಧೋಳ, ರಾಮದುರ್ಗ, ಸಾಂಗಲಿ, ಸವಣೂರು ಮುಂತಾದ ಕನ್ನಡ ಪ್ರದೇಶಗಳ ಸಂಸ್ಥೆಗಳಲ್ಲಿ ಮರಾಠಿ ಭಾಷೆಯ ಪೇಶ್ವೆ ವಂಶಸ್ಥರು ಆಳ್ವಿಕೆ ನಡೆಸಿದರು. ಉತ್ತರ ಕರ್ನಾಟಕದಲ್ಲಿ ಪೇಶ್ವೆ, ನಿಜಾಮ್ ಆಳ್ವಿಕೆಯು ಸ್ವಾತಂತ್ರ್ಯ ಬರುವವರೆಗೆ ಇತ್ತು. ಬಳ್ಳಾರಿಯನ್ನು ಟಿಪ್ಪುಸುಲ್ತಾನನಿಂದ ಕಸಿದುಕೊಂಡ ಮೇಲೆ ಅದನ್ನು ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿಸಲಾಯಿತು. ಅಲ್ಲಿ ತೆಲುಗು ಭಾಷೆಯಿತ್ತು. ಬಾಂಬೆ ಪ್ರೆಸಿಡೆನ್ಸಿಗೆ ವಿಜಾಪುರ, ಧಾರವಾಡ, ಬೆಳಗಾವಿ, ಉತ್ತರ ಕನ್ನಡ ಜಿಲ್ಲೆಗಳು ಸೇರಿದ್ದರೂ ಅಲ್ಲಿ ಮರಾಠಿ ಭಾಷೆ ಸಂಸ್ಕೃತಿಯೇ ಮೇಲುಗೈ ಸಾಧಿಸಿತು. ಇದು ಅಂದಿನ ರಾಜಕೀಯ ಸ್ಥಿತಿಗತಿಯಾಗಿತ್ತು.

ಧಾರ್ಮಿಕವಾಗಿ, ಕರ್ನಾಟಕದ ಉತ್ತರ ಭಾಗದ ವಿಜಾಪುರ, ಗುಲಬರ್ಗಾ, ರಾಯಚೂರು, ಬೀದರ್ ಜಿಲ್ಲಾ ಪ್ರದೇಶಗಳಲ್ಲಿ ವಚನಕಾರರ ನಂತರ ಜನಸಮುದಾಯಗಳ ಮೇಲೆ ಇಸ್ಲಾಂ, ಸೂಫಿ ಮತ್ತು ದರ್ವೇಶಿಗಳ ಪ್ರಭಾವ ಹೆಚ್ಚಾಗಿತ್ತು. ದಖ್ಖನ್ ಪ್ರಾಂತದ ಮೇಲೆ ೧೩ನೇ ಶತಮಾನದ ಆರಂಭದಿಂದಲೇ ಖಿಲ್ಜಿ, ಮಲ್ಲಿಕಾಫರ್, ತುಘಲಕ್ ಇವರ ಮುಂದಾಳುತನದಲ್ಲಿ ದಾಳಿ ನಡೆದು ಬಹಮನಿ ರಾಜ್ಯ ನೆಲೆಗೊಳ್ಳುವ ಹೊತ್ತಿಗೆ ಉತ್ತರ ಭಾರತದ ಸೈನಿಕ ದಾಳಿಯ ಜತೆಗೆ ಅರಬರು, ಟರ್ಕರು, ಅಫ್ಘನ್ನರು, ಪರ್ಷಿಯನ್ನರು, ಮೊಘಲರು ಬಂದು ಸೇರಿಕೊಂಡರು. ಬಹಮನಿ ರಾಜ್ಯ ನೆಲೆಗೊಳ್ಳಲು ಇಲ್ಲಿಗೆ ಬಂದು ಸೇರಿದ್ದ ಅಪಾರ ಸಂಖ್ಯೆಯ ಇಸ್ಲಾಂ ವಿದ್ವಾಂಸರು, ಕವಿಗಳು, ಧಾರ್ಮಿಕ ಗುರುಗಳು, ಸೂಫಿಗಳು, ಕುಶಲ ಕರ್ಮಿಗಳು, ಕಸುಬುದಾರರು, ಪ್ರವಾಸಿಗರು, ವ್ಯಾಪಾರಸ್ಥರು ಕಾರಣರಾದರು.

ನಂತರ ಉತ್ತರ ಭಾರತದಿಂದ ಬೇರೆ ಬೇರೆ ಕಸುಬಿನ ಜನಸಮುದಾಯಗಳು ಇಲ್ಲಿ ಬಂದು ನೆಲೆನಿಂತವು. ಈ ಅನ್ಯ ಭಾಷೆ, ಧರ್ಮ, ಸಂಸ್ಕೃತಿ ಜನಸಮುದಾಯಗಳ ಜೊತೆಗೆ ಸ್ಥಳೀಯ ಮರಾಠಿ, ಕನ್ನಡ, ತೆಲುಗು ಭಾಷೆ, ಧರ್ಮ, ಸಂಸ್ಕೃತಿಯ ಜನಸಮುದಾಯಗಳು ಬಾಳುವ ಅನಿವಾರ್ಯತೆ ಏರ್ಪಟ್ಟಿತು. ವೈಧಿಕ ಧರ್ಮವಂತೂ ತನ್ನ ಜಾಯಮಾನವನ್ನು ಕಾಪಾಡಿಕೊಂಡು ನಡೆದಿತ್ತು. ಪೇಶ್ವೆಗಳ ಆಳ್ವಿಕೆಯಲ್ಲಿ ವೈದಿಕ ಧರ್ಮಕ್ಕೆ ಯಾವ ಅಡ್ಡಿ ಆತಂಕಗಳು ಇರಲಿಲ್ಲ. ವಚನಕಾರರ ಕಾಲಾವಧಿಯಲ್ಲಿ ನಡೆದ ಪ್ರಯೋಗಗಳು ಅವು ಹೆಣ್ಣು ಗಂಡಿನ ಸಮಾನ ಅವಕಾಶ, ಜಾತ್ಯಾತೀತ ಸಮಾಜದ ಕಲ್ಪನೆ, ಅಂತರ್‌ಜಾತಿ ವಿವಾಹ, ಕಾಯಕ, ದಾಸೋಹದ ಪರಿಕಲ್ಪನೆ, ಮತಾಂತರ ಮುಂತಾದವು ಪ್ರಯೋಗಗಳಾಗಿ ತಾತ್ವಿಕವಾಗಿ ಹೊಸ ಸಮಾಜದ ಕಲ್ಪನೆ ಮೂಡಿತ್ತು. ಆದರೆ ಈ ವೈಚಾರಿಕವಾದ, ಕ್ರಾಂತಿಕಾರಕವಾದ ಆಂದೋಲನ ದೀರ್ಘಕಾಲ ನಡೆಯಲಿಲ್ಲ. ಅದಕ್ಕೆ ಪ್ರಭುತ್ವ ಅವಕಾಶ ನೀಡಲಿಲ್ಲ. ಅದರಿಂದಾಗಿ ಸಂಘರ್ಷಗಳು ಹುಟ್ಟಿಕೊಂಡು ದಿನಕಳೆದಂತೆ ಅವು ಹೆಚ್ಚಾದವೆ ಹೊರತು ಕಡಿಮೆಯಾಗಲಿಲ್ಲ.

ವಚನಕಾರರು, ಶರಣರು ಕಲ್ಯಾಣದಿಂದ ಹೊರಬಿದ್ದ ಮೇಲೆ ಈ ಲಿಂಗಾಯತ ಜನಸಮುದಾಯಗಳಿಗೆ ನಾಯಕತ್ವದ ಕೊರತೆ ಉಂಟಾಯಿತು. ಅತಂತ್ರ ಸ್ಥಿತಿಯಲ್ಲಿ ಉಳಿದು ಒಳಗೊಳಗೆ ಸಂಘರ್ಷಗಳು ಹೆಚ್ಚಾಗಿ ಕೊನೆಗೆ ವಿಜಯನಗರದ ಅರಸ ಪ್ರೌಢದೇವರಾಯನ ಕಾಲದಲ್ಲಿ ಸಂಘಟಿತ ಧರ್ಮವಾಗಲು ಪ್ರಯತ್ನಿಸಿತು. ಸಾಂಸ್ಥಿಕ ಧರ್ಮವಾಗಿ ಪುನಃ ಜಾತಿಯಾಗಿ, ಧರ್ಮವಾಗಿ ಮುನ್ನಡೆಯಿತು. ಇದು ಹಂಪೆಯ ಪರಿಸರದಲ್ಲಿ ಆರಂಭವಾಗಿ ತುಂಗಭದ್ರ ನದಿಯಿಂದ ಕರ್ನಾಟಕದ ದಕ್ಷಿಣದ ಕಡೆ ನೆಲೆಗೊಂಡಿತು. ೧೨ನೇ ಶತಮಾನದಲ್ಲಿ ಸಮಾಜದ ಅಂಚಿನಲ್ಲಿ ಬದುಕುತ್ತಿದ್ದವರು ಬಸವಣ್ಣನ ನೇತೃತ್ವದಲ್ಲಿ ಲಿಂಗವಂತರಾಗಿ, ೧೫ನೇ ಶತಮಾನದ ಹೊತ್ತಿಗೆ ಹಂಪೆಯ ಪರಿಸರದಲ್ಲಿ ವೀರಶೈವೀಕರಣಗೊಂಡ ಮೇಲೆ ಮತಾಂತರಗೊಂಡ ಕೆಳ ಸಮುದಾಯಗಳು ಪುನಃ ಮೂಲ ನೆಲೆಗೆ ತಳ್ಳಲ್ಪಟ್ಟವು. ಇಲ್ಲಿಂದ ಈ ಕೆಳ ಮತ್ತು ದಲಿತ ಸಮುದಾಯಗಳಿಗೆ ಅನನ್ಯತೆಯ ಪ್ರಶ್ನೆ ಉದ್ಭವವಾಗಿ, ತಮ ತಮಗೆ ಸರಿ ಕಂಡ ಸ್ಥಳೀಯ

ದೈವಗಳಿಗೆ ಮೊರೆಹೋಗಿ ಬದುಕತೊಡಗಿದವು. ಈ ಹೊತ್ತಿಗಾಗಲೇ ಹಂಪೆಯ ತುಂಗಭದ್ರಾ ನದಿಯಿಂದ ಮೇಲಕ್ಕೆ ಅಂದರೆ ಉತ್ತರದ ಕಡೆಗೆ ನೆಲೆನಿಂತ 'ಇಸ್ಲಾಂ', 'ಸೂಫಿ', 'ಅನುಭಾವಿ' 'ಆರೂಢ', 'ವಿರಕ್ತ', 'ಸಿದ್ಧ' ಮುಂತಾದ ಹತ್ತಾರು ಧಾರ್ಮಿಕ ಪಂಥಗಳು ಜನಸಮುದಾಯಗಳನ್ನು ಸೆಳೆದುಕೊಂಡು ಬೆಳೆದವು. ವೈದಿಕರು ತಮ್ಮ ಧರ್ಮ, ಮತಮಾನ್ಯಗಳ ಜೊತೆಗೆ, ಲಿಂಗಾಯಿತರಲ್ಲಿ ಮೇಲ್ಜಾತಿಗಳು ಬಹಳ ಸೀಮಿತವಾಗಿ ಬಾಳತೊಡಗಿದವು. ಆದರೆ ಸೂಫಿ, ಫಕೀರರು, ಅನುಭಾವಿಗಳು, ಆರೂಢ, ವಿರಕ್ತ ಮುಂತಾದ ಆಧ್ಯಾತ್ಮಿಕ ಪಂಥಗಳು ಗುರು ಶಿಷ್ಯ ಪರಂಪರೆಯಲ್ಲಿ ಅನೇಕ ಸಮುದಾಯಗಳು ಬದುಕುತೊಡಗಿದವು. ಈ ಬುದುಕು ಸಂಕರವಾಯಿತು. ಈ ಸಂಕರ ಬದುಕು ಸೃಜನಶೀಲವಾಗಿ ಬೆಳೆಯಿತು. ಕೊಡೇಕಲ್ಲು ಬಸವಣ್ಣ, ತಿಂಥಿಣಿ ಮೌನೇಶ್ವರ, ಶಿರಹಟ್ಟಿ ಫಕೀರೇಶ್ವರ, ಎಡಬಾಳದ ನಾಗನಾಥ ಮುಂತಾದವರು ಈ ಸಂಕರ ಸಂಸ್ಕೃತಿಯ ಪ್ರತಿನಿಧಿಗಳಾಗಿದ್ದಾರೆ. ಇವರೆಲ್ಲರೂ 'ಸೂಫಿತತ್ವ' ಮತ್ತು 'ಆರೂಢತತ್ವ'ಗಳನ್ನು ಮೈಗೂಡಿಸಿಕೊಂಡು ಸಾಧನೆ ಮಾಡಿ ಪರಂಪರೆಯಾಗಿ ರೂಪುಗೊಂಡರು. ಸೂಫಿಗಳ ದರಗಾಗಳು ಮುಸ್ಲಿಮೇತರ ಕೆಳ ಸಮುದಾಯಗಳ ಧಾರ್ಮಿಕ ಕೇಂದ್ರಗಳಾಗಿ ಇಂದಿಗೂ ನಿಂತಿವೆ. ೧೯೪೭-೪೮ರಲ್ಲಿ ಹೈದರಾಬಾದ್ ಕರ್ನಾಟಕ ವಿಮೋಚನಾ ಚಳವಳಿಯ ಸಂದರ್ಭದಲ್ಲಿ ರಜಾಕಾರರ ಕೋಮುವಾದಿ ಸಂಘರ್ಷ ಕಾಣಿಸಿಕೊಂಡಿದ್ದು ಬಿಟ್ಟರೆ, ಈ ಪ್ರಾಂತ್ಯದಲ್ಲಿ ಕೋಮುವಾದದಿಂದ ಹಿಂಸೆಗಳಾಗಿಲ್ಲ. ಆದರೆ ಜಾತಿಗಳು ಬಿಗಿಯಾಗಿದ್ದವು ಎಂಬುದು ನಿಜ. ೧೯೮೦ರಿಂದ ಈಚೆಗೆ ಪದೇ ಪದೇ ದಲಿತರ ಮೇಲೆ ದೌರ್ಜನ್ಯಗಳಾಗಿವೆ. ಬಹಿಷ್ಕಾರಗಳು ಜರುಗಿವೆ.

ಮುಂಬೈ ಪ್ರೆಸಿಡೆನ್ಸಿಯ ಆಡಳಿತಕ್ಕೆ ಒಳಗಾದ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಉತ್ತರ ಕನ್ನಡ, ಧಾರವಾಡ, ಬೆಳಗಾವಿ ಜಿಲ್ಲೆಗಳಲ್ಲಿ ಮರಾಠಿ ಭಾಷೆ ಸಂಸ್ಕೃತಿಯ ಪ್ರಭಾವವೇ ಹೆಚ್ಚಾಗಿತ್ತು. ಚಿಕ್ಕ ಸಂಸ್ಥಾನಗಳಲ್ಲಿ ಮರಾಠಿ ಭಾಷೆಯ, ವೈದಿಕ ಸಂಸ್ಕೃತಿಯ ಪ್ರಭಾವ ತುಂಬಿತ್ತು. ಕನ್ನಡ ಪ್ರದೇಶಗಳಾದ, ಕನ್ನಡವನ್ನು ಇನ್ನೂ ಉಳಿಸಿಕೊಂಡಿರುವ ಸೊಲ್ಲಾಪುರ, ಅಕ್ಕಲಕೋಟೆ, ಮಹಿಂದರಗಿ, ದುಧನಿ, ಅಫಜಲ್‌ಪುರ ಮುಂತಾದ ಕಡೆ ಮನೆ ಮಾತು ಕನ್ನಡವಿದ್ದು, ಅಕ್ಷರಭ್ಯಾಸ ಮರಾಠಿಯಲ್ಲಿ ನಡೆಯುತ್ತ ಬಂದಿದೆ. ಬಿಟೀಶರ ನೇರ ಆಡಳಿತವಿದ್ದ ಕಾರಣ ಅಲ್ಲಿ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಕೊಡಲಾಯಿತು. ಮರಾಠಿ ಶಾಲೆಗಳು ಹೆಚ್ಚಾಗಿದ್ದವು. ಬ್ರಿಟೀಶ್ ಶಿಕ್ಷಣ ವಲಯದ ಅಧಿಕಾರಿಗಳ ಸಮೀಕ್ಷೆಗಳಿಂದ ಇದು ಕನ್ನಡ ಪ್ರದೇಶವೆಂದು ತಿಳಿದ ಮೇಲೆ ಇಲ್ಲಿ ಕನ್ನಡ ಶಾಲೆಗಳೂ ಹೆಚ್ಚಾಗಿ, ಕನ್ನಡ ಭಾಷೆಯ ಮೂಲಕ ಶಿಕ್ಷಣ ನೀಡುವಂತಾಯಿತು. ಇಂಗ್ಲೀಶ್ ವಿದ್ಯಾಭ್ಯಾಸವೂ ಗಮನಾರ್ಹವಾಗಿ ಬೆಳೆಯಿತು. ಕರ್ನಾಟಕ ವಿಶ್ವವಿದ್ಯಾಲಯವೂ ಸ್ಥಾಪನೆಯಾಯಿತು. ಇಂಗ್ಲೀಶ್ ವಿದ್ಯಾಭ್ಯಾಸವೂ ಗಮನಾರ್ಹವಾಗಿ ಬೆಳೆಯಿತು. ಶೈಕ್ಷಣಿಕವಾಗಿ ಮೈಸೂರು ಸಂಸ್ಥಾನ ಮುಂಚೂಣಿಯಲ್ಲಿದ್ದು ಧಾರವಾಡ ಮೆಲ್ಲಗೆ ಅಭಿವೃದ್ಧಿಯಾಯಿತು. ನಿಜಾಮ್ ಸಂಸ್ಥಾನದಲ್ಲಿ ಉರ್ದು ಮಾಧ್ಯಮದಲ್ಲಿ ಶಿಕ್ಷಣ ನೀಡಲಾಯಿತು. ಉರ್ದು ಭಾಷೆಯೇ ಸಂಸ್ಥಾನದ 'ದೇಶಿಭಾಷೆ'ಯಾಗಿ ಅಭಿವೃದ್ಧಿ ಹೊಂದಲು ತೊಡಗಿತು. ಹೀಗಾಗಿ ಈ ಪ್ರಾಂತ್ಯದ ಜನರು

ಕನ್ನಡದ ಬದಲಿಗೆ ಉರ್ದು ಕಲಿಯುವುದು ಅನಿವಾರ್ಯವಾಯ್ತು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ನಿಜಾಮ್ ಪ್ರಾಂತ್ಯದಲ್ಲಿ ವಚನಕಾರರ ಕಾಲದಿಂದಲೇ ಮೌಖಿಕ ಸಾಹಿತ್ಯ ಆರಂಭವಾಗಿ ಲಿಖಿತ ಸಾಹಿತ್ಯ ನಿಂತು ಹೋಗಿತ್ತು. ೧೩ನೇ ಶತಮಾನದಲ್ಲೂ ಮಹಾರಾಷ್ಟ್ರದಲ್ಲಿ ಲಿಖಿತ ಸಾಹಿತ್ಯ ಪರಂಪರೆ ಕುಸಿದಿತ್ತು. ವಚನ ಸಾಹಿತ್ಯ, ದಾಸ ಸಾಹಿತ್ಯ, ತತ್ವಪದ ಸಾಹಿತ್ಯ ಪರಂಪರೆಗಳೆಲ್ಲ ಮೌಖಿಕವಾಗಿದ್ದವು. ಹಂಪೆ ಪರಿಸರದಲ್ಲಿ ವಚನಗಳ ಸಂಪಾದನೆ, ಟೀಕು, ಪುರಾಣಗಳ ರಚನೆ ನಡೆಯಿತು. ಹರಿಹರ, ಚಾಮರಸ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ ಮುಂತಾದವರು ಹಂಪೆಯಿಂದ ದಕ್ಷಿಣ ಕರ್ನಾಟಕ ಪ್ರದೇಶದ ಕಡೆ ಇದ್ದವರು. ಬೀದರ್, ರಾಯಚೂರು, ಗುಲಬರ್ಗಾ ಜಿಲ್ಲೆಗಳಾದ್ಯಂತ ಕನ್ನಡ ಭಾಷೆಯನ್ನು ಲಿಖಿತದಲ್ಲಿ ಬಳಸುವುದು ಬಹಳ ಹಿಂದೆಯೇ ನಿಂತು ಹೋಗಿತ್ತು.

ಬಹಮನಿ, ಆದಿಲ್ ಶಾಹಿ, ಮರಾಠರು, ಮೊಗಲರು, ನಿಜಾಮರು ಆಳ್ವಿಕೆಯಲ್ಲಿ ಧಾರ್ಮಿಕವಾಗಿ ಅರಬ್ಬಿಕ್ ಭಾಷೆಯನ್ನು, ಫಾರಸಿಯನ್ನು, ಜನ ಭಾಷೆಯನ್ನಾಗಿ ದಖನಿ ಭಾಷೆಯನ್ನು ಬಳಸುತ್ತಿದ್ದರು. ದಖನಿ ಹುಟ್ಟಿದ್ದೇ ದಖ್ಖನ್ ಪ್ರಾಂತ್ಯದಲ್ಲಿ. ಫಾರಸಿ ಭಾಷೆಯನ್ನಾಡುವ ಜನರು, ಸ್ಥಳೀಯರು ಮರಾಠಿ, ಕನ್ನಡ, ತೆಲುಗು ಭಾಷೆಗಳೊಂದಿಗೆ ಬೆರೆತು ದಖನಿ ಭಾಷೆ ರೂಪುಗೊಂಡಿತು. ನಾನಾ ಜನ ಸಮುದಾಯಗಳು ನಿತ್ಯ ವ್ಯವಹಾರಕ್ಕಾಗಿ ರೂಪಿಸಿಕೊಂಡ ಈ ದಖನಿ ಭಾಷೆಯೇ ಇಲ್ಲಿ ಪ್ರಧಾನವಾಯಿತು. ಕನ್ನಡವನ್ನು ಲಿಖಿತ ಬರಹಕ್ಕೆ ಬಳಸುವುದು ನಿಂತು ಹೋಯಿತು. ಮಠಮಾನ್ಯಗಳಲ್ಲಿ ಕನ್ನಡ ತಕ್ಕಮಟ್ಟಿಗೆ ಉಳಿದಿತ್ತು. ವ್ಯವಹಾರದ ಭಾಷೆಯಾಗಿ ದಖನಿ ಇತ್ತು. ಅಕ್ಷರಕ್ಕಾಗಿ 'ಮೋಡಿಲಿಪಿ'ಯನ್ನು ಬಳಸುವ ಪರಂಪರೆ ಹುಟ್ಟಿಕೊಂಡಿತು. ಅದರ ಬಳಕೆ ಹೆಚ್ಚಾಗಿ ಕೊನೆಗೆ ಕನ್ನಡ ಭಾಷೆಯು ಆಡುನುಡಿಯಾಗಿ ಉಳಿಯಿತು. ೧೭ನೇ ಶತಮಾನದಿಂದ ೧೯ನೇ ಶತಮಾನ ಮುಗಿದು ೨೦ನೇ ಶತಮಾನ ಆದಿಯಲ್ಲಿಯೂ ನೂರಾರು ತತ್ವಪದಕಾರರು, ದಾಸರು ಸಾಹಿತ್ಯವನ್ನು ಮೌಖಿಕವಾಗಿ ಕಟ್ಟಿ ಹಾಡುತ್ತಲೇ ಇದ್ದರು.

ಮುಂದೆ ಈ ದಖನಿಯೇ ಉರ್ದು ಭಾಷೆಯಾಗಿ ಪರಿವರ್ತನೆ ಕಂಡಿತು. ನಿಜಾಮರು ಉಸ್ಮಾನಿಯಾ ವಿಶ್ವವಿದ್ಯಾಲಯ ಸ್ಥಾಪಿಸುವ ಹೊತ್ತಿಗೆ ಶಿಕ್ಷಣ ಮಾಧ್ಯಮವಾಗಿ ಉರ್ದು ಭಾಷೆ ಬೆಳೆದಿತ್ತು. ಪದವಿ, ಕಾನೂನು, ವೈದ್ಯಕೀಯ, ಇಂಜಿನಿಯರಿಂಗ್ ಮುಂತಾದ ಪದವಿಗಳನ್ನು ಉರ್ದು ಮಾಧ್ಯಮದಲ್ಲಿ ಕಲಿಯಲು ಅಭಿವೃದ್ಧಿ ಪಡಿಸಿದರು. ನಿಜಾಮರು ಆಧುನಿಕ ಶಿಕ್ಷಣವನ್ನು ಜಾರಿಗೆ ತಂದಿದ್ದರೂ, ಅದನ್ನು ಇಂಗ್ಲೀಶ್ ಭಾಷೆಯಲ್ಲಿ ಬೋಧಿಸುವುದಕ್ಕಿಂತ ಉರ್ದುವಿನಲ್ಲೇ ಬೋಧಿಸುವತ್ತ ಹೆಚ್ಚಿನ ಒತ್ತುಕೊಟ್ಟರು. ಇದರಿಂದಾಗಿ ರಾಯಚೂರು, ಕೊಪ್ಪಳ, ಗುಲಬರ್ಗಾ, ಬೀದರ್ ಜಿಲ್ಲಾ ಪ್ರದೇಶದ ಕನ್ನಡ ಭಾಷಿಕರು ಇಂಗ್ಲೀಶ್ ಭಾಷೆ, ಸಾಹಿತ್ಯದಿಂದ ವಂಚಿತರಾದರು. ಕೇವಲ ಪದವಿ ಪೂರೈಸಿಕೊಳ್ಳುವ ಮಟ್ಟಿಗೆ ಮಾತ್ರ ಉರ್ದು ಕಲಿಯುತ್ತಿದ್ದರು. ಇಂಗ್ಲೀಶ್ ಕಲಿಯಲು ಅವಕಾಶಗಳು ಕಡಿಮೆಯಿದ್ದರಿಂದ ಪಶ್ಚಿಮದ ಸಾಹಿತ್ಯ ಜ್ಞಾನ ಅರಿಯಲು, ಗ್ರಹಿಸಲು ಈ ಭಾಗದ ಸಾಹಿತ್ಯಾಸಕ್ತರಿಗೆ ಸಾಧ್ಯವಾಗಲಿಲ್ಲ. ಈ ಬೆಳವಣಿಗೆಯಿಂದ ಆಧುನಿಕ ಕನ್ನಡ

ಸಾಹಿತ್ಯ ರಚನೆಗೆ ಅಡ್ಡಿಯಾಯಿತು. ಪ್ರತಿಭಾವಂತ ಕವಿಗಳು, ಸಾಹಿತಿಗಳು ಈ ಭಾಗದಿಂದ ಹುಟ್ಟಿ ಬರಲಿಲ್ಲ. ಕನ್ನಡ ಸಾಹಿತ್ಯವನ್ನು ಮನೆಯಲ್ಲಿ ಓದಿಕೊಂಡ ಪರಿಣಾಮವಾಗಿ ಕೆಲವರು ಕವಿಗಳಾಗಿ ಹೊರ ಬಂದರು. ಸುಮಾರು ೭೦೦ವರ್ಷಗಳ ಕಾಲ ಅಂದರೆ ಬಹಮನಿಗಳ ಕಾಲದಿಂದ ನಿಜಾಮ್ ಆಳ್ವಿಕೆವರೆಗೆ ಈ ಪ್ರಾಂತ್ಯದಲ್ಲಿ ಕನ್ನಡ ಭಾಷೆ ಹಿನ್ನೆಲೆಗೆ ಸರಿದಿತ್ತು. ವಚನ ಸಾಹಿತ್ಯ ಜನರಿಗೆ ತಲುಪಿರಲಿಲ್ಲ. ವೈದಿಕರಿಗೆ ದಾಸರ ಸಾಹಿತ್ಯ, ವೈದಿಕೇತರರಿಗೆ ತತ್ವಪದ ಸಾಹಿತ್ಯ ಮಾತ್ರ ಈ ಕಾಲದಲ್ಲಿ ಪರಿಚಯವಿತ್ತು. ವಸಾಹತುಶಾಹಿಯ ಪ್ರಭಾವವನ್ನು ನಿಜಾಮ್ ಆಡಳಿತ ಇಲ್ಲಿ ಬರಗೊಡಲಿಲ್ಲ. ಹೀಗಾಗಿ ಆಧುನಿಕ ಕನ್ನಡ ಸಾಹಿತ್ಯ ಈ ಪ್ರಾಂತ್ಯದಲ್ಲಿ ಪ್ರಗತಿ ಹೊಂದಲಿಲ್ಲ.

ನಿಜಾಮ್ ಪ್ರಾಂತ್ಯದಲ್ಲಿ ಕನ್ನಡದಲ್ಲಿ ಆಧುನಿಕ ಶಿಕ್ಷಣ ದೊರೆಯಲಾರಂಭಿಸಿದ್ದುದು ೧೯೫೬ರ ನಂತರವೇ. ಇದಕ್ಕೂ ಪೂರ್ವದಲ್ಲಿ ಇಡೀ ಸಂಸ್ಥಾನದಲ್ಲಿ ಕನ್ನಡ ಶಾಲೆಗಳು ಎರಡೋ ಮೂರೋ ಇದ್ದವು. ಕುಕನೂರಿನಲ್ಲಿ 'ವಿದ್ಯಾನಂದ ಗುರುಕುಲ', ಗುಲಬರ್ಗಾದಲ್ಲಿ 'ನೂತನ ವಿದ್ಯಾಲಯ', ರಾಯಚೂರಿನಲ್ಲಿ 'ಹಮದರ್ದ ಶಾಲೆ' ಇವುಗಳಲ್ಲಿ ಆರಂಭದಲ್ಲಿ ಉರ್ದು ಕಲಿಸಲಾಗುತ್ತಿತ್ತು. ಜನರೇ ಉರ್ದು ಕಲಿತರೆ ಮಾನ್ಯ ಸಿಗುತ್ತದೆಂದು, ನಿಜಾಮ್ ಆಡಳಿತದಲ್ಲಿ ಕೆಲಸ ಸಿಗುತ್ತದೆಂದು ನಂಬಿದ್ದರು. ಗುಲಬರ್ಗಾದ ನೂತನ ಶಾಲೆಯಲ್ಲಿ ಮರಾಠಿಯನ್ನು ಕಲಿಸಲಾಗುತ್ತಿತು. ಇವು ಖಾಸಗಿ ಶಾಲೆಗಳು. ಜನರ ದೇಣಿಗೆಯಿಂದ ನಡೆಯುತ್ತಿದ್ದವು. ನಿಜಾಮ್ ಪ್ರಾಂತ್ಯದಲ್ಲಿ ಬೆರಳೆಣಿಕೆಯ ಶಾಲೆಗಳು ಇದ್ದಾಗ ಧಾರವಾಡ, ಬೆಳಗಾವಿ, ವಿಜಾಪುರ, ದಕ್ಷಿಣ ಕನ್ನಡ ಜಿಲ್ಲೆಗಳಾದ್ಯಂತ ನೂರಾರು ಕನ್ನಡ ಶಾಲೆಗಳಿದ್ದವು. ಕಾಲೇಜುಗಳಿದ್ದವು. ಹೆಚ್ಚಿನ ಶಿಕ್ಷಣ ಪಡೆಯಲು ಹೈದರಾಬಾದನಲ್ಲಿದ್ದ ಉಸ್ಮಾನಿಯಾ ವಿಶ್ವವಿದ್ಯಾಲಯಕ್ಕೆ ಹೋಗಬೇಕಾಗಿತ್ತು. ಅದು ಈ ಭಾಗದ ಬಡ ವಿದ್ಯಾರ್ಥಿಗಳಿಗೆ ಅಸಾಧ್ಯವಾಗಿತ್ತು. ಇದರಿಂದ ಈ ಭಾಗವು ಶೈಕ್ಷಣಿಕವಾಗಿ ಅಭಿವೃದ್ಧಿಯಾಗಲಿಲ್ಲ.

ಕರ್ನಾಟಕದ ಉತ್ತರ ಭಾಗದ ಬೆಳಗಾವಿ, ಧಾರವಾಡ, ಉತ್ತರ ಕನ್ನಡ ಜಿಲ್ಲೆಗಳು ಸ್ವಾತಂತ್ರ್ಯಪೂರ್ವದಲ್ಲಿ ಮುಂಬೈ ಪ್ರೆಸಿಡೆನ್ಸಿಗೆ ಸೇರಿ ಬ್ರಿಟೀಶರ ನೇರ ಆಡಳಿತಕ್ಕೆ ಒಳಗಾಗಿ ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಬೆಳೆದವು. ಈ ಭಾಗದಲ್ಲಿ ಮರಾಠಿ ಸಂಸ್ಕೃತಿಯ ಪ್ರಭಾವವಿದ್ದರೂ ಸ್ವಾತಂತ್ರ್ಯ ನಂತರ ಕನ್ನಡ ಭಾಷೆ, ಸಾಹಿತ್ಯ, ಸಂಗೀತ, ಸಂಸ್ಕೃತಿಗಳಿಂದ ಶ್ರೀಮಂತವಾಯ್ತು. ಇಲ್ಲಿ ಲಿಂಗಾಯತರ ಪ್ರಭಾವ ಹೆಚ್ಚಾಗಿತ್ತು. ಲಿಂಗಾಯತ ಮಠಗಳು, ಅವುಗಳ ಶಿಕ್ಷಣ ಸಂಸ್ಥೆಗಳು ಸಾಕ್ಷರತೆಯ ಪ್ರಮಾಣವನ್ನು ಹೆಚ್ಚಿಸಿದವು. ಹಿಂದೂಸ್ತಾನಿ ಸಂಗೀತಗಾರರಾದ ಮಲ್ಲಿಕಾರ್ಜುನ ಮನ್ಸೂರ್, ಗಂಗೂಬಾಯಿ ಹಾನಗಲ್, ಭೀಮಸೇನ ಜೋಶಿ ಮುಂತಾದವರು ಪ್ರಸಿದ್ಧರಾದರೆ, ಮಧುರ ಚೆನ್ನ, ಬೇಂದ್ರೆ, ಡಿ.ಎಸ್. ಕರ್ಕಿ, ವಿನಾಯಕ, ಬಸವರಾಜ ಕಟ್ಟಿಮನಿ, ಆನಂದ ಕಂದ ಮುಂತಾದ ಸಾಹಿತಿಗಳು ಪ್ರಸಿದ್ಧರಾಗಿದ್ದಾರೆ.

ಉತ್ತರ ಕರ್ನಾಟಕದ ಒಳಗೆ ಇರುವ ಹೈದರಾಬಾದ್ ಕರ್ನಾಟಕದ ಬೀದರ್, ಗುಲಬರ್ಗಾ, ರಾಯಚೂರು, ಕೊಪ್ಪಳ ಮತ್ತು ಈಗಿನ ಯಾದಗಿರಿ ಈ ಪ್ರದೇಶಗಳ ಸಾಂಸ್ಕೃತಿಕ ಚರಿತ್ರೆ

ಭಿನ್ನವಾಗಿದೆ. ಭಾಷಿಕವಾಗಿ ಈಗಲೂ ಉತ್ತರ ಭಾಗದ ಎಲ್ಲ ಜಿಲ್ಲೆಗಳು ಭಿನ್ನತೆಯಿಂದ ಕೂಡಿವೆ. ನಿಜವಾದ ಭಾಷಾ ವೈವಿಧ್ಯ ಈ ಜಿಲ್ಲೆಗಳಲ್ಲಿದೆ. ಆಡು ನುಡಿಯ ಸೊಗಡು ವಿಭಿನ್ನವಾಗಿದ್ದು ತನ್ನ ಚಹರೆಗಳನ್ನು ಇನ್ನೂ ಜೀವಂತವಾಗಿ ಉಳಿಸಿಕೊಂಡಿವೆ. ಪಂಪನ ಕಾಲದ, ರನ್ನನ ಕಾಲದ 'ತಿರುಳ್ಗನ್ನಡ ನಾಡು' ಈ ಭಾಗದಲ್ಲಿದೆ. ಈ ಪ್ರದೇಶಕ್ಕೆ ತನ್ನದೇ ಆದ ಪರಂಪರೆ, ಸಂಸ್ಕೃತಿಯಿದೆ. ಈ ಪರಂಪರೆ, ಸಂಸ್ಕೃತಿ ಎಂದು ಹೇಳುವುದೆಲ್ಲ ಶ್ರೇಷ್ಠವಾದದ್ದು ಅಂತಲ್ಲ. ಕಾಲದ ಸ್ಥಿತ್ಯಂತರಗಳನ್ನು ಅನುಭವಿಸುತ್ತ, ಹೊಸದನ್ನು ದಕ್ಕಿಸಿಕೊಳ್ಳುತ್ತ, ಹಳೆಯದನ್ನೂ ಉಳಿಸಿಕೊಳ್ಳುತ್ತ, ಸಂಕರವಾಗಿ ನಿಂತ ಪರಂಪರೆ, ಸಂಸ್ಕೃತಿ ಈ ಪ್ರದೇಶದಲ್ಲಿದೆ. ಹಾಗೆ ನೋಡಿದರೆ ಸಾಹಿತ್ಯ, ಸಂಗೀತ, ಕಲೆ, ಜಾನಪದ ಎಲ್ಲವೂ ಈ ಪ್ರದೇಶದಲ್ಲಿ ಹುಟ್ಟಿ ಬೆಳೆದದ್ದೇ ಹೆಚ್ಚು. ಜೈನ ಸಾಹಿತ್ಯ, ವಚನ ಸಾಹಿತ್ಯ, ದಾಸ ಸಾಹಿತ್ಯ, ವಚನ ಸಂಕಲನ–ಸಂಗೋಪನ ಸಾಹಿತ್ಯ, ಪುರಾಣ ಸಾಹಿತ್ಯ, ತತ್ವಪದ ಸಾಹಿತ್ಯ, ಮೊಹರಂ ಸಾಹಿತ್ಯ, ಜನಪದದ ದೊಡ್ಡಾಟ, ಸಣ್ಣಾಟ, ಗೊಂದಲಿಗರ ಕಥೆಗಳು, ಲಾವಣಿ ಸಾಹಿತ್ಯ ಮುಂತಾದವು ಈ ಪ್ರದೇಶದ್ದೇ ಆಗಿದೆ. ಆಧುನಿಕ ಪೂರ್ವದಲ್ಲಿ ಇದೆಲ್ಲವನ್ನೂ ಕಾಣಬಹುದು.

ರಾಜಕೀಯ ಸ್ಥಿತ್ಯಂತರಗಳಿಂದ ಈ ಪ್ರದೇಶದಲ್ಲಿ 'ಅನ್ಯ ಭಾಷೆ', 'ಅನ್ಯ ಸಂಸ್ಕೃತಿ'ಯ ಪ್ರಭುತ್ವಗಳು ನೆಲೆಗೊಂಡ ಪರಿಣಾಮದಿಂದ ಭಾಷೆ, ಧರ್ಮ ಸಂಕರಗೊಂಡವು. ವಿಭಿನ್ನ ಸಂಸ್ಕೃತಿ ಜನಸಮುದಾಯಗಳಲ್ಲಿ ನೆಲೆ ನಿಂತಿತು. ಜನಸಮುದಾಯಗಳ ಮೇಲೆ ರಾಜಕೀಯ ಪ್ರಭುತ್ವಕ್ಕಿಂತ, ಧಾರ್ಮಿಕ ಪ್ರಭುತ್ವದ ಪ್ರಭಾವವೇ ಹೆಚ್ಚಾಗಿರುವುದು ಕಾಣುತ್ತದೆ. ರಾಜನನ್ನು ಪ್ರಶ್ನಾತೀತನನ್ನಾಗಿ ಕಾಣುವ ಗುಣವನ್ನು ವಚನಕಾರರು ಕಳೆದು ಹಾಕಿದ್ದರು. ಬದಲಿಗೆ ಸಾಧಕರನ್ನು ಗೌರವಿಸುವ ಗುಣವು ಜನಸಮುದಾಯಗಳಲ್ಲಿ ಬೆಳೆದಿತ್ತು. ರಾಜ ಸತ್ತರೆ ಆತನ ಸ್ಮಾರಕವನ್ನು ನಿರ್ಮಿಸಲು ಯಾರೂ ಮುಂದಾಗುತ್ತಿರಲಿಲ್ಲ. ಅದೇ ಶರಣರು, ದಾಸರು, ಅನುಭಾವಿಗಳು, ಸಿದ್ಧರು, ಆರೂಢರು, ಸೂಫಿಗಳು, ಫಕೀರರು, ದರ್ವೇಶಿಗಳು ಸತ್ತರೆ ಅವರ ಸ್ಮಾರಕಗಳನ್ನು ಜನರೇ ನಿರ್ಮಿಸುವಂತಾಯಿತು. ಈ ಸಂಸ್ಕೃತಿ ಈ ಪ್ರದೇಶದ ಜನಸಮುದಾಯಗಳಲ್ಲಿ ಎದ್ದು ಕಾಣುತ್ತದೆ. ಇದಕ್ಕೆ ಅನೇಕ ಕಾರಣಗಳಿರಬಹುದು. ಮುಖ್ಯವಾಗಿ ಪ್ರಧಾನ ಧರ್ಮಗಳು ಸಮಾಜದ ಎಲ್ಲ ಸಮುದಾಯಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದಿರುವುದೇ ಆಗಿದೆ. ವೈದಿಕ, ಜೈನ, ಶೈವ ಧರ್ಮಗಳು ಸಂಕುಚಿತವಾಗಿದ್ದವು.

೧೨ನೇ ಶತಮಾನದ ಶರಣರ ಸಾಂಸ್ಕೃತಿಕ ಚಳವಳಿ ಅನೇಕ ಬದಲಾವಣೆಗಳನ್ನು ತಂದರೂ, ಅದು ನಂತರದಲ್ಲಿ ಸಾಂಸ್ಥಿಕವಾಗಿ ಬಲಗೊಂಡು 'ಲಿಂಗಾಯತ'ವು 'ವೀರಶೈವ' ಧರ್ಮವಾಗಿ ಸಂಕುಚಿತಗೊಂಡಿತು. ಅಸಂಖ್ಯಾತ ಕೆಳ ಸಮುದಾಯಗಳು 'ದೇವರು–ಧರ್ಮ'ದ ಪರಿಕಲ್ಪನೆಯನ್ನು ಭಿನ್ನವಾಗಿ ಗ್ರಹಿಸಿದವು. ಈ ಜನಸಮುದಾಯಗಳಿಗೆ ಅವುಗಳದ್ದೇ ಆದ ದೇವರು, ಧರ್ಮವನ್ನು ನಿರ್ದಿಷ್ಟವಾಗಿ ರೂಪಿಸಿಕೊಳ್ಳದೆ ತಬ್ಬಲಿಗಳಾದವು. ಆದರೂ ಈ ಜನ ಸಮುದಾಯಗಳು ತಬ್ಬಲಿಗಳಾಗದೆ ತಮ್ಮ ತಮ್ಮ ನೆಲೆಯಲ್ಲಿ ಆಧ್ಯಾತ್ಮಿಕವಾದ ಗುಂಪು, ಪಂಥಗಳಲ್ಲಿ

ಒಗ್ಗೂಡಿಕೊಂಡವು. ಸ್ಥಳೀಯ ಸಾಧಕರೇ ಪೂಜ್ಯರಾಗಿ ಪೂಜಿತರಾದರು. ಅನುಭಾವಿಗಳು, ಆರೂಢರು, ಸೂಫಿಗಳು, ಫಕೀರರು ತಮ್ಮ ತಮ್ಮ ಅನುಭಾವ ಶಕ್ತಿಯಿಂದ ಜನಸಮುದಾಯಗಳ ಮೇಲೆ ಅಪಾರ ಪ್ರಮಾಣದಲ್ಲಿ ಪ್ರಭಾವ ಬೀರಿದರು. ಈ ಅನುಭಾವಿಗಳು ತೀರಿಕೊಂಡರೆ ಅವರ ಗದ್ದಿಗೆಗಳೇ ಆರಾಧನ ಕೇಂದ್ರವಾಗುತ್ತಿದ್ದವು. ಈ ಭಾಗ ಬಹುಪಾಲು ದರಗಾಗಳೂ ಇದನ್ನೇ ಸೂಚಿಸುತ್ತವೆ. ಜನರು ಹೀಗೆ ಧಾರ್ಮಿಕವಾಗಿ ಒಗ್ಗೂಡುವಿಕೆಯಿಂದ ಈ ಪ್ರದೇಶದಲ್ಲಿ ಸಮಾಧಿ ಸ್ಥಾನಗಳು ಆರಾಧನಾ ಕೇಂದ್ರಗಳಾಗಿ ಬೆಳೆದವು. ಅಲ್ಲಿ ಭಜನೆ, ಆರಾಧನೆ ನಡೆಯಿತು. ಆಗ ತತ್ವಪದಗಳು ಭಜನಾ ಮೇಳಗಳ ಮೂಲಕ ಸಾಮೂಹಿಕವಾಗಿ ಹೊರಹೊಮ್ಮಿದವು. ಮೊಹರಂ ಹಬ್ಬದಲ್ಲಿ ಎರಡೂ ಸಮುದಾಯಗಳು ಬೆರೆಯುವಂತಾಯಿತು. ಅವು ಮೊಹರಂ ಹಬ್ಬದಲ್ಲಿ ಹಾಡುತ್ತ ಕುಣಿದು ಸಂತೋಷ ಪಡುತ್ತ ಬಂದವು. ಈ ಪರಂಪರೆ ಇಂದಿಗೂ ಕಾಣಬಹುದು. ಹಿಂದು-ಮುಸ್ಲಿಂ ಸೌಹಾರ್ದತೆ ಈ ಪ್ರದೇಶದಲ್ಲಿ ತಾನೇ ತಾನಾಗಿ ಜೀವಂತವಾಗಿದೆ. ಎಲ್ಲ ಧರ್ಮಗಳು, ಮತಗಳು, ಭಾಷಿಕರು ಒಂದೇ ಎಂಬ ಮನೋಭಾವ ಬಂದಾಗ ಮಾತ್ರ ಸೌಹಾರ್ದತೆ ಬೆಳೆಯಲು ಸಾಧ್ಯವಾಗುತ್ತದೆ.

ಪ್ರಧಾನ ಧರ್ಮಗಳು ಈ ಪ್ರದೇಶದಲ್ಲಿ ಅವುಗಳ ಪಾಡಿಗೆ ಅವು ಸಂಕುಚಿತವಾಗಿ ದೇವಸ್ಥಾನ ಮಠಮಾನ್ಯಗಳ ಜೊತೆಗೆ ಇದ್ದವು. ಅಪಾರ ಸಂಖ್ಯೆಯ ಕೆಳವರ್ಗಗಳು, ಬಡವರು, ರಾಜಪ್ರಭುತ್ವವನ್ನು, ಧರ್ಮಪ್ರಭುತ್ವವನ್ನು ಹೆಚ್ಚು ನಂಬಿಕೊಳ್ಳಲಿಲ್ಲ. ಕಷ್ಟ-ಸುಖಗಳನ್ನು ಹಂಚಿಕೊಳ್ಳುವುದು ಏನಿದ್ದರೂ ಆಧ್ಯಾತ್ಮ ಸಾಧಕರ ಸಮಾಧಿ, ದರಗಾಗಳಿಗೆ ಹೋಗಿ ಬೇಡಿಕೊಂಡು ಬರುವುದು ನಡೆಯುತ್ತಿತ್ತು. ಹೀಗಾಗಿ ತಮ್ಮ ಹಕ್ಕುಗಳು ಯಾವುವು? ಅವುಗಳನ್ನು ಯಾರಿಂದ ಪಡೆದುಕೊಳ್ಳಬೇಕು ಎಂಬ ರಾಜಕೀಯ ಪ್ರಜ್ಞೆ ಈ ಪ್ರದೇಶದ ಜನಸಮುದಾಯಗಳಲ್ಲಿ ಬೆಳೆಯಲಿಲ್ಲ. ಈ ಹೊತ್ತಿಗೂ ಈ ಭಾಗದ ಜಿಲ್ಲೆಗಳು-ತಾಲೂಕುಗಳು ಅನೇಕ ವಲಯಗಳಲ್ಲಿ ಹಿಂದುಳಿದಿವೆ. ತಾರತಮ್ಯ ನೀತಿಗೆ ಒಳಗಾಗುತ್ತಿವೆ ಎಂಬುದನ್ನು ಅಂಕಿ ಅಂಶಗಳು ಒತ್ತಿ ಹೇಳುತ್ತವೆ. ಆದರೂ ಸರಕಾರದ ಮೇಲೆ ಒತ್ತಡ ತರುವ ಹೋರಾಟಗಳು ನಡೆಯುತ್ತಿಲ್ಲ.

ಈ ಭಾಗದ ರಾಜಕಾರಣಿಗಳಿಗೆ ಅಸ್ತಿತ್ವವೇ ಇಲ್ಲ ಅನಿಸುತ್ತಿದೆ. ಹೋರಾಟದ ಬದಲು 'ಪ್ರತ್ಯೇಕ ರಾಜ್ಯ'ದ ಬೇಡಿಕೆ ಇಟ್ಟು ಹೋರಾಡಲು ತೊಡಗಿಕೊಂಡು ಹಾಸ್ಯಾಸ್ಪದವಾಗುತ್ತಿದ್ದಾರೆ. ರಾಜಕೀಯವಾಗಿ ಸೋತ ಇಲ್ಲಿನ ಆಳುವವರು ಅಪಾರ ಪ್ರಮಾಣದ ಭೂಮಿ ಹೊಂದಿದ್ದಾರೆ. ಸಾಮಾನ್ಯವಾಗಿ ಮೇಲ್ವರ್ಗದವರಾದ ಇವರ ಕೈಯಲ್ಲಿಯೇ ಅಪಾರ ಆಸ್ತಿ ಇತ್ತು. ಭೂ ಸುಧಾರಣಾ ಕಾಯ್ದೆ ಪರಿಣಾಮಕಾರಿಯಾಗಿ ಈ ಭಾಗದಲ್ಲಿ ಆಗಲಿಲ್ಲ. ೧೦೦ ರಿಂದ ೫೦೦ ಎಕರೆ ಭೂಮಿ ಇರುವವರೇ ಸಣ್ಣ ರೈತರಾಗಿದ್ದರು. ೧೦೦೦-೨೦೦೦ ಎಕರೆ ಭೂಮಿಯನ್ನು ಹೊಂದಿದ ಭೂಮಾಲೀಕರಲ್ಲಿ ಬ್ರಾಹ್ಮಣ, ಲಿಂಗಾಯತರೂ ಇದ್ದರು. ಕೆಳವರ್ಗಗಳಿಗೆ ಭೂಮಿ ಇರಲಿಲ್ಲ. ಹೀಗಾಗಿ ಅತಿ ಶ್ರೀಮಂತಿಕೆ ಮತ್ತು ಅತಿ ಬಡತನ ಈ ಪ್ರದೇಶದಲ್ಲಿ ಕಾಣುವ ಮುಖ್ಯ ಲಕ್ಷಣವಾಗಿದೆ. ಬಡತನ ಇರುವಲ್ಲಿ ಬರೀ ಗೋಳಾಟ, ನರಳಾಟ ಮಾತ್ರ ಇರುತ್ತದೆಂದು

ತಿಳಿಯಬೇಕಾಗಿಲ್ಲ. ನಿತ್ಯದ ಹೊಟ್ಟೆ ಪಾಡನ್ನು ದುಡಿದು ನಿಭಾಯಿಸಿಕೊಳ್ಳುತ್ತಾರೆ. ೧೯೮೦ರ ವರೆಗೆ ಈ ದುಡಿವ ವರ್ಗ ವಲಸೆ ಹೋಗುತ್ತಿರಲಿಲ್ಲ. ಈ ಪ್ರಾಂತ್ಯದಲ್ಲಿ ಭೂಮಾಲೀಕರ ಕೆಳಗೆ ಬಡವರು ದುಡಿದು ಜೀವನ ಮಾಡುತ್ತಿದ್ದರು. ೧೯೮೦ರ ನಂತರ ಜೀವನ ನಿರ್ವಹಣೆ ಕಷ್ಟವಾಯಿತು. ಆಗ ಕೊಪ್ಪಳ, ಬಳ್ಳಾರಿ, ಗುಲಬರ್ಗಾ, ರಾಯಚೂರು, ಬೀದರ್ ಜಿಲ್ಲೆಗಳ ಜನರು ಮುಂಬಯಿ, ಪುಣೆ, ಕೊಲ್ಹಾಪುರ, ಸೊಲ್ಲಾಪುರ, ಹೈದರಾಬಾದ, ಬೆಂಗಳೂರು, ಮಂಗಳೂರು, ಕೊಡಗು ನಗರಗಳಿಗೆ ವಲಸೆ ಹೋಗುವುದಕ್ಕೆ ಆರಂಭಿಸಿದರು. ಈಗ ಕೆಲವು ತಾಲೂಕುಗಳ ಹಳ್ಳಿಗಳಲ್ಲಿ ಜನರೇ ಇಲ್ಲದ ಸ್ಥಿತಿ ಒದಗಿದೆ. ವಲಸೆ ಹೋಗುವ ಕುಟುಂಬಗಳ ಮಕ್ಕಳು ಶಾಲೆಯಿಂದ ಹೊರಗುಳಿಯುತ್ತವೆ. ಅದರಿಂದಾಗಿ ಅನಕ್ಷರತೆ ಇಲ್ಲಿ ಹೆಚ್ಚಾಗಿದೆ

ಬಡತನ ಇರುವಲ್ಲಿ ಸಂಸ್ಕೃತಿ ಶ್ರೀಮಂತವಾಗಿರುತ್ತದೆ ಎಂಬುದಕ್ಕೆ ಉತ್ತರ ಕರ್ನಾಟಕ ಸಾಕ್ಷಿಯಾಗಿದೆ ಅನ್ನಬಹುದು. ಎಷ್ಟು ಬಗೆಯ ಕಲೆಗಳು ಈ ಪ್ರದೇಶದಲ್ಲಿದ್ದವು ಎಂಬುದು ಸಂಶೋಧನೆಯಿಂದ ಅರಿಯಬೇಕು. ಗೊಂದಲಿಗರ ಆಟ, ಹಗಲುವೇಷಗಾರರ ಆಟ, ಜಾತಿಗೇರರ ಆಟ, ಬುಡುಬುಡಿಕೆಯವರ ಆಟ, ತತ್ವಪದ ಹಾಡುವವರು, ದಾಸರ ಹಾಡುಗಳು ಹೀಗೆ ನೂರಾರು ಬಗೆಯ ಹಾಡುಗಾರರಾದ ಇವರೆಲ್ಲರೂ ಹಳ್ಳಿಹಳ್ಳಿಗಳಲ್ಲಿ ನಿತ್ಯವೂ ಪ್ರದರ್ಶನಗಳನ್ನು ನೀಡುತ್ತಲೇ ಇರುತ್ತಿದ್ದರು. ನಿತ್ಯ ಬೆಳಗಾದರೆ ಸಾಕು, ಹೊತ್ತು ಮುಳುಗುವವರೆಗೆ ಈ ಎಲ್ಲ ಕಲಾವಿದರು ಮನೆಮನೆ ಬಾಗಿಲಿಗೆ ಬಂದು ತಮ್ಮ ಕಲೆ ಪ್ರದರ್ಶಿಸಿ ಹೋಗುವವರನ್ನು ಕಾಣ ಬಹುದಾಗಿತ್ತು. ತಂಬೂರಿ ನಾದವು ಮೂಡಲು ಮೂಡುವಾಗ ಕೇಳುತ್ತಿದ್ದುದ್ದು, ಸೂರ್ಯ ಮುಳುಗಿದಾಗ ನಿಲ್ಲುತ್ತಿತ್ತು. ಬ್ರಿಟೀಶರು ಬಂದು ಇವರನ್ನು ಭಿಕ್ಷುಕರು ಎಂದು ಪೀಡಿಸಿದ್ದುದು ನಮಗೆ ಗೊತ್ತಿದೆ. ಸ್ವಾತಂತ್ರ್ಯಾ ನಂತರ ಕಾಲು ಶತಮಾನದವರೆಗೆ ಈ ಕಲಾವಿದರು ಚಟುವಟಿಕೆಯಿಂದ ಕ್ರಿಯಾಶೀಲರಾಗಿದ್ದರು. ನಗರಗಳು, ಆಧುನಿಕತೆ ಬೆಳೆಯಲಾರಂಭಿಸಿ ಇವರು ಮೂಲೆಗುಂಪಾಗುತ್ತಿದ್ದಾರೆ. ಹೊಟ್ಟೆ ಪಾಡಿಗಾಗಿ ಈ ಕಲಾವಿದರು ಪ್ಲಾಸ್ಟಿಕ್ ವಸ್ತುಗಳನ್ನು ಮಾರುತ್ತಿದ್ದಾರೆ. ಕಲೆ ಮರೆತು ತಮಗೆ ಅನುಕೂಲವಾದ ಪುಡಿ ವ್ಯಾಪಾರಗಳಲ್ಲಿ ತೊಡಗಿದ್ದಾರೆ.

ಸ್ವಾತಂತ್ರ್ಯಪೂರ್ವದಲ್ಲಿ ಭಾರತವು ಬ್ರಿಟೀಶರ ವಶದಲ್ಲಿತ್ತು. ಈ ಮಾತು ನಿಜವಾದರೂ ಭಾರತದ ಅನೇಕ ಪ್ರಾಂತ್ಯಗಳಿಗೆ ತಮ್ಮದೇ ಆದ ಸ್ವತಂತ್ರವಾದ ಪ್ರಭುತ್ವವೂ ಇತ್ತು. ಕರ್ನಾಟಕಕ್ಕೆ ಸಂಬಂಧಿಸಿ ಹೇಳುವುದಾದರೆ 'ಹೈದರಾಬಾದ್ ಕರ್ನಾಟಕ' ಪ್ರಾಂತ್ಯ ಸ್ವತಂತ್ರವಾಗಿದ್ದು ನಿಜಾಮ್ ಪ್ರಭುತ್ವವನ್ನು ಹೊಂದಿತ್ತು. ನಿಜಾಮ್ ಸರಕಾರ ಬ್ರಿಟೀಶರ ಸಹಮತದೊಂದಿಗೆ ಇದ್ದರೂ, ಅನೇಕ ವಿಷಯಗಳಲ್ಲಿ ಸ್ವತಂತ್ರ ಅಧಿಕಾರವನ್ನು ಹೊಂದಿತ್ತು. ಬ್ರಿಟೀಶರು ಭಾರತಕ್ಕೆ ಆಗಮಿಸಿ ತಮ್ಮ ಪ್ರಭುತ್ವವನ್ನು ಸ್ಥಾಪಿಸುವುದರೊಂದಿಗೆ ಆಧುನಿಕತೆಯನ್ನು ಭಾರತದಲ್ಲಿ ಮೂಡಿಸಿದರು. ಪಶ್ಚಿಮದಿಂದ ಅನೇಕ ಬಗೆಯ ಹೊಸ ಜ್ಞಾನವು ಹರಿದು ಬರತೊಡಗಿತು. ಈ ಹೊಸ ಬಗೆಯ ಜ್ಞಾನದಿಂದಲೇ ಕರ್ನಾಟಕದಲ್ಲಿ ಮಂಗಳೂರು, ಮೈಸೂರು, ಧಾರವಾಡ ಮುಂತಾದ ಪ್ರಾದೇಶಿಕ ಹಿನ್ನೆಲೆಯ ಪ್ರದೇಶಗಳು ಸಾಂಸ್ಕೃತಿಕ ಕೇಂದ್ರಗಳು, ಪ್ರತಿಭಾವಂತ ವ್ಯಕ್ತಿಗಳು ಹೊರಹೊಮ್ಮಲು

ಸಾಧ್ಯವಾಗಿದೆ. ಇದರಿಂದ ಈ ಪ್ರದೇಶಗಳು ತಮ್ಮವೇ ಆದ ಪ್ರತ್ಯೇಕ ಸಾಹಿತ್ಯ, ಸಂಸ್ಕೃತಿಯ ಪರಂಪರೆಯನ್ನು ಕಟ್ಟಿಕೊಂಡಿವೆ. ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅದರ ಪ್ರಾರಂಭಿಕ ಹಂತದಿಂದ ಗಮನಿಸಿದರೆ ಪ್ರಾದೇಶಿಕವಾಗಿ ಯಾವ ಪ್ರದೇಶದಿಂದ ಯಾವ ಬಗೆಯಲ್ಲಿ ಆಧುನಿಕ ಸಾಹಿತ್ಯ ಚಿಗುರತೊಡಗಿತು ಎಂಬುದು ಕುತೂಹಲದ ಸಂಗತಿಯಾಗಿದೆ. ಆದರೆ 'ಹೈದರಾಬಾದ್ ಕರ್ನಾಟಕ' ಪ್ರದೇಶವು ಒಂದು ಸಾಂಸ್ಕೃತಿಕ ಕೇಂದ್ರವಾಗಿ ಬೆಳೆಯಲು ಸಾಧ್ಯವಾಗಲಿಲ್ಲ. ಆದರೂ ಸ್ವಾತಂತ್ರ್ಯಪೂರ್ವದಲ್ಲಿ ಹೈದರಾಬಾದ್ ನಗರವೇ ಈ ಭಾಗದ ಕನ್ನಡ ಭಾಷೆ ಮತ್ತು ಸಾಹಿತ್ಯ ಅಭಿಮಾನಿಗಳಿಗೆ ಸಾಂಸ್ಕೃತಿಕ ಕೇಂದ್ರವಾಗಿ ಪರಿಣಮಿಸಿತ್ತು. ಆಧುನಿಕ ಕನ್ನಡ ಸಾಹಿತ್ಯಕ್ಕೆ ಈ ಪ್ರಾಂತ್ಯದ ಕೊಡುಗೆ ಏನು? ಬೇರೆ ಪ್ರದೇಶಗಳ ಸಾಧನೆ, ಕೊಡುಗೆಗೆ ಹೋಲಿಸಿದರೆ ಈ ಪ್ರಾಂತ್ಯದ ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳು ಒಡೆದು ಕಾಣುವುದಿಲ್ಲ. ಮುಖ್ಯ ಸಾಹಿತಿಗಳಿಲ್ಲ. ಮಹತ್ವದ ಸಾಹಿತ್ಯ ಕೃತಿಗಳಿಲ್ಲ ಎಂಬ ಅಭಿಪ್ರಾಯಗಳು ವ್ಯಕ್ತವಾಗಿವೆ. ಇದಕ್ಕೆ ಕಾರಣವೇನು? ಎಂಬ ಪ್ರಶ್ನೆಯನ್ನು ಗಂಭೀರವಾಗಿ ಎತ್ತಿಕೊಂಡು ಪರಿಶೀಲಿಸುವ ಯಾವ ಪ್ರಯತ್ನಗಳು ಇದುವರಗೂ ನಡೆದಿಲ್ಲ. ಈ ನಿಟ್ಟಿನಲ್ಲಿ ಈ ಅಧ್ಯಯನ ಅಂತಹ ಕಾರಣಗಳನ್ನು ಗುರುತಿಸುವ ಪ್ರಯತ್ನ ಮಾಡುತ್ತದೆ. ಸಾಂಸ್ಕೃತಿಕವಾಗಿ 'ಹಿಂದುಳಿದ ಪ್ರದೇಶ'ವೆಂದು ಸುಲಭವಾಗಿ ತೀರ್ಮಾನಿಸಲಾಗುತ್ತಿದೆಯೇ ಹೊರತು ಯಾಕೆ ಈ ಪ್ರಾಂತ್ಯ ಅನೇಕ ವಿಷಯಗಳಲ್ಲಿ ಮುಂದುವರಿಸಲು ಸಾಧ್ಯವಾಗಿಲ್ಲ? ಎಂದು ಹುಡುಕಾಟ ನಡೆಸಿದರೆ ಈ ಪ್ರಾಂತ್ಯದ ಚರಿತ್ರೆಯ ಒಡಲೊಳಗೇ ಅನೇಕ ಉತ್ತರಗಳು ಸಿಗುತ್ತವೆ.

ವಚನ ಚಳವಳಿಯ ಸಂದರ್ಭದಲ್ಲಿ ಕನ್ನಡ ಲಿಪಿಯನ್ನು ತೀಡಿಸುವ ಮೂಲಕ ವಚನ ರಚನೆಯವರೆಗೆ ಜನಸಾಮಾನ್ಯರಲ್ಲಿ ಕನ್ನಡ ಭಾಷೆಯನ್ನು ಹದಗೊಳಿಸಿದ್ದು ದೊಡ್ಡ ಸಾಧನೆಯೇ ಸರಿ. ಈ ಹೊತ್ತಿನಲ್ಲಿಯೂ ಸಾಧ್ಯವಾಗದ ಸಾಕ್ಷರತೆಯು ಅಂದು ಸಾಧ್ಯವಾಗಿತ್ತು ಎಂಬುದು ಸಂತೋಷದ ಸಂಗತಿಯೇ ಆಗಿದೆ. ರಗಳೆಯ ಕವಿ ಹರಿಹರ, ವಚನಕಾರರ ನಂತರದಲ್ಲಿ ಮೂಡಿ ಬಂದ ದಾಸರಿಗೆ ಈ ಪ್ರಾಂತ್ಯವೇ ನೆಲೆಯಾಗಿದೆ. ೧೨ನೇ ಶತಮಾನದ ನಂತರ ಪರಕೀಯರ ದಾಳಿ ಪ್ರಾರಂಭವಾಗುತ್ತಿದ್ದಂತೆ ಕೃಷ್ಣಾ ನದಿಯ ಮೇಲಿನ ಪ್ರಾಂತ್ಯದಲ್ಲಿ ಕನ್ನಡ ಭಾಷೆ-ಸಾಹಿತ್ಯ-ಸಂಸ್ಕೃತಿ ಹಿನ್ನೆಲೆಗೆ ಸರಿಯಲಾರಂಭಿಸಿ ೧೯ನೇ ಶತಮಾನದ ಹೊತ್ತಿಗೆ ಈ ಪ್ರಾಂತ್ಯದಲ್ಲಿ ಕನ್ನಡ ಭಾಷೆ ಲಿಪಿಯನ್ನೂ ಕಳೆದುಕೊಳ್ಳುವ ಸ್ಥಿತಿಯನ್ನು ತಲುಪಿತು. ಕನ್ನಡಿಗರಿಗೆ ಕನ್ನಡ ಲಿಪಿ ಅಪರಿಚಿತವಾಯಿತು. ಭಾಷೆ ನಾಶವಾದ ಮೇಲೆ ಆ ಭಾಷೆಯ ಸಂಸ್ಕೃತಿಗೆ ಸ್ಥಾನವಿರುವುದಿಲ್ಲ. ವಿಜಯನಗರ ಸಾಮ್ರಾಜ್ಯ, ಸುರಪುರ ಸಂಸ್ಥಾನದಿಂದಾಗಿ ಕೃಷ್ಣಾನದಿಯ ಕೆಳಗಿನ ಪ್ರದೇಶದಲ್ಲಿ ಕನ್ನಡ ಭಾಷೆ-ಸಾಹಿತ್ಯ-ಸಂಸ್ಕೃತಿಗೆ ಜೀವವಿತ್ತು. ೧೮ನೇ ಶತಮಾನದಲ್ಲಿ ಆಳ್ವಿಕೆಗೆ ಬಂದ ನಿಜಾಮರಿಂದ ಈ ಪ್ರದೇಶದಲ್ಲಿ ಕನ್ನಡ ಭಾಷೆ ಹಿನ್ನೆಲೆಗೆ ಸರಿಯತೊಡಗಿತು.

**೪.೧. ರಾಜಕೀಯ ಸ್ಥಿತ್ಯಂತರಗಳಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿ**

೬ನೇ ಶತಮಾನದಲ್ಲಿ ಬಾದಾಮಿಯ ಚಾಲುಕ್ಯರು, ೭ನೇ ಶತಮಾನದಲ್ಲಿ ಚಾಲುಕ್ಯ

ವಂಶದ ಪುಲಿಕೇಶಿ, ೮ನೇ ಶತಮಾನದಲ್ಲಿ ರಾಷ್ಟ್ರಕೂಟರು, ನಂತರ ೧೦–೧೧ನೇ ಶತಮಾನದವರೆಗೆ ಕಲ್ಯಾಣಿ ಚಾಲುಕ್ಯರು ಅರಸರಾಗಿ ಈ ಪ್ರಾಂತ್ಯದಲ್ಲಿ ಬಾಳಿದರು. ಬಾದಾಮಿಯ ಚಾಲುಕ್ಯರು ಆಂಧ್ರ ಪ್ರದೇಶದವರೆಗೆ, ರಾಷ್ಟ್ರಕೂಟರು ಗುಜರಾತದವರೆಗೆ ಕನ್ನಡಿಗರ ರಾಜ್ಯವನ್ನು ವಿಸ್ತರಿಸಿದ್ದರು. ಚಾಲುಕ್ಯ, ರಾಷ್ಟ್ರಕೂಟರ ಆಡಳಿತ ಭಾಷೆ ಮತ್ತು ಜನಸಾಮಾನ್ಯರ ಭಾಷೆ ಕನ್ನಡವೇ ಆಗಿತ್ತು. ಮಳಖೇಡ, ಕಲ್ಯಾಣ, ಬಾದಾಮಿ, ಕೊಪ್ಪಳ ನಾಡುಗಳು ಕನ್ನಡಿಗರ ಸಾಹಿತ್ಯ–ಸಾಂಸ್ಕೃತಿಕ ಕೇಂದ್ರಗಳಾಗಿ ಮಾನ್ಯತೆ ಪಡೆದಿದ್ದವು. ವಿದೇಶಿ ಪ್ರವಾಸಿಗರು ಈ ಕೇಂದ್ರಗಳ ಬಗ್ಗೆ ಅಭಿಮಾನ ವ್ಯಕ್ತಪಡಿಸಿದ್ದಾರೆ. ೧೩ನೇ ಶತಮಾನದ ಹೊತ್ತಿಗೆ ಕಲ್ಯಾಣಿ ಚಾಲುಕ್ಯರ ರಾಜ್ಯವು ಮೂರು ಭಾಗಗಳಾಗಿ ಒಡೆಯಿತು. ಓರಂಗಲ್ಲಿನ ಕಾಕತೀಯರು, ದೇವಗಿರಿಯ ಯಾದವರು, ದೋರಸಮುದ್ರದ ಹೊಯ್ಸಳರು ಇವರೇ ಮೂರು ರಾಜ್ಯಗಳಲ್ಲಿ ಪ್ರಭುತ್ವವನ್ನು ಹಿಡಿದು ಆಳತೊಡಗಿದರು. ತೆಲುಗು (ಕಾಕತೀಯರು), ಮರಾಠಿ (ಯಾದವರು), ಕನ್ನಡ (ಬಲ್ಲಾಳರು) ಈ ಭಾಷೆಗಳು ಇವರ ರಾಜ್ಯಗಳಲ್ಲಿದ್ದವು. ಉತ್ತರದ ಅಲ್ಲಾವುದ್ದೀನ್ ಖಿಲ್ಜಿ, ಮಲ್ಲಿಕಾಫರ್‌ರ ದಾಳಿಗೆ ಸಿಕ್ಕು ಈ ರಾಜ್ಯಗಳು ಸೋತು ಕಣ್ಮರೆಯಾಗತೊಡಗಿದವು. ೧೩ನೇ ಶತಮಾನದ ನಂತರದಿಂದ ಈ ಪ್ರಾಂತ್ಯವು ಉತ್ತರದ ಅರಸರ ದಾಳಿಗೆ ಸಿಕ್ಕು ನಿರಂತರವಾಗಿ ಅವರ ಆಳ್ವಿಕೆಗೆ ಒಳಪಟ್ಟಿತು.

ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ಸಿಗುವವರೆಗೆ ಈ ಪ್ರಾಂತ್ಯದಲ್ಲಿ ಪುನಃ ಕನ್ನಡ ಅರಸರಾಗಲಿ, ಕನ್ನಡ ಭಾಷೆಯಾಗಲಿ ನೆಲೆಗೊಳ್ಳಲು ಅವಕಾಶ ದೊರೆಯಲಿಲ್ಲ. ಆಳರಸರ ಭಾಷೆಯಾಗಿದ್ದ ಕನ್ನಡ ೧೩ನೇ ಶತಮಾನದ ನಂತರ ದಿನಕಳೆದಂತೆ ಬರೆಹದ ಭಾಷೆಯಾಗಿ ಉಳಿಯದೆ ಕೇವಲ ಜನಸಾಮಾನ್ಯರ ಆಡು ಭಾಷೆಯಾಗಿ ಮಾತ್ರ ಜೀವ ಉಳಿಸಿಕೊಂಡಿತ್ತು. ಅದರಲ್ಲೂ ಕೃಷ್ಣಾನದಿಯ ಮೇಲಣ ಪ್ರದೇಶವಂತೂ ಕನ್ನಡ ಲಿಪಿಗಳನ್ನು ಮರೆಯುವಂತಾಯಿತು. ಕೃಷ್ಣಾನದಿಯ ಕೆಳಗಿನ ಪ್ರದೇಶದಲ್ಲಿ ವಿಜಯನಗರ ಸಾಮ್ರಾಜ್ಯ ತಲೆ ಎತ್ತಿದ್ದರಿಂದ ಕನ್ನಡ ಭಾಷೆ–ಸಾಹಿತ್ಯ–ಸಂಸ್ಕೃತಿಯ ಬೆಳವಣಿಗೆಗೆ ಅವಕಾಶ ದೊರೆತ್ತಿತ್ತು. ಕೃಷ್ಣಾ ನದಿಯ ಮೇಲಿನ ನಾಡಿನಲ್ಲಿ ಪುನಃ ೧೭ನೇ ಶತಮಾನದಲ್ಲಿ ಸುರಪುರ ಸಂಸ್ಥಾನ ತಲೆ ಎತ್ತಿದ್ದರಿಂದ ಕನ್ನಡ ಭಾಷೆ, ಸಂಸ್ಕೃತಿಗೆ ಜೀವ ಮೂಡಿತು. ಆದರೆ ಈ ಹೊತ್ತಿಗಾಗಲೇ ಮರಾಠಿ ಭಾಷೆ ಈ ನಾಡಿನಲ್ಲಿ ತುಂಬಿ ಹೋಗಿತ್ತು. ಸುರಪುರದ ಸಂಸ್ಥಾನವು ಮೊಗಲರನ್ನು, ಪೇಶ್ವೆಯರನ್ನು ಎದುರಿಸಿ ಬಾಳಿತು. ಆದರೆ ೧೯ನೇ ಶತಮಾನದ ಹೊತ್ತಿಗೆ ಬ್ರಿಟಿಷರ ದಾಳಿಗೆ ಸಿಕ್ಕು ಸೋತು ಹೋಯಿತು. ಈ ಸಂಸ್ಥಾನದ ಪ್ರಾಂತ್ಯವನ್ನು ನಿಜಾಮ್ ಆಡಳಿತಕ್ಕೆ ಬ್ರಿಟೀಶರೇ ಒಪ್ಪಿಸಿದರು.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ಒಂದು ದಶಕದ ನಂತರ ಬಹಮನಿ ರಾಜ್ಯ ಸ್ಥಾಪನೆಯಾಯಿತು. ನಂತರ ಆದಿಲ್‌ಶಾಹಿ ರಾಜ್ಯ ಆಳ್ವಿಕೆಗೆ ಬಂದು ಈ ಪ್ರಾಂತ್ಯದಲ್ಲಿ ಸುಮಾರು ೨೦೦ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ವಿಜಯನಗರ ಸಾಮ್ರಾಜ್ಯದ ಪತನಕ್ಕೆ ಈ ಅರಸರೇ ಕಾರಣರಾದರು. ನಂತರ ಈ ಅರಸರ ರಾಜ್ಯ ಐದು ಭಾಗಗಳಾಗಿ ವಿಜಾಪುರ, ಗುಲಬರ್ಗಾ, ಬೀದರ್ ಜಿಲ್ಲಾ ಪ್ರದೇಶಗಳನ್ನು ಆಳತೊಡಗಿತು. ನಂತರ ಮೊಗಲರ ದಾಳಿಯಲ್ಲಿ ಈ ಅರಸರೂ

ಸೋತು ಕಣ್ಮರೆಯಾದರು. ಹೀಗಾಗಿ ಅನ್ಯ ಸಂಸ್ಕೃತಿಯ ಅರಸರ ಆಳ್ವಿಕೆಯಿಂದ ಈ ಪ್ರಾಂತ್ಯದಲ್ಲಿ ಸುಮಾರು ೬೦೦ವರ್ಷಗಳ ಕಾಲ ಕನ್ನಡ ಭಾಷೆ ಹಿನ್ನೆಲೆಗೆ ಸರಿದುಬಿಟ್ಟಿತ್ತು. ಬಹಮನಿ ಅರಸರ ಕಾಲದಲ್ಲಿ ಸಾಮಾನ್ಯವಾಗಿ ಮತ್ತು ಸಹಜವಾಗಿ ಫಾರಸಿ ಭಾಷೆ ಆಡಳಿತದಲ್ಲಿ ಆದ್ಯತೆ ಪಡೆದಿತ್ತು. ಸಾಹಿತ್ಯ, ಶಾಸನಗಳ ಭಾಷೆಯೂ ಫಾರಸಿಯಾಗಿತ್ತು. ಆಡಳಿತದಲ್ಲಿ ಕನ್ನಡಿಗರಿಗೆ ಸ್ಥಾನವಿರಲಿಲ್ಲ. ಬದಲಾಗಿ ಉತ್ತರದಿಂದ ಜನರನ್ನು ಕರೆಸಿ ರಾಜ್ಯಾಡಳಿತದಲ್ಲಿ ನೇಮಿಸಿಕೊಳ್ಳಲಾಯಿತು. ಉತ್ತರದಿಂದ ಬಂದವರಲ್ಲಿ ಬಹುತೇಕ ಜನರು ಮರಾಠಿಗಳು, ರಜಪೂತರು ಆಗಿದ್ದರು. ಆದಿಲ್ ಶಾಹಿಗಳ ರಾಜ್ಯದ ಆಡಳಿತದಲ್ಲಿ ಬದಲಾವಣೆಗಳು ಕಾಣಿಸಿಕೊಂಡವು. ೨ನೇ ಇಬ್ರಾಹಿಂನ ಕಾಲದಲ್ಲಿ ಫಾರಸಿ ಕಲಿತ ಕನ್ನಡಿಗರು ಆಡಳಿತದಲ್ಲಿ ಸೇರಿರುವ ಸಾಧ್ಯತೆಗಳು ಕಂಡರೂ ಕನ್ನಡಕ್ಕೆ ಸ್ಥಾನವಿರಲಿಲ್ಲ. ಮನುಷ್ಯನ ಸಂಸ್ಕೃತಿಯು ಅವನ ಭಾಷೆಯನ್ನು ಅವಲಂಬಿಸಿರುತ್ತದೆ. ಆ ಭಾಷೆಯೇ ನಾಶವಾದ ಮೇಲೆ ಅವನ ಸಂಸ್ಕೃತಿಯೂ ನಾಶವಾಗಿ ಹೋಗುತ್ತದೆ. ಈ ಪ್ರಾಂತ್ಯದಲ್ಲಿ ಕನ್ನಡಿಗರ ಸ್ಥಿತಿ ಹೀಗಾಯಿತು.

ಆದರೆ ಮುಸ್ಲಿಂ ಆಳ್ವಿಕೆ ಬಹುದೀರ್ಘ ಕಾಲ ನಡೆದುದರಿಂದ 'ಇಸ್ಲಾಂ' ಸಂಸ್ಕೃತಿಯ ಧರ್ಮ ಮತ್ತು ಭಾಷೆಗಳು ಮೂಲ ಸ್ಥಳೀಯ ಜನಸಮುದಾಯಗಳ ಮೇಲೆ ಪ್ರಭಾವ ಬೀರತೊಡಗಿದವು. ಪೇಶ್ವೆಯರ ಆಳ್ವಿಕೆಯಿಂದ ಮರಾಠಿ ಭಾಷೆ ಮತ್ತು ಸಂಸ್ಕೃತಿ ಈ ಪ್ರಾಂತ್ಯದಲ್ಲಿ ಸೇರಿತು. ಅದರಲ್ಲೂ ಮೇಲ್ವರ್ಗದ ವೈದಿಕ ಸಮುದಾಯಗಳಲ್ಲಿ ಹೆಚ್ಚು ಪ್ರಭಾವ ಬೀರಿತು. ಉತ್ತರದಿಂದ ಬಂದ ಸೂಫಿಗಳು ಈ ಪ್ರಾಂತ್ಯದ ಕೆಳ ಸಮುದಾಯಗಳ ಮೇಲೆ ತೀವ್ರ ಪರಿಣಾಮ ಬೀರಿದರು. ಈ ಪ್ರಾಂತ್ಯದ ಜನ ಸಮುದಾಯಗಳಲ್ಲೂ ಒಂದೇ ಬಗೆಯ ಧಾರ್ಮಿಕ ನಂಬಿಕೆ ಪದ್ಧತಿಗಳೇನೂ ಇರಲಿಲ್ಲ. ಮೇಲ್ವರ್ಗದ ಲಿಂಗಾಯತರ ಮತ್ತು ವೈದಿಕರ ಧಾರ್ಮಿಕ ನಂಬಿಕೆಗಳು, ಪದ್ಧತಿಗಳು ಬೇರೆ ಬೇರೆ ರೀತಿಯಾಗಿದ್ದವು. ಕೆಳವರ್ಗದ ಜನರ ಜೀವನ ಕ್ರಮಗಳೂ ಬೇರೆಯಾಗಿದ್ದವು.

ಹೀಗಿರುವಾಗ ಪರಕೀಯರ ಆಳ್ವಿಕೆ ಅವರ ಧಾರ್ಮಿಕತೆ, ಸಂಸ್ಕೃತಿಗಳು, ಸೂಫಿ ಸಂತರ ಸಂಸ್ಕೃತಿಯೂ ಸೇರಿಕೊಂಡು ಈ ಪ್ರಾಂತ್ಯದಲ್ಲಿ ಒಂದು ರೀತಿಯ ಸಂಕರ ಸಂಸ್ಕೃತಿಯೇ ರೂಪಗೊಂಡು ನಿರ್ಮಾಣವಾಯಿತು. 'ಹಿಂದೂ–ಮುಸ್ಲೀಂ' ಸಂಸ್ಕೃತಿಗಳು ಒಂದರೊಳಗೊಂದು ಬೆರೆತುಹೋದವು. ಈ ಮಾತು ಹೆಚ್ಚು ಕೆಳವರ್ಗದ ಜನ ಸಮುದಾಯಗಳಿಗೆ ಅನ್ವಯಿಸುತ್ತದೆ. ಕೆಳವರ್ಗದ 'ಹಿಂದುಗಳ' ಮೇಲೆ ಪರಕೀಯ ಸಂಸ್ಕೃತಿ ಎಷ್ಟರ ಮಟ್ಟಿಗೆ ಪ್ರಭಾವ ಬೀರಿದೆ ಎಂಬುದನ್ನು ಕಪಟರಾಳ ಕೃಷ್ಣರಾವ್ ಹೀಗೆ ವ್ಯಕ್ತಪಡಿಸಿದ್ದಾರೆ: 'ಮುಸಲ್ಮಾನ ಫಕೀರರು ಗುರುಗಳಾದರು. ವೇದವು ಕುರಾನವು ಒಂದೇಯಾಯಿತು. ಈ ಫಕೀರರ ಗೋರಿಗಳೆ ದೇವಸ್ಥಾನಗಳಾದವು. ಕನ್ನಡಿಗರಿಗೆ ಗೋರಿಗಳು ಕುಲದೈವಗಳಾದವು. ಸಮಾಜದ ಮಾರ್ಗದರ್ಶಿಗಳಾದ ಮೇಲ್ತರಗತಿಯ ಜನರ ಸ್ಥಿತಿಯು ಈ ರೀತಿಯಾಗಿ ಮಾನಸಿಕ ಬದಲಾವಣೆಯಾದಲ್ಲಿ ಸಮಾಜದ ಸಾಮಾನ್ಯ ಜನರು ಲಾಡಿ ಕಟ್ಟಿಕೊಂಡು 'ದೀನ್‌ದೀನ್' ಎನ್ನುತ್ತ ಗೋರಿಗಳಿಗೂ ಪೀರಗಳಿಗೂ

ನೈವೇದ್ಯವನ್ನು ಕೊಡುವುದು ರೂಢಿಯಾದದ್ದೇನು ಆಶ್ಚರ್ಯದ ಮಾತಲ್ಲ'.[೭] ಅಂದಿನಿಂದ ಬಂದ ರೂಢಿ ಈ ಪ್ರಾಂತ್ಯದಲ್ಲಿ ಇಂದಿಗೂ ಸಹ 'ಹಿಂದೂ-ಮುಸ್ಲೀಂ' ಸಮುದಾಯಗಳು ಯಾವುದೇ ಬೇಧವೆಣಿಸದೇ ಮೊಹರಂ ಹಬ್ಬದಲ್ಲಿ ಸಂಭ್ರಮದಿಂದ ಪಾಲ್ಗೊಳ್ಳುವಂತೆ ಮಾಡಿದೆ. ಆ ಸಾಮರಸ್ಯವನ್ನು ನಾವು ಈಗಲೂ ಕಾಣಬಹುದಾಗಿದೆ.

### ೪.೨. ಮೋಡಿಲಿಪಿ ಬಳಕೆ

ಹದಿಮೂರನೆಯ ಶತಮಾನದ ನಂತರ ಬಹಮನಿ ಆದಿಲ್‌ಶಾಹಿಗಳ ಆಳ್ವಿಕೆಯಿಂದ, ಅವರ ಧರ್ಮ, ಸಂಸ್ಕೃತಿ, ಭಾಷೆಗಳು ಈ ಪ್ರಾಂತ್ಯದ ಜನ ಸಮುದಾಯಗಳಲ್ಲಿ ಒತ್ತಡ ಹೇರಿದವು. ೧೯ನೇ ಶತಮಾನದ ಹೊತ್ತಿಗೆ ಈ ಪ್ರಾಂತ್ಯದ ಜನ ಸಾಮಾನ್ಯರು ಮರಾಠಿ, ಫಾರಸಿ, ಉರ್ದು, ಹಿಂದಿ ಭಾಷೆಗಳ ಜತೆ ಮುಖಾಮುಖಿಯಾದರು. ಸ್ಥಳೀಯವಾಗಿ ಕನ್ನಡ, ತೆಲುಗು ಭಾಷೆಗಳಂತು ಸರಿಯೇ. ಕನ್ನಡ ಭಾಷೆ ತನ್ನ ಲಿಪಿಯನ್ನು ಕಳೆದುಕೊಳ್ಳಲಾರಂಭಿಸಿತು. ಅದರ ಬದಲು ಮರಾಠಿ ಭಾಷೆಯ ಮೂಲದಿಂದ 'ಮೋಡಿಲಿಪಿ' ಹುಟ್ಟಿಕೊಂಡಿತು. ಭಾಷೆ ಕನ್ನಡವೇ, ಲಿಪಿ ಮಾತ್ರ ಮೋಡಿಯಾಗಿತ್ತು. ಶೀಘ್ರ ಬರವಣಿಗೆಗೆ ಈ ಮೋಡಿ ಅನುಕೂಲವಾಗಿ ಪರಿಣಮಿಸಿತು. ಪ್ರಜ್ಞಾವಂತರು ವ್ಯವಹಾರದಲ್ಲೂ ಈ ಲಿಪಿಯನ್ನು ಬಳಸಿಕೊಂಡರು. ಮೋಡಿ ಲಿಪಿ ಬಳಕೆಗೆ ಬಂದ ಮೇಲೆ ಕನ್ನಡ ಲಿಪಿ ಕೃಷ್ಣಾ ನದಿಯ ಮೇಲಿನ ನಾಡಿನಲ್ಲಿ ಮಾಯವಾಗ ತೊಡಗಿತು.

ಅನೇಕ ರಾಜಕೀಯ ಒತ್ತಡಗಳಿಂದ ಕನ್ನಡ ಭಾಷೆ ತನ್ನ ಲಿಪಿಯನ್ನು ಮರೆಮಾಚಿಕೊಂಡು ಅದರ ಸ್ಥಾನದಲ್ಲಿ ಬೇರೊಂದು ಲಿಪಿಯನ್ನು ಸೃಷ್ಟಿಸಿಕೊಂಡಿತ್ತು. ಕೊಡೇಕಲ್ಲು ಬಸವಣ್ಣನ ಕಾಲದಲ್ಲಿ ಕನ್ನಡ ಭಾಷೆಯ ಲಿಪಿಗೆ ಬದಲು 'ಅಮರಗನ್ನಡ ಲಿಪಿ'ಯನ್ನು ಸೃಷ್ಟಿಸಿ ಚಲನೆಗೆ ತರಲಾಯಿತು. ಸಂಶೋಧನೆ ನಡೆಸಿದರೆ ಕನ್ನಡ ಲಿಪಿಗೆ ಪರ್ಯಾಯವಾಗಿ ಹುಟ್ಟಿಕೊಂಡ ಅನೇಕ ಲಿಪಿಗಳು ಸಿಗಬಹುದು. ಕನ್ನಡ ಭಾಷೆ ಜನಸಾಮಾನ್ಯರ ಅದರಲ್ಲೂ ಕೆಳವರ್ಗದ ಆಡುಮಾತಿನಲ್ಲಿ ಜೀವ ಉಳಿಸಿಕೊಂಡಿತ್ತು. ರಾಜಕೀಯ ಒತ್ತಡಗಳಿಗೆ ಮಣಿದ ಈ ಪ್ರಾಂತ್ಯದ 'ಹಿಂದು'ಗಳು, 'ಮುಸ್ಲೀಂ'ಮತಕ್ಕೆ ಮತಾಂತರಗೊಂಡರು. ಈ ಮತಾಂತರಗೊಂಡ ಸಮುದಾಯವು ದಖನಿ ಭಾಷೆಯನ್ನು ಅವಲಂಬಿಸಿತೆಂದು ಕಾಣುತ್ತದೆ. ಮೇಲ್ವರ್ಗದ ವೈದಿಕ ಸಮುದಾಯ ಮರಾಠಿ, ಉರ್ದು, ಫಾರಸಿ ಭಾಷೆಗಳನ್ನು ಕಲಿತರು. ಲಿಂಗಾಯಿತರು ಅಲ್ಪ ಸ್ವಲ್ಪ ವ್ಯವಹಾರಕ್ಕಾಗಿ ಮರಾಠಿ, ಉರ್ದು ಕಲಿತುಕೊಂಡು ತಮ್ಮ ಮನೆಗಳಲ್ಲಿ, ಮಠಗಳಲ್ಲಿ ಕನ್ನಡ ಭಾಷೆಯನ್ನು ಅದರ ಲಿಪಿಯೊಂದಿಗೆ ಉಳಿಕೊಂಡಿದ್ದರೂ ಅದು ಮರಾಠಿ, ದಖನಿ ಭಾಷೆಗಳ ಕಲಬೆರಿಕೆಯಿಂದಾಗಿ ಭಾಷೆ ಕನ್ನಡವಾದರೂ ಅದು ವಿಚಿತ್ರ ಸ್ವರೂಪವನ್ನು ಪಡೆದು ಬೆಳೆಯಿತು. ಬೀದರ ಕನ್ನಡ ಭಾಷೆಯನ್ನು ಕೇಳುತ್ತಿದ್ದರೆ ಅದನ್ನು ಕನ್ನಡ ಭಾಷೆಯೆಂದು ನಂಬುವುದಕ್ಕೆ ಕಷ್ಟವಾಗುತ್ತದೆ. ಜನ ಸಮುದಾಯಗಳು ಬಹುಭಾಷೆಗಳ ಹೊಡೆತಗಳ ನಡುವೆ ಕನ್ನಡ ಭಾಷೆಯನ್ನು ಅದು ಹೇಗೋ ಉಳಿಸಿಕೊಂಡು ಬಂದಿರುವುದು ಪವಾಡದಂತೆ ಕಾಣುತ್ತದೆ.

ಈ ಪ್ರಾಂತ್ಯದಲ್ಲಿ ಮೋಡಿಲಿಪಿ ತುಂಬಾ ಜನಪ್ರಿಯವಾಗಿ ಬಳಕೆಯಾಗತೊಡಗಿತು. ಕನ್ನಡಿಗರು ಕನ್ನಡ ಭಾಷೆಯನ್ನು ಉಳಿಸಿಕೊಂಡು ಕನ್ನಡ ಲಿಪಿಯನ್ನು ಮರೆತರೆಂದು ಕಾಣುತ್ತದೆ. 'ಮೋಡಿ ಲಿಪಿಯಲ್ಲಿ ಕನ್ನಡ ಕಾವ್ಯಗಳನ್ನು, ಗ್ರಂಥಗಳನ್ನು ರಚಿಸಿದರು. ಕನ್ನಡಕ್ಕೆ ಹೊರತಾದ ಮೋಡಿಯಂಥ ಬೇರೊಂದು ಲಿಪಿಯಲ್ಲಿ ಈ ಸಾಹಿತ್ಯ ರಚನೆಯಾಗಿರುವುದರಿಂದ ಇದುವರೆಗೆ ಯಾವ ವಿದ್ವಾಂಸರು ಆ ಕಡೆಗೆ ಗಮನ ಹರಿಸಿಲ್ಲ. ಆ ಎಲ್ಲ ಕೃತಿಗಳು ಬೆಳಕಿಗೆ ಬರಬೇಕಾಗಿದೆ.'[೨] ಅಕ್ಷರೇತರ ಸಮುದಾಯಗಳು ಮುಖ್ಯವಾಗಿ ಜನಪದರು ಲಿಪಿಯ ಹಂಗನ್ನು ಮೀರಿ ಮೌಖಿಕ ಸಂಪ್ರದಾಯದಲ್ಲೇ ತಮ್ಮ ಕಾವ್ಯಗಳನ್ನು ಅಭಿವ್ಯಕ್ತಪಡಿಸಿದ್ದಾರೆ. ತತ್ವಪದ, ಮೋಹರಂ ಪದ, ಬುಲಾಯಿ ಹಾಡು, ಬುರ್ರಕಥಾ, ಸವಾಲ್-ಜವಾಬ್ ಹಾಡು ಮುಂತಾದ ಕಾವ್ಯ ಪ್ರಕಾರಗಳು ಹೇರಳವಾಗಿ ಕಟ್ಟಲಾಯಿತು. ಈ ಪ್ರಾಂತ್ಯದಲ್ಲಿ ಲಿಖಿತ ಸಾಹಿತ್ಯಕ್ಕಿಂತ ಮೌಖಿಕ ಸಂಪ್ರದಾಯದ ಸಾಹಿತ್ಯವೇ ಅಧಿಕ ಪ್ರಮಾಣದಲ್ಲಿ ವ್ಯಕ್ತವಾಗಿದೆ. ಈ ಸಾಹಿತ್ಯ ಬಹುಭಾಷೆಗಳಲ್ಲಿ ರಚನೆಯಾಗಿದೆ. ತೆಲುಗು, ಕನ್ನಡ, ಮರಾಠಿ, ಉರ್ದು ಭಾಷೆಗಳಲ್ಲಿ ಈ ಜನಪದರು ಕಟ್ಟಿದ ಸಾಹಿತ್ಯವಿದೆ. ಜನಸಮುದಾಯವೇ ಬಹುಭಾಷೆಗಳಲ್ಲೂ ಈ ಸಾಹಿತ್ಯವನ್ನು ಭಾಷಾಂತರ ಮಾಡಿಕೊಂಡಿದೆ.

ಕನ್ನಡ ಭಾಷೆಯ ಅವಸ್ಥೆ ಎಲ್ಲಿಯವರೆಗೆ ಬಂತೆಂದರೆ 'ಕನ್ನಡಿಗರ ರಾಜ್ಯವು ಹೋದೊಡನೆ ರಾಜಕೀಯ ಸಂಸ್ಥೆಗೆ ಸಂಬಂಧಪಟ್ಟ ಪಾರಿಭಾಷಿಕ ಶಬ್ದಗಳನ್ನು ಜನರು ಮರೆತುಬಿಟ್ಟರು. ಪೇಶ್ವೆ ರಾಜ್ಯದ ಉದಯದಿಂದ ಮರಾಠಿಯೇ ಸಾರ್ವತ್ರಿಕವಾಗಿ ಬರೆಹದ ಭಾಷೆಯಾಯಿತು. ಕನ್ನಡವು ಕೇವಲ ಮಾತನಾಡುವ ಭಾಷೆಯಾಗಿ ಸಂತೆ, ಪೇಟೆ, ಹಳ್ಳಿ, ಮನೆಮಾರುಗಳಲ್ಲಿ ಮಾತ್ರ ಉಳಿಯಿತು. ಬಾಲಕರ ಅಕ್ಷರಾಭ್ಯಾಸವಾಗುವುದು ಕೂಡ ಮೋಡಿಯಲ್ಲಿ ಮೊದಲಾಯಿತು. ಇದರಿಂದ ಜನರಿಗೆ ಕನ್ನಡ ಅಕ್ಷರಾಭ್ಯಾಸವೂ ಇಲ್ಲದಂತಾಯಿತು. ಸಮಾಜದ ಮೇಲ್ವರ್ಗದವರಾದ ದೇಶಮುಖ, ದೇಶಪಾಂಡೆ, ಗೌಡ, ಕುಲಕರ್ಣಿಯರು, ವ್ಯಾಪಾರಿಗಳು ವ್ಯವಹಾರಿಕ ದೃಷ್ಟಿಯಿಂದ ಮರಾಠಿಯನ್ನು ತಕ್ಕ ಮಟ್ಟಿಗೆ ಕಲಿತುಕೊಳ್ಳುತ್ತಿದ್ದರು. ಕನ್ನಡವು ಇವರಿಗೆ ಅನಾವಶ್ಯಕ. ಪೇಶ್ವೆಯರ ಕಾಲದಿಂದೀಚೆಗೆ ಬ್ರಾಹ್ಮಣರು ಮರಾಠಿಗೆ ಮನಸೋತವರಾಗಿ ಕನ್ನಡವೆಂದರೆ ಲಿಂಗಾಯತರ ಭಾಷೆಯೆಂದು ತಿಳಿದರು. ವೈದಿಕ, ಅಭ್ಯಾಸ ಮಾಡುವ ಬ್ರಾಹ್ಮಣರಿಗೆ ಕನ್ನಡವೆಂದರೆ ತಿರಸ್ಕಾರ. ಮಠಗಳಲ್ಲಿಯ ಜಂಗಮರು ಪುರಾಣ ಹೇಳುವ ಅಯ್ಯನವರು ಮಾತ್ರ ಅಲ್ಲೊಬ್ಬ ಇಲ್ಲೊಬ್ಬ ಕನ್ನಡ ಅರಿತವರು ಇರುತ್ತಿದ್ದರು. ಅವರಿಗೆ ಅದು ಉಪಜೀವನದ ಸಾಧನವಾದುದರಿಂದ ಅವರು ಪುರಾಣ ಹೇಳುವಷ್ಟರ ಮಟ್ಟಿಗೆ ಕನ್ನಡವನ್ನು ಕಲಿತುಕೊಳ್ಳುತ್ತಿದ್ದರು. ಆದರೆ ಇಂತಹ ಜನರ ಸಂಖ್ಯೆಯು ಅತ್ಯಲ್ಪ'[೩] ಜಂಗಮರು ಕನ್ನಡ ಉಳಿಸಿಕೊಂಡದ್ದು ಕೂಡಾ ಕೃಷ್ಣಾ ನದಿಯ ಕೆಳಗಿನ ನಾಡಿನಲ್ಲಿಯೇ ಹೊರತು ಮೇಲಿನ ನಾಡಿನಲ್ಲಿ ಅಲ್ಲ. ಬೀದರ, ಲಾತೂರು, ಯಾದಗಿರಿ, ಭಾಲ್ಕಿ, ಔರಾದ ಮುಂತಾದ ಪ್ರದೇಶಗಳಲ್ಲಿ ಜಂಗಮರೂ ಕೂಡ ವಚನಗಳನ್ನು ಮೋಡಿ ಲಿಪಿಯಲ್ಲಿ ಹಾಗೂ ಮರಾಠಿಯಲ್ಲಿ ಬರೆದುಕೊಂಡು ಓದುತ್ತಿದ್ದರು. ಜಂಗಮರು ಜೋಳಿಗೆಯಲ್ಲಿ ಮೋಡಿ, ಮರಾಠಿ ಲಿಪಿಯ ಕನ್ನಡ ಕವಚಗಳನ್ನು ಇಟ್ಟುಕೊಂಡು ಮನೆ ಮನೆಗೆ ಕಂತೆ ಭಿಕ್ಷೆಗೆ

ಹೋಗಿ ಅಲ್ಲಿ ವಚನಗಳನ್ನು ಓದಿ, ಅದರಲ್ಲಿನ ಸಾರವನ್ನು ಜನರಿಗೆ ತಿಳಿಸಿ ತಮ್ಮ ಕಾಯಕಕ್ಕೆ ಫಲ ಪಡೆದು ಮರಳುತ್ತಿದ್ದರು.

**೪.೩. ನಿಜಾಮ್ ಆಡಳಿತ ಮತ್ತು ಬಹುಭಾಷೆಗಳ ತೊಡಕು**

ನಿಜಾಂ ವಂಶಜರಲ್ಲಿ ಅಫಜಾಲುನ್-ದೌಕಾ-ಬಹದ್ದೂರ್ (೧೮೫೭-೧೮೬೯)ನು ಅಧಿಕಾರಕ್ಕೆ ಬಂದಾಗ ಆಡಳಿತದಲ್ಲಿ ಅನೇಕ ಬದಲಾವಣೆಗಳು ಕಾಣಿಸಿದವು. ಜಿಲ್ಲೆ, ತಾಲೂಕುಗಳು ಎಂದು ವಿಭಾಗಿಸಲಾಯಿತು. ಈ ವಿಭಾಗಗಳಿಗೆ ಆಡಳಿತವನ್ನು ನೋಡಿಕೊಳ್ಳಲು ಸುಭೇದಾರರನ್ನು ನೇಮಿಸಲಾಯಿತು. ಭೂಮಿಯನ್ನು ಅಳತೆ ಮಾಡಿಸಲಾಯಿತು. ಆಧುನಿಕ ಶಿಕ್ಷಣವನ್ನು ಪಡೆದವರಿಗೆ ಆಡಳಿತದಲ್ಲಿ ಉದ್ಯೋಗಾವಕಾಶಗಳು ದೊರೆತವು. ಈ ಸಂದರ್ಭದಲ್ಲಿಯೇ ಈ ಪ್ರಾಂತ್ಯವನ್ನು ನಳದುರ್ಗ, ಗುಲಬರ್ಗಾ, ರಾಯಚೂರು, ಲಿಂಗಸಗೂರುಗಳನ್ನು ಜಿಲ್ಲೆಗಳೆಂದು ವಿಂಗಡಿಸಲಾಯಿತು. ಬೀದರ್ ಜಿಲ್ಲೆಯ ಪ್ರದೇಶವು ನಳದುರ್ಗದಲ್ಲಿ ಸೇರಿಕೊಂಡಿತು. ಈ ಜಿಲ್ಲಾ ಪ್ರದೇಶದಲ್ಲಿ ಮರಾಠಿ, ಉರ್ದು ಭಾಷೆ ಬಿಟ್ಟರೆ ಬೇರೆ ಭಾಷೆಗಳು ವ್ಯವಹಾರದಲ್ಲಿದ್ದವು. ರಾಯಚೂರು ಜಿಲ್ಲಾ ಪ್ರದೇಶಗಳಲ್ಲಿಯೂ ತೆಲುಗು, ಮರಾಠಿ, ಉರ್ದು ಭಾಷೆಗಳ ಜತೆ ಕನ್ನಡ ಭಾಷೆ ಬಳಕೆಯಲ್ಲಿತ್ತು. ಲಿಂಗಸಗೂರು ಜಿಲ್ಲಾ ಪ್ರದೇಶದಲ್ಲಿ ಕನ್ನಡ ಭಾಷೆ ವ್ಯವಹಾರದಲ್ಲಿತ್ತು. ಇಮಾಮ್ ಜಂಗ್ ಎಂಬ ಸುಭೇದಾರ ಈ ಜಿಲ್ಲೆಗಳ ಭಾಷೆ ಮತ್ತು ವ್ಯವಹಾರವನ್ನು ಪರಿಶೀಲಿಸಿ, ಆಡಳಿತದಲ್ಲಿ ಅನುಕೂಲವಾಗುವಂತೆ ಸ್ಥಳೀಯ ಭಾಷೆಗಳಿಗೆ ಅವಕಾಶ ಮಾಡಿಕೊಡಲು ಪ್ರಯತ್ನಿಸಿದ. ಸ್ಥಳೀಯ ಭಾಷೆಗಳಾದ ಕನ್ನಡ, ತೆಲುಗು ಭಾಷೆಗಳು ಕೇವಲ ಕೆಲವು ಕಡೆ ಬಾಯಿಮಾತಿನಲ್ಲಿ ಉಳಿದಿದ್ದವು. ಗೌಡ, ಕುಲಕರ್ಣಿ, ದೇಸಾಯಿ ಮುಂತಾದ ಸ್ಥಳೀಯ ಮುಖಂಡರು ಕನ್ನಡವನ್ನಾಗಲಿ, ತೆಲುಗನ್ನಾಗಲಿ ಆಡಳಿತದಲ್ಲಿ ಬಳಸುತ್ತಿರಲಿಲ್ಲ. ರಾಯಚೂರು, ಲಿಂಗಸಗೂರು ಜಿಲ್ಲಾ ಪ್ರದೇಶಗಳಲ್ಲಿಯೂ ಇವರು ಮರಾಠಿಯನ್ನು ಬಳಸುತ್ತಿದ್ದರು. ಇದನ್ನು ಕಂಡು ಆಡಳಿತದಲ್ಲಿ ಉರ್ದು, ಮರಾಠಿ ಭಾಷೆಗಳ ಜೊತೆಗೆ ಕೆಲವು ಕಡೆ ತೆಲುಗು, ಕೆಲವು ಕಡೆ ಕನ್ನಡ ಭಾಷೆಗಳನ್ನು ಬಳಸಲು ಈ ಅಧಿಕಾರಿಗಳು ಯೋಚಿಸಿದರು. ಇದು ಸುಗಮವಾಗಿ ನಡೆಯಲು ಕೆಳ ಹಂತದ ನೌಕರರನ್ನು ಆಡಳಿತದಲ್ಲಿ ತೆಗೆದುಕೊಳ್ಳುವಾಗ ಮುಖ್ಯವಾಗಿ ಆಡಳಿತ ಭಾಷೆ ಉರ್ದುವಿನೊಂದಿಗೆ ಸ್ಥಳೀಯ ಭಾಷೆಯನ್ನು ಬಲ್ಲವರಿಗೆ ಅವಕಾಶಗಳು ದೊರೆಯುವಂತೆ ಮಾಡಲಾಯಿತು. ಇದರಿಂದ ಕೆಲವು ಜಿಲ್ಲಾ ಪ್ರದೇಶಗಳಲ್ಲಿ ದ್ವಿಭಾಷಿ, ತ್ರಿಭಾಷಿ ನೌಕರರನ್ನು ನೇಮಿಸಲಾಯಿತು.

ಆಡಳಿತವನ್ನು ನೋಡಿಕೊಳ್ಳುವ ಸ್ಥಳೀಯ ಗೌಡ, ಕುಲಕರ್ಣಿ, ಸಾಹುಕಾರ, ದೇಶಪಾಂಡೆ ಮುಂತಾದವರಿಗೆ ಕನ್ನಡ ಭಾಷೆಯನ್ನು ಕಲಿಯಲು ಒತ್ತಾಯಿಸಲಾಯಿತು. ಇವರಿಗೆ ಕನ್ನಡ ಭಾಷೆ ಮಾತನಾಡಲು ಮಾತ್ರ ಬರುತ್ತಿತ್ತು. ಬರೆಯಲು ಮೋಡಿ ಲಿಪಿಯನ್ನು ಬಳಸುತ್ತಿದ್ದರು. ಈ ಪ್ರಕ್ರಿಯೆಯಿಂದ 'ಮೂರು ವರ್ಷಗಳ ಅವಧಿಯಲ್ಲಿ ಸುರಪುರ, ಶಹಪುರ, ಯಾದಗಿರಿ, ಗುಲಬರ್ಗಾ, ಮಹಾಗಾಂವ, ಚಿಂಚೋಳಿ ಮತ್ತು ಸೇಡಂ ತಾಲೂಕುಗಳ ಗೌಡ, ಕುಲಕರ್ಣಿಯರು ಕನ್ನಡವನ್ನು ಕಲಿಯಬೇಕೆಂದು ಅಪ್ಪಣೆ ಕೊಡಲಾಯಿತು'' ಆದರೆ ಇದು ಸುಗಮವಾಗಿ ಜಾರಿಗೆ

ಬರಲಿಲ್ಲ. ಈ ಬದಲಾವಣೆಗಳು ಆಡಳಿತಾತ್ಮಕವಾಗಿ ಅಡ್ಡಿಯನ್ನುಂಟುಮಾಡಿ ವಿಳಂಬಕ್ಕೆ ದಾರಿಯಾಗುತ್ತದೆಂಬ ನೆಪ ಒಡ್ಡಿ ಕೈ ಬಿಡಲಾಯಿತು. ಇದಕ್ಕಾಗಿ ಶ್ರಮಿಸಿದ ಸುಭೇದಾರರನ್ನು ವರ್ಗಾವಣೆ ಮಾಡಲಾಯಿತು. ಉರ್ದು ಭಾಷೆ ಆಡಳಿತದಲ್ಲಿ ಮುಂದುವರೆಯಿತು. ಒಂದು ವೇಳೆ ಈ ಯೋಜನೆ ಜಾರಿಯಾಗಿದ್ದರೆ ಅನೇಕ ಜಿಲ್ಲಾ ಪ್ರದೇಶಗಳಲ್ಲಿ ಕನ್ನಡ ಭಾಷೆ ೧೯ನೆಯ ಶತಮಾನದಲ್ಲಾದರೂ ಪುನಃ ಜೀವತುಂಬಿಕೊಂಡು ಬೆಳೆಯುತ್ತಿತ್ತು. ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಸಹಾಯವಾಗುತ್ತಿತ್ತು.

**೪.೪. ಕನ್ನಡ ಅಭಿಮಾನ ಮತ್ತು ಶೈಕ್ಷಣಿಕ ಭಾಷೆಯಾಗಿ ಉರ್ದುವಿನ ಹೇರಿಕೆ**

ವಸಾಹತುಶಾಹಿಯ ಪ್ರಭಾವದಿಂದ 'ಆಧುನಿಕತೆ' ಭಾರತವನ್ನು ಪ್ರವೇಶಿಸತೊಡಗಿದಂತೆ ವಿದ್ಯಾವಂತರಿಗೆ ಪಶ್ಚಿಮದ ಜ್ಞಾನ ಲಭ್ಯವಾಗತೊಡಗಿತು. ಕ್ರಮೇಣ ಅದು ಹಳ್ಳಿಗಳಿಗೂ ವ್ಯಾಪಿಸಿತು. ಮೈಸೂರು, ಮಂಗಳೂರು, ಬೆಂಗಳೂರು, ಧಾರವಾಡ ಮುಂತಾದ ಪ್ರದೇಶಗಳಲ್ಲಿ ಆಧುನಿಕ ಶಿಕ್ಷಣಕ್ಕೆ ಅವಕಾಶ ದೊರೆಯತೊಡಗಿದವು. ಕಲಿಯಲು ಅವಕಾಶವಿದ್ದವರು ಇಂಗ್ಲೀಶ್ ಶಿಕ್ಷಣವನ್ನು ಪಡೆಯುವುದರ ಮೂಲಕ ಹೊಸ ಜ್ಞಾನವನ್ನು ಕನ್ನಡಕ್ಕೆ ತರಲಾರಂಭಿಸಿದರು. ಆದರೆ ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ನಿಜಾಮ್ ಆಳ್ವಿಕೆಯಿದ್ದ ಕಾರಣ ಉರ್ದು ಭಾಷೆ ಆಡಳಿತದ ಭಾಷೆಯಾಗಿತ್ತು. ಪ್ರಾರಂಭದಲ್ಲಿ ಫಾರಸಿ ಭಾಷೆಯಿತ್ತು. ನಂತರ ಉರ್ದು ಪ್ರವರ್ಧಮಾನಕ್ಕೆ ಬಂದಿತು. ಇದರಿಂದಾಗಿ ಇಂಗ್ಲೀಶ್ ಕಲಿಕೆಯಿಂದ ದೊರೆಯಬಹುದಾಗಿದ್ದ ಪಶ್ಚಿಮದ ಹೊಸ ಜ್ಞಾನವು ಈ ಭಾಗದ ವಿದ್ಯಾವಂತರಿಗೆ ದೊರೆಯಲಿಲ್ಲ. ಕರ್ನಾಟಕದ ಇತರ ಭಾಗಗಳಾದ ಮೈಸೂರು, ಕರಾವಳಿ, ಮುಂಬೈ ಭಾಗಗಳು ಪಶ್ಚಿಮದ ಹೊಸ ಜ್ಞಾನದಿಂದ ಎಲ್ಲ ಕ್ಷೇತ್ರಗಳಲ್ಲಿ ಮುಂದುವರಿದರೆ, ಇಂದಿಗೂ ಹೈದರಾಬಾದ್ ಕರ್ನಾಟಕ ಭಾಗವು ಅದರಿಂದ ವಂಚಿತವಾಗಿ ಮುನ್ನೆಲೆಗೆ ಬರಲು ಪ್ರಯತ್ನಿಸುತ್ತಿರುವುದನ್ನು ಕಾಣಬಹುದು. ರಾಜಕೀಯ ಇಚ್ಛಾಶಕ್ತಿ ಇದ್ದರೆ ಏನನ್ನಾದರೂ ಸಾಧಿಸಬಹುದು ಎನ್ನುವುದಕ್ಕೆ ಉರ್ದು ಭಾಷೆಯೇ ನಿದರ್ಶನವಾಗಿದೆ.

ನಿಜಾಮರ ಆಡಳಿತದಲ್ಲಿ ಶಿಕ್ಷಣವನ್ನು ಉರ್ದು ಮಾಧ್ಯಮದಲ್ಲಿ ನಡೆಸಲಾಯಿತು. ಉನ್ನತ ಶಿಕ್ಷಣವನ್ನೂ ಉರ್ದು ಮಾಧ್ಯಮದಲ್ಲಿ ನಡೆಸಲು ನಿಜಾಮ್ ಸರಕಾರ ಶ್ರಮಿಸಿತು. ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಶಿಕ್ಷಣವನ್ನು ಕಲಿಯಲು ಅವಕಾಶವಿದ್ದ ವಿದ್ಯಾರ್ಥಿಗಳೆಲ್ಲ ಉರ್ದುವಿನಲ್ಲೇ ಶಿಕ್ಷಣವನ್ನು ಪಡೆಯಲಾರಂಭಿಸಿದರು. ಉನ್ನತ ಶಿಕ್ಷಣವನ್ನು ಅದೇ ಮಾಧ್ಯಮದಲ್ಲಿ ಓದಿ ಮುಗಿಸುವ ಅಗತ್ಯಕ್ಕೆ ಹೊಂದಿಕೊಂಡರು. ಬೀದರ್, ಗುಲಬರ್ಗಾ ಜಿಲ್ಲಾ ಪ್ರದೇಶಗಳಲ್ಲಿ ಪ್ರಾರಂಭದ ಶಿಕ್ಷಣವನ್ನು ಮರಾಠಿಯಲ್ಲಿ ಪ್ರಾರಂಭ ಮಾಡಿ ನಂತರ ಉರ್ದು ಮಾಧ್ಯಮದಲ್ಲಿ ಮುಂದುವರಿದರೆ ರಾಯಚೂರು, ಕೊಪ್ಪಳ ಭಾಗಗಳಲ್ಲಿ ಪ್ರಾರಂಭದಲ್ಲಿ ಕನ್ನಡ ಅಕ್ಷರ ಕಲಿತರೂ ನಂತರ ಉರ್ದು ಮಾಧ್ಯಮದಲ್ಲಿ ಮುಂದುವರಿಯುವುದು ಅನಿವಾರ್ಯವಾಗಿತ್ತು. ಆಡಳಿತದಲ್ಲಿ ಉದ್ಯೋಗಾವಕಾಶಗಳನ್ನು ಪಡೆಯಲು ಬಯಸುವ ವಿದ್ಯಾರ್ಥಿಗಳು ಉರ್ದು ಮಾಧ್ಯಮದಲ್ಲಿ ಶಿಕ್ಷಣವನ್ನು ಕಲಿಯಲು ಹಿಂಜರಿಯುತ್ತಿರಲಿಲ್ಲ. ಉರ್ದುವಿನಲ್ಲಿ ಕಲಿತು ಮಾತಾಡುವುದು ಕನ್ನಡ

ಭಾಷಿಕ ವಿದ್ಯಾರ್ಥಿಗಳಿಗೆ ಹೆಮ್ಮೆಯ ಸಂಗತಿಯಾಗಿತ್ತು. ಇಂಗ್ಲೀಶ್ ಭಾಷೆಯ ಮೇಲಿನ ಅಭಿಮಾನವೂ ಇದೇ ಆಗಿದೆ.

ದೇಶಭಾಷೆ ಮತ್ತು ಸಂಸ್ಕೃತಿಯ ಮೇಲೆ ಅಭಿಮಾನವಿದ್ದ ಮನೆತನಗಳಲ್ಲಿ ಉರ್ದು ಕಲಿಕೆಯ ಬಗ್ಗೆ ಗೊಂದಲವಿತ್ತು. ಕನ್ನಡದಲ್ಲಿ ಶಿಕ್ಷಣ ಪಡೆಯಲು ಅವಕಾಶಗಳಿರಲಿಲ್ಲ. ಮಠಗಳಲ್ಲಿ ಕನ್ನಡ ಕಲಿಕೆಗೆ ಅವಕಾಶವಿದ್ದರೂ ಅದು ಕೇವಲ ಅಭಿಮಾನದ ಕಲಿಕೆಯಾಗಿತ್ತು. ಅದರಿಂದ ಹೆಚ್ಚಿನ ಅನುಕೂಲಗಳಿರಲಿಲ್ಲ. ಖ್ಯಾತ ಸಂಶೋಧಕರಾದ ಕಪಟರಾಳ್ ಕೃಷ್ಣರಾವ್ ಅವರು ಕನ್ನಡ ಕಲಿಯಲು ಇಚ್ಛಿಸಿದಾಗ ಬಣಜಿಗರಂತೆ 'ಕನ್ನಡೇನು ಕಲೀತಿ'[೫] ಎಂಬ ಪ್ರಶ್ನೆಯನ್ನು ಎದುರಿಸಬೇಕಾಯಿತೆಂದು ತಿಳಿಯುತ್ತದೆ. ಇದರಿಯೀ ಭಾಗದ ಆರಂಭದ ಕನ್ನಡ ಭಾಷೆ ಬಣಜಿಗರ-ಲಿಂಗಾಯತರ ಭಾಷೆಯಾಗಿತ್ತು ಎಂಬುದು ತಿಳಿಯುತ್ತದೆ. ಜಯತೀರ್ಥ ರಾಜಪುರೋಹಿತರು ಉನ್ನತ ಅಧಿಕಾರಿಗಳಾಗಿ ಬೀದರ ಜಿಲ್ಲೆಗೆ ವರ್ಗವಾಗಿ ಹೋದಾಗಲೂ ಬೀದರಿನಲ್ಲಿ ಬ್ರಾಹ್ಮಣರು ಮರಾಠಿ ಭಾಷಿಕರಾಗಿದ್ದರು. ಕನ್ನಡದಲ್ಲಿ ಮಾತನಾಡಿದರೆ 'ನೀವು ವಾಣಿ ಜನರೇನ್ರೀ'.[೬] ಎಂದು ಕೇಳುತ್ತಿದ್ದರಂತೆ. ವಾಣಿ ಜನರೆಂದರೆ ಬಣಜಿಗರು ಎಂದರ್ಥ. ಭಾಲಚಂದ್ರ ಜಯಶೆಟ್ಟಿಯವರು ಮರಾಠಿಯಲ್ಲಿ ಶಿಕ್ಷಣವನ್ನು ಪ್ರಾರಂಭಿಸಿ, ಹೆಚ್ಚಿನ ಶಿಕ್ಷಣವನ್ನು ಉರ್ದು ಮಾಧ್ಯಮದಲ್ಲಿ ಕಲಿಯುವ ಸಂದರ್ಭ ಬಂದಾಗ, ಕನ್ನಡಾಭಿಮಾನಿ ಮರಾಠಿ ಶಿಕ್ಷಕರೊಬ್ಬರು ಕನ್ನಡದಲ್ಲಿ ಅಭ್ಯಾಸ ಮಾಡಲು ಒತ್ತಾಯಿಸಿದರಂತೆ. ಇವರು ನಿರಾಕರಿಸಿದಾಗ, 'ನೀನು ಕನ್ನಡ ಕಲೀದಿದ್ರೆ ಬಸವಣ್ಣನವರ ವಚನಗಳನ್ನು ಯಾರು ಓದಬೇಕು?'[೭] ಎಂದು ಶಿಕ್ಷಕರು ಆಕ್ರೋಶಗೊಂಡರಂತೆ. ಇದರಿಂದ ವಚನಗಳನ್ನು ಓದುವುದಕ್ಕಾಗಿಯಾದರೂ ಕನ್ನಡವನ್ನು ಕಲಿಯಬೇಕಾಗಿತ್ತು. ಈ ಕಾರಣದಿಂದಾಗಿ ಕನ್ನಡ ಕಲಿಕೆ ಅಥವಾ ಭಾಷೆ ಲಿಂಗಾಯತರ ಮನೆಯಲ್ಲಿ, ಮಠದಲ್ಲಿ ಜೀವ ಹಿಡಿದು ಉಳಿದಿತ್ತು.

**೪.೫. ಹೈದರಾಬಾದ್ ಕರ್ನಾಟಕ ಮತ್ತು ಆಧುನಿಕ ಕನ್ನಡ ಸಾಹಿತ್ಯ**

ಸ್ವಾತಂತ್ರ್ಯಪೂರ್ವದಲ್ಲಿ ಮೈಸೂರು ಸಂಸ್ಥಾನ, ಮುಂಬಯಿ ಕರ್ನಾಟಕ, ಮದರಾಸು ಕರ್ನಾಟಕ ಮತ್ತು ಕೊಡಗು ಈ ಪ್ರಾಂತ್ಯಗಳ ಸ್ಥಿತಿಗಿಂತ ಹೈದರಾಬಾದ್ ಕರ್ನಾಟಕ ಸ್ಥಿತಿ ಭಿನ್ನವಾಗಿತ್ತು. ಕರ್ನಾಟಕದ ಈ ಪ್ರಾಂತ್ಯಗಳಲ್ಲಿ ಬ್ರಿಟೀಶರ ಮತ್ತು ಸ್ಥಳೀಯ ಅರಸರ ಆಳ್ವಿಕೆಯಿತ್ತು. ಪರಂಪರಾಗತ ಸಂಸ್ಕೃತಿಯ ಮುಂದುವರಿಕೆಗೆ ಯಾವ ಅಡ್ಡಿಗಳಿರಲಿಲ್ಲ. ಬಿಟೀಶರ ವಸಾಹತು ವ್ಯವಸ್ಥೆಯಿಂದ ಆಧುನಿಕತೆ ಸಮಾಜದಲ್ಲಿ ಮೂಡುತ್ತಿದ್ದರಿಂದ ಬದಲಾವಣೆಯ ಪ್ರಕ್ರಿಯೆಗೂ ಜನರು ಸ್ಪಂದಿಸತೊಡಗಿದರು. ಆದರೆ ಹೈದರಾಬಾದ್ ಕರ್ನಾಟಕ ಪ್ರಾಂತ್ಯ ನಿಜಾಮರ ಅಧೀನದಲ್ಲಿದ್ದರಿಂದ ಪರಕೀಯ ಭಾಷೆ ಮತ್ತು ಸಂಸ್ಕೃತಿಯೇ ಅಲ್ಲಿತ್ತು. ಕನ್ನಡಿಗರ ಭಾಷೆ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ಅಲ್ಲಿ ಅನೇಕ ಅಡ್ಡಿ ಅತಂಕಗಳು ಇದ್ದವು. ಮೈಸೂರು ಸಂಸ್ಥಾನದಲ್ಲಿ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಯ ಬೆಳವಣಿಗೆಗೆ ದೇಸಿ ಆಳರಸರ ಪ್ರೋತ್ಸಾಹವಿತ್ತು. ಅಂಥ ವಾತಾವರಣವು ನಿಜಾಮ್ ಪ್ರಾಂತ್ಯದಲ್ಲಿ ಎಂದೋ ಮಾಯವಾಗಿ ಹೋಗಿತ್ತು. ಪರಂಪರಾಗತ

ಜ್ಞಾನಕ್ಕೂ ಹೊಸ ಜ್ಞಾನ ಪಡೆಯುವುದಕ್ಕೂ ಅವಕಾಶಗಳು ಬೇರೆ ಪ್ರಾಂತ್ಯಗಳಲ್ಲಿದ್ದಂತೆ ಹೈದರಾಬಾದ್ ಕರ್ನಾಟಕ ಪ್ರಾಂತ್ಯಕ್ಕೆ ಇರಲಿಲ್ಲ. ಈ ಶತಮಾನದ ಆದಿಯಲ್ಲಿ ಬ್ರಿಟೀಶರ ವಸಾಹತುಶಾಹಿ ಆಡಳಿತದಿಂದ ಪಶ್ಚಿಮ ದೇಶಗಳಿಗೆ ಸಂಪರ್ಕ ಸಾಧ್ಯವಾಗಿ ಹೊಸ ಚಿಂತನ ಕ್ರಮಗಳು ಲಭ್ಯ ವಾಗತೊಡಗಿದವು. ಇದರಿಂದಾಗಿ ಅನೇಕ ಕ್ಷೇತ್ರಗಳಲ್ಲಿ ಹೊಸ ವಾತಾವರಣ ಮೂಡಿ ಹೊಸ ಚಿಂತನೆಗಳು ಹುಟ್ಟಿಕೊಂಡವು. ಸಾಹಿತ್ಯ, ಕಲೆಗಳಿಗೂ ಇದು ಪ್ರೇರಕವಾಯಿತು. ಇಂಥ ಹೊಸಗಾಳಿ ಹೈದರಾಬಾದ್ ಕರ್ನಾಟಕ ಪ್ರಾಂತ್ಯದೊಳಗೆ ಬರಲು ಸಾಧ್ಯವಾಗಲಿಲ್ಲ. ಈ ಪ್ರಾಂತ್ಯದ ಒಡಲೊಳಗೆ ಅನೇಕ ಸಮಸ್ಯೆಗಳು, ಆತಂಕ, ತಲ್ಲಣಗಳು ಇದ್ದವು.

ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟ ತೀವ್ರವಾದಾಗ ಈ ಪ್ರಾಂತ್ಯದಲ್ಲಿ ನಿಜಾಮ್ ಶಾಹಿ ವಿರುದ್ಧ ಹೋರಾಟ ತೀವ್ರವಾಗತೊಡಗಿತು. ಕನ್ನಡ ಕಲಿಕೆ ಅಧಿಕೃತವಾಗಿ ನಡೆಯಲು ಅವಕಾಶಗಳೇ ಇರಲಿಲ್ಲ. ನೆರೆಯ ಮುಂಬೈ ಕರ್ನಾಟಕದಲ್ಲಿ ಕನ್ನಡ ಮಾಧ್ಯಮ ಶಾಲೆಗಳು ಪ್ರಾರಂಭವಾಗಿ ಒಂದು ಶತಮಾನ ಕಳೆದರೂ ಈ ಪ್ರಾಂತ್ಯದಲ್ಲಿ ಅದು ಸಾಧ್ಯವಾಗಲಿಲ್ಲ. ಕನ್ನಡ ಕಲಿಕೆ ಬಗ್ಗೆ ಹೋರಾಟ ನಡೆಸಬೇಕಾಗಿತ್ತು. ಮಠಗಳಲ್ಲಿ ಬಿಟ್ಟರೆ ಕನ್ನಡ ಅಕ್ಷರ ಕಲಿಕೆ ಬಹಿರಂಗವಾಗಿ ನಡೆಸಲಾಗುತ್ತಿರಲಿಲ್ಲ. ಭಾಲ್ಕಿಯಂಥ ಮರಾಠಿಮಯ ಪ್ರದೇಶದಲ್ಲಿ ಚೆನ್ನಬಸವ ಪಟ್ಟದ್ದೇವರು ಕನ್ನಡದ ಮೇಲಿನ ಅಭಿಮಾನದಿಂದ ಹೊರಗೆ ಉರ್ದು ಮಾಧ್ಯಮ ಶಾಲೆಯ ಬೋರ್ಡು ಹಾಕಿ ಒಳಗೆ ಕನ್ನಡ ಅಕ್ಷರಗಳನ್ನು ಮಕ್ಕಳಿಗೆ ತಿಳಿಸುವ, ತೀಡಿಸುವ ಕೆಲಸ ಮಾಡುತ್ತಿದ್ದರು. ಕನ್ನಡ ಕಲಿಕೆ ಕೇವಲ ಅಭಿಮಾನದ ಪ್ರಶ್ನೆಯಾಗಿರಲಿಲ್ಲ. 'ಕನ್ನಡತನ'ವನ್ನು ಪುನಃ ಸೃಷ್ಟಿಸುವ ಜವಾಬ್ದಾರಿಯು ಇಂಥ ಪ್ರಯತ್ನಗಳಲ್ಲಿ ಕಾಣುತ್ತದೆ.

ಸ್ವಾತಂತ್ರ್ಯಪೂರ್ವದಲ್ಲಿ ಈ ಪ್ರಾಂತ್ಯದಲ್ಲಿ ಶಿಕ್ಷಣ ಸಂಸ್ಥೆಗಳು ಪ್ರಾರಂಭವಾದರೂ ಅವುಗಳಲ್ಲಿ ಅಧಿಕೃತ ಭಾಷೆ ಉರ್ದು ಮತ್ತು ಸ್ಥಳೀಯಭಾಷೆ ಮರಾಠಿಯಲ್ಲಿ ಕಲಿಕೆ ನಡೆಸುತ್ತಿದ್ದರು. ಗುಲಬರ್ಗಾದಲ್ಲಿ ಪ್ರಾರಂಭವಾದ 'ನೂತನ ವಿದ್ಯಾಲಯ'ದಂಥ ಶಿಕ್ಷಣ ಸಂಸ್ಥೆಯಲ್ಲಿ ಮರಾಠಿ, ಉರ್ದು ಭಾಷೆಗಳಿಗೆ ಒಲಿದು ಬಿಟ್ಟಿದ್ದರು. ಪೇಶ್ವೆಯರ ಕಾಲದಲ್ಲಿ ಮರಾಠಿ ಸಂಸ್ಕೃತಿಗೆ ಒಲಿದು ನಂತರ ಅದನ್ನೇ ಮುಂದುವರಿಸಿದ್ದರಿಂದ ೨೦ನೆಯ ಶತಮಾನದ ಆರಂಭದ ದಶಕಗಳಲ್ಲಿ ಗುಲಬರ್ಗಾ ಭಾಗದಲ್ಲಿ ಕನ್ನಡ ವಾತಾವರಣಕ್ಕೆ ಅಡ್ಡಿಯನ್ನುಂಟು ಮಾಡಿದರು. ಇಂಥ ಸಂದರ್ಭದಲ್ಲಿ ಕನ್ನಡಿಗರಿಗೆ ಪೂರಕವಾದ ಇತಿಹಾಸವನ್ನು ನಿರ್ಮಿಸಿ ಕನ್ನಡವನ್ನು ಮುಂಚೂಣಿಗೆ ತಂದು ಪೋಷಿಸುವುದು ಕಷ್ಟದ ಕೆಲಸವಾಗಿತ್ತು. ಅತ್ತ ಅದೇ ಸಮಯದಲ್ಲಿ ಬೀದರ್ ಜಿಲ್ಲಾ ಪ್ರದೇಶ ಆಂಧ್ರಕ್ಕೆ ಸೇರುತ್ತದೆಂಬ ಕೂಗು ಕೇಳಿಸಲಾರಂಭಿಸಿತು. ಈ ಎರಡು ಸಂಗತಿಗಳಿಗಿಂತ ಭಯಾನಕವಾದ ಸಂಗತಿಯೆಂದರೆ 'ಹೈದರಾಬಾದ್ ಸಂಸ್ಥಾನ'ವೇ ಪ್ರತ್ಯೇಕವಾಗಿ 'ಮುಸ್ಲೀಂ ಸಂಸ್ಥಾನ'ವಾಗಿ ನಿಲ್ಲುತ್ತದೆಂಬ ಘೋಷಣೆ, ಪ್ರಾಂತ್ಯ ವಿಭಜನೆಯ ಕೂಗು ಈ ಪ್ರದೇಶದ ಜನ ಸಮುದಾಯಗಳನ್ನು ತಲ್ಲಣಗೊಳಿಸಿದೆ. ಆಧುನಿಕ ಕನ್ನಡ ಸಾಹಿತ್ಯ ಚಿಗುರುವ ಸಂದರ್ಭದಲ್ಲಿ ಈ ಪ್ರಾಂತ್ಯದಲ್ಲಿ ಇಂಥ ಸಮಸ್ಯೆಗಳ ಸುಳಿಯಲ್ಲಿ ಪ್ರಜ್ಞಾವಂತರು ಸಿಕ್ಕುಬಿದ್ದಿದ್ದರು. ಆದರೂ

ಕನ್ನಡ ಭಾಷೆ–ಸಾಹಿತ್ಯಾಭಿಮಾನಿ ವಿದ್ಯಾರ್ಥಿಗಳೂ ಇಂಥ ಆತಂಕಗಳ ನಡುವೆಯೂ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿದ್ದರು. ಇಂತಹ ಚಟುವಟಿಕೆಗಳಲ್ಲಿ ರಾಯಚೂರು, ಕೊಪ್ಪಳ ಪ್ರದೇಶದ ವಿದ್ಯಾರ್ಥಿಗಳು ಮುಂಚೂಣಿಯಲ್ಲಿದ್ದರು.

ಈ ಪ್ರಾಂತ್ಯದ ವಿದ್ಯಾರ್ಥಿಗಳೆಲ್ಲ ಹೆಚ್ಚಿನ ಶಿಕ್ಷಣಕ್ಕಾಗಿ ಹೈದರಾಬಾದ್ ನಗರಕ್ಕೆ ಹೋಗಬೇಕಾಗಿತ್ತು. ಬೀದರ್, ಗುಲಬರ್ಗಾ, ರಾಯಚೂರು ಜಿಲ್ಲಾ ಪ್ರದೇಶಗಳ ವಿದ್ಯಾರ್ಥಿಗಳು ಉನ್ನತ ಶಿಕ್ಷಣಕ್ಕೆ ಹೋಗುವ ಮುನ್ನವೆ ಉರ್ದು, ಮರಾಠಿ, ಹಿಂದಿ, ಇಂಗ್ಲೀಷ್, ತೆಲುಗು, ಕನ್ನಡ ಮುಂತಾದ ಬಹುಭಾಷಾ ಜ್ಞಾನವನ್ನು ಹೊಂದಬೇಕಾಗಿತ್ತು. ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಿಗೆ ಇದು ಕಷ್ಟಸಾಧ್ಯವಾಗಿತ್ತು. ಈ ಭಾಷೆಗಳ ಜ್ಞಾನ ಬಹುತೇಕ ಪಠ್ಯ ಪುಸ್ತಕಗಳಿಗೆ ಸೀಮಿತವಾಗಿತ್ತು. ಇದರಿಂದ ಸಾಹಿತ್ಯ ಚಟುವಟಿಕೆಗಳಾಗಲಿ, ಸಾಹಿತ್ಯಿಕ ಬರವಣಿಗೆಗಳಾಗಲಿ ತೀವ್ರ ಸ್ವರೂಪದಲ್ಲಿ ಕಾಣಿಸಲಿಲ್ಲ. ಸಾಹಿತ್ಯದ ಅಧ್ಯಯನವು ಶಿಕ್ಷಣದಿಂದ ಹೊರಗುಳಿದಿತ್ತು. ಡಿ.ಕೆ. ಭೀಮಸೇನರಾವ್ ಅವರಂಥವರು ಕನ್ನಡ ಎಂ.ಎ. ಪದವಿಯನ್ನು ಮೈಸೂರು ವಿಶ್ವವಿದ್ಯಾಲಯದಿಂದ ಪಡೆಯಬೇಕಾಯಿತು. ಸಿದ್ಧಯ್ಯ ಪುರಾಣಿಕರು, ಜಯತೀರ್ಥ ರಾಜಪುರೋಹಿತರು ಕನ್ನಡ ಸಾಹಿತ್ಯವನ್ನು ಶಿಕ್ಷಣದ ಮೂಲಕ ಪಡೆದವರಲ್ಲ. ಸಾಹಿತ್ಯಾಸಕ್ತಿಯಿಂದ ಪಡೆದವರು. ಕನ್ನಡ ಸಾಹಿತ್ಯಾಧ್ಯಯನವು ಶಿಕ್ಷಣದಲ್ಲಿ ಕಲಿಯಲು ಹೈದರಾಬಾದ್ ನಗರದಲ್ಲಿ ಅವಕಾಶಗಳಿರಲಿಲ್ಲ. ಇದರಿಂದಲೂ ಸಾಹಿತ್ಯ ಕೃಷಿ ತೀವ್ರಗತಿಯಲ್ಲಿ ಕಾಣಿಸಿಕೊಳ್ಳಲಾಗಲಿಲ್ಲ.

ಮೈಸೂರು, ಮಂಗಳೂರು, ಧಾರವಾಡ ಜಿಲ್ಲಾ ಪ್ರದೇಶಗಳಿಗೆ ಹೋಲಿಸಿದರೆ ಈ ಪ್ರದೇಶದಲ್ಲಿ ಅನೇಕ ಕಾರಣಗಳಿಂದ ಸಾಹಿತ್ಯ ಸೃಷ್ಟಿ ಕುಂಠಿತವಾಗಿತ್ತು. 'ಕನ್ನಡದಲ್ಲಿ ನವೋದಯ ಕವಿಗಳು ಕಾವ್ಯ ರಚಿಸುತ್ತಿರುವಾಗ ಬೀದರ್ ಜಿಲ್ಲೆಯಲ್ಲಿ ಕನ್ನಡ 'ಅ, ಆ' ತೀಡುವ ಕೆಲಸ ಪ್ರಾರಂಭವಾಗುತ್ತದೆ' ಎಂಬ ಮಾತು ಉತ್ಪ್ರೇಕ್ಷೆಯದ್ದಲ್ಲ. ಈ ಮಾತು ಬೀದರ್, ಗುಲಬರ್ಗಾ ಜಿಲ್ಲಾ ಪ್ರದೇಶಗಳಿಗೆ ಹೆಚ್ಚು ಅನ್ವಯಿಸುತ್ತದೆ. ಈ ಜಿಲ್ಲೆಗಳಿಗೆ ಹೋಲಿಸಿದರೆ ರಾಯಚೂರು ಜಿಲ್ಲಾ ಪ್ರದೇಶದಲ್ಲಿ ಸಾಹಿತ್ಯ ಚಟುವಟಿಕೆಗಳು, ಸಾಹಿತ್ಯ ವಾತಾವರಣ ಉತ್ತಮವಾಗಿತ್ತು. ಇದಕ್ಕೆ ಕಾರಣವೆಂದರೆ ಈ ಮೊದಲೇ ಪ್ರಸ್ತಾಪಿಸಿದಂತೆ ಕೃಷ್ಣಾ ನದಿಯ ಪ್ರದೇಶದಲ್ಲಿ ವಿಜಯನಗರ ಸಾಮ್ರಾಜ್ಯದ ಆಡಳಿತವಿದ್ದರಿಂದ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗೆ ಅವಸಾನ ಬಂದಿರಲಿಲ್ಲ. ದಾಸರು, ತತ್ವಪದಕಾರರು ಸಾಹಿತ್ಯವನ್ನು ಪೋಷಿಸಿಕೊಂಡಿದ್ದರು. ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಕೂಡ ರಾಯಚೂರು ಜಿಲ್ಲಾ ಪ್ರದೇಶದ ಕೊಡುಗೆ ಹೆಚ್ಚಿದೆ. (ಹೆಸರಿಸುವುದಾದರೆ ಡಿ.ಕೆ. ಭೀಮಸೇನರಾವ್, ಸಿದ್ಧಯ್ಯ ಪುರಾಣಿಕ, ಶಾಂತರಸ, ಜಯತೀರ್ಥ, ರಾಜಪುರೋಹಿತ, ಚನ್ನಬಸಪ್ಪ ಬೆಟ್ಟದೂರು, ದೇವೇಂದ್ರಕುಮಾರ ಹಕಾರಿ, ಪಂಚಾಕ್ಷರಿ ಹಿರೇಮಠ, ಶೈಲಜ ಉಡಚಣ, ಅಮರಚಿಂತ ಮುಂತಾದವರು). ಬೀದರ, ಗುಲಬರ್ಗಾ ಜಿಲ್ಲಾ ಪ್ರದೇಶದಲ್ಲಿ ಈ ಶತಮಾನದ ಮೊದಲ ಕಾಲುಭಾಗ ಕಳೆದರೂ ಹಿಂದಿನ ವಾತಾವರಣವಿರಲಿಲ್ಲ ಎಂಬುದಕ್ಕೆ ೧೯೨೬ರಲ್ಲಿ ಗುಲಬರ್ಗಾದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಬಿ.ಎಂ.ಶ್ರೀ ಹೇಳಿದ ಮಾತುಗಳೇ

ಸಾಕ್ಷಿ. ಅಧ್ಯಕ್ಷರಾಗಿದ್ದ ಅವರು 'ಕನ್ನಡ ನುಡಿಗೆ ಲಿಪಿಯುಂಟೆಂದೂ, ಒಳ್ಳೇ ಸಾಹಿತ್ಯವು ಸಾಹಿತಿಗಳುಂಟೆಂದು' ಹೇಳಿದರು. ಈ ಮಾತನ್ನು ಗಮನಿಸಿದ ಕಪಟರಾಳ ಕೃಷ್ಣರಾವ್ ಅವರು 'ಬಿ.ಎಂ.ಶ್ರೀ. ಅವರ ಭಾಷಣದಿಂದ ಕನ್ನಡ ಜನರ ಕಣ್ಣಿಗೆ ಅಂಜನ ಹಚ್ಚಿದಂತಾಯಿತು'' ಎಂದು ಅಭಿಪ್ರಾಯಪಡುತ್ತಾರೆ.

ಶಿಕ್ಷಣಕ್ಕಾಗಿ ಹೈದರಾಬಾದ್ ನಗರ ಸೇರಿದ ಸಾಹಿತ್ಯಾಸಕ್ತ ವಿದ್ಯಾರ್ಥಿಗಳು ಅನೇಕ ಬಿಕ್ಕಟ್ಟುಗಳನ್ನು ಎದುರಿಸಬೇಕಾಗಿತ್ತು. ಹೈದರಾಬಾದಿನಲ್ಲಿ ಉರ್ದು ಮತ್ತು ಆ ಭಾಷೆಯ ಜನಾಂಗದವರ ಮಧ್ಯ ಬದುಕಬೇಕಾಗಿತ್ತು. ಬ್ರಿಟೀಶರ ಪ್ರಭುತ್ವವನ್ನು ನಿರಾಕರಿಸುವುದು ಎಂದರೆ ನಿಜಾಮ್ ಪ್ರಭುತ್ವವನ್ನು ತಿರಸ್ಕರಿಸಿದಂತೆ. ಇಲ್ಲನ ವಿದ್ಯಾರ್ಥಿಗಳಿಗೆ 'ಸ್ವಾತಂತ್ರ್ಯ ಹೋರಾಟ'ದಲ್ಲಿ ಪಾಲ್ಗೊಳ್ಳುವ ಉತ್ಸಾಹ ಒಂದು ಕಡೆಗಿದ್ದರೆ, ಶಿಕ್ಷಣವನ್ನು ಸುಗಮವಾಗಿ ಮುಗಿಸುವ ಆತಂಕ ಇನ್ನೊಂದು ಕಡೆಗೆ ಒಂದೇ ರೀತ ಕಾಡುತ್ತಿತ್ತು. ಅಭಿಮಾನದಿಂದ ಕನ್ನಡ ಸಾಹಿತ್ಯ ಚಟುವಟಿಕೆಗಳನ್ನು ನಡೆಸುವುದಕ್ಕೆ ಈ ವಿದ್ಯಾರ್ಥಿಗಳಿಗೆ ಅಷ್ಟು ಸ್ವಾತಂತ್ರ್ಯ ಇರಲಿಲ್ಲ. ಇಂಗ್ಲೀಶ್ ಶಿಕ್ಷಣದಿಂದ ಪಶ್ಚಿಮದ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಅವಕಾಶಗಳು ಸುಲಭವಾಗಿ ಸಿಗಲಿಲ್ಲ.

ಮೈಸೂರು, ಧಾರವಾಡ ಪ್ರದೇಶಗಳಲ್ಲಿ ಉತ್ಸಾಹದಿಂದ ಪ್ರಾರಂಭವಾದ ಸಾಹಿತ್ಯ ಚಿಂತನೆಗಳು ಸಂಪರ್ಕ ಮಾಧ್ಯಮದ ಕೊರತೆಯಿಂದ ಈ ಪ್ರಾಂತ್ಯದವರಿಗೆ ದೊರೆಯಲಿಲ್ಲ. ಇವೆಲ್ಲಕ್ಕಿಂತ ಹೆಚ್ಚಾಗಿ ಈ ಪ್ರಾಂತ್ಯದ ಒಡಲೊಳಗೇ ಹುಟ್ಟಿಕೊಂಡ ಅನೇಕ ಬಿಕ್ಕಟ್ಟುಗಳನ್ನು ಎದುರಿಸುವುದರಲ್ಲೇ ಸಮಯ ವ್ಯಯವಾಗಿ ಹೋಯಿತು. ನಿಜಾಂ ಆಡಳಿತದ ಬೆಂಬಲಿಗರಾಗಿ ಹುಟ್ಟಿಕೊಂಡ ಮತೀಯ ಮನೋಧರ್ಮದ ರಜಾಕಾರರ ಹಾವಳಿಯಿಂದ ಈ ಪ್ರಾಂತ್ಯವು ಭಯದ ನೆರಳಿನಲ್ಲಿ ಮುಳುಗಿ ಹೋಯಿತು. ಇಂಥ ವಾತಾವರಣದ ನಡುವೆಯೂ ಹೈದರಾಬಾದ್ ಕರ್ನಾಟಕದ ಸಾಹಿತ್ಯದ ವಿದ್ಯಾರ್ಥಿಗಳು ಬಿ.ಎಂ.ಶ್ರೀ. ಅವರ ಸಂಪರ್ಕದಿಂದ ನವೋದಯ ಮಾರ್ಗದಲ್ಲಿ ನಡೆಯಲು ಪ್ರಯತ್ನಿಸಿದ್ದಾರೆ. ಅರವತ್ತರ ದಶಕದಲ್ಲಿ ಅ.ನ.ಕೃ.ಅವರ ಸಂಪರ್ಕದಿಂದ ಪ್ರಗತಿಶೀಲ ಸಾಹಿತ್ಯ ಚಳವಳಿಯಲ್ಲಿ ನಡೆಯಲು ಪ್ರಯತ್ನಿಸಿದ್ದಾರೆ. ವಿನಾಯಕರ ಸಂಪರ್ಕದಿಂದ ನವ್ಯ ಸಾಹಿತ್ಯ ರಚನೆಗೆ ಒಲಿದಿದ್ದಾರೆ. ಆದರೆ ಇವರ ನಡಿಗೆಯೆಲ್ಲ ಬಾಲ ನಡಿಗೆಯಾಯಿತು. ಇಲ್ಲಿನ ಚರಿತ್ರೆಯು ಅದನ್ನು ಸಹಜ ಎಂಬಂತೆ ಮಾಡಿದೆ.

ಈ ಪ್ರಾಂತ್ಯದಲ್ಲಿ ಸಾಹಿತ್ಯ ಚಟುವಟಿಕೆಗಳು ಸಂಘಟನಾತ್ಮಕವಾಗಿ ಅಷ್ಟಾಗಿ ನಡೆಯಲಿಲ್ಲ. ಹೈದರಾಬಾದ್ ನಗರದ ಅನೇಕ ಆತಂಕಗಳ ನಡುವೆ ಕಲಿತ ಸಾಹಿತ್ಯಾಸಕ್ತ ವಿದ್ಯಾರ್ಥಿಗಳು ನಂತರ ಬೇರೆ ಬೇರೆ ಭಾಗಗಳಿಗೆ ಉದ್ಯೋಗಾವಕಾಶ ಪಡೆದು ಹೋದರು. ಹೋದವರಲ್ಲಿ ಅನೇಕರು ಬೇರೆ ಬೇರೆ ಸಮಸ್ಯೆಗಳಲ್ಲಿ ಮುಳುಗಿದರು. ಸಿದ್ಧಯ್ಯ ಪುರಾಣಿಕರು, ಜಯತೀರ್ಥ ರಾಜಪುರೋಹಿತರು ಅಧ್ಯಾಪಕರಾಗದೆ ಆಡಳಿತಾತ್ಮಕ ಉನ್ನತ ಹುದ್ದೆಗಳಿಗೆ ಸೇರಿಕೊಂಡಿದ್ದರಿಂದ ಇಂಥವರಿಗೆ ಸಾಹಿತ್ಯ ಚಟುವಟಿಕೆಗಳನ್ನು ಸಂಘಟನಾತ್ಮಕವಾಗಿ ನಡೆಸಲು ಅವಕಾಶ, ಅನುಕೂಲಗಳಿರಲಿಲ್ಲ. ಇವರೆಲ್ಲ ವ್ಯಕ್ತಿಗತ ಅಧ್ಯಯನದಿಂದ ಅವಕಾಶ ಮಾಡಿಕೊಂಡು

ಸಂಘಟನಾತ್ಮಕವಾಗಿಯೂ ಸಾಹಿತ್ಯ ಕೃಷಿ ಮಾಡಿದರು. ಅಧ್ಯಾಪಕರಾಗಿ ಡಿ.ಕೆ. ಭೀಮಸೇನರಾವ್, ಶಾಂತರಸ, ಮಾನ್ವಿ ನರಸಿಂಗರಾವ್ ರಂತವರು ಸಂಘಟನಾತ್ಮಕವಾಗಿ ದುಡಿದು ಈ ಪ್ರಾಂತ್ಯದಲ್ಲಿ ಸಾಹಿತ್ಯ ವಾತಾವರಣವನ್ನು ಮೂಡಿಸಲು ಪ್ರಯತ್ನಿಸಿದರು. ಸ್ವಾತಂತ್ರ್ಯಪೂರ್ವ, ಸ್ವಾತಂತ್ರ್ಯೋತ್ತರ ಕಾಲದಲ್ಲಿ ಶಾಂತರಸರು 'ಮುಸುಕು ತೆರೆ', 'ಬೆನ್ನ ಹಿಂದಿನ ಬೆಳಕು' ಕೃತಿಗಳ ಸಂಗ್ರಹಗಳೇ ಅವರ ಸಂಘಟನಾತ್ಮಕ ಪ್ರಯತ್ನಗಳಿಗೆ ನಿದರ್ಶನಗಳಾಗಿವೆ. ಪ್ರಕಾಶಕರ ಕೊರತೆ ಮತ್ತು ಅವಕಾಶಗಳಿಲ್ಲದಾಗ ಸ್ವತಃ 'ಸತ್ಯಸ್ನೇಹ ಪ್ರಕಾಶನ'ದಿಂದ ಅನೇಕ ಕವಿಗಳನ್ನು ಸಾಹಿತ್ಯ ಲೋಕಕ್ಕೆ ಪರಿಚಯಿಸಿದರು. ಇಂಥ ಪ್ರಯತ್ನಗಳು ಕಿರು ಧಾರೆಯಂತೆ ಕಾಣಿಸಬಹುದು. ಆದರೆ ಈ ಪ್ರಾಂತ್ಯದ ಚರಿತ್ರೆಯಲ್ಲಿ ಈ ಪ್ರಯತ್ನಗಳ ಸಾಧನೆ ದೊಡ್ಡದೇ ಆಗಿದೆ.

ಆಧುನಿಕ ಕನ್ನಡ ಸಾಹಿತ್ಯವು ಮುಖ್ಯವಾಗಿ ಕಾವ್ಯ, ಕಥೆ, ಕಾದಂಬರಿ ಪ್ರಕಾರಗಳಲ್ಲಿ ಕಾಣಿಸಿಕೊಂಡಿತು. ಈ ಸಾಹಿತ್ಯ ಪ್ರಕಾರಗಳಲ್ಲಿ ಕಥೆ, ಕಾದಂಬರಿ, ನಾಟಕ ಮುಂತಾದವು ಪಶ್ಚಿಮದ ಕೊಡುಗೆಗಳೇ. 'ಕಾವ್ಯ ಪ್ರಕಾರ' ನಮ್ಮದಾದರೂ ಆಧುನಿಕ ಕಾವ್ಯ ಹೊಸ ರೂಪದಲ್ಲೇ ಬೆಳೆಯಿತು. ನವ್ಯ ಕಾವ್ಯ ಪ್ರಕಾರದಲ್ಲಿ ಆಧುನಿಕ ಮಹಾಕಾವ್ಯಗಳು ಒಡಮೂಡಿದವು. ಆದರೆ ನವೋದಯ ಕಾವ್ಯವು ಮಾತ್ರ ಪಶ್ಚಿಮದ 'ಕಾವ್ಯರೂಪ'ದಲ್ಲೇ ಹುಟ್ಟಿದೆ. ಈ ಸಾಹಿತ್ಯ 'ರೂಪ'ಗಳ ಪ್ರಸ್ತಾಪ ಯಾಕೆ ಬಂತೆಂದರೆ, ಆಧುನಿಕ ಕನ್ನಡ ಸಾಹಿತ್ಯವು ಈ ಸಾಹಿತ್ಯ ರೂಪಗಳಲ್ಲೇ ಬೆಳೆಯಿತು. ಆಧುನಿಕ ಸಾಹಿತಿಗಳು ತಮ್ಮ ಪ್ರತಿಭೆಯನ್ನು ಅನನ್ಯತೆಯನ್ನು ಕಥೆ, ಕಾದಂಬರಿ, ಕಾವ್ಯ, ನಾಟಕ, ಲಲಿತ ಪ್ರಬಂಧ ಮುಂತಾದ ಸಾಹಿತ್ಯ ಪ್ರಕಾರಗಳ ಮೂಲಕ ಸಾಹಿತಿಗಳು ತಮ್ಮ ಪ್ರತಿಭೆಯ ಅನನ್ಯತೆಗೆ ಈ ಸಾಹಿತ್ಯ ಪ್ರಕಾರಗಳನ್ನು ದುಡಿಸಿಕೊಂಡರು.

ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಆಧುನಿಕ ಕನ್ನಡ ಸಾಹಿತ್ಯಿಕ ಸಂದರ್ಭದಲ್ಲಿ ಕೂಡ ಅನೇಕ ಸಾಹಿತಿಗಳು ಈ ಸಾಹಿತ್ಯ ಪ್ರಕಾರಗಳಲ್ಲೇ ಬರೆಯಲು ತೊಡಗಿದರು. ಆದರೆ ಸಿದ್ಧಯ್ಯ ಪುರಾಣಿಕ ಮತ್ತು ಚೆನ್ನಣ್ಣ ವಾಲೀಕಾರ ಅವರ ಬೆಳವಣಿಗೆಯನ್ನು ಈ ಹೊತ್ತಿನಲ್ಲಿ ನಿಂತು ನೋಡಿದರೆ ಆಶ್ಚರ್ಯವೆನಿಸುತ್ತದೆ. ಇಬ್ಬರದು ಒಂದೊಂದು ತುದಿ. ಸಿದ್ಧಯ್ಯ ಪುರಾಣಿಕರು ವಚನ ಪರಂಪರೆಯ ಮುಂದುವರಿಕೆ ಆಗಲಿಲ್ಲ. ಬದಲಾಗಿ ವಚನ ಸಂಪ್ರದಾಯದಲ್ಲಿ ಸಾಗಿದರು. ಅದೇ ರೀತಿ ಚೆನ್ನಣ್ಣ ವಾಲೀಕಾರರು ಜನಪದ ಸಾಹಿತ್ಯ ರೂಪಗಳಲ್ಲಿ ಕಾವ್ಯ ರಚಿಸುತ್ತ ಜನಪದ ಸಾಹಿತ್ಯ ಸಂಪ್ರದಾಯದಲ್ಲಿ ಸಾಗಿದ್ದಾರೆ. ಪ್ರಧಾನವಾಗಿ ಈ ಇಬ್ಬರು ಸಾಹಿತ್ಯ ರಚನೆ ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಬೆಳೆಯದೆ 'ವಚನ' ಮತ್ತು 'ಜಾನಪದ' ಪ್ರಕಾರಗಳಲ್ಲಿ ಬೆಳೆದಿದೆ. ಇದರಿಂದ ಒಂದು ಬಗೆಯಲ್ಲಿ 'ಸಂಪ್ರದಾಯ'ದಲ್ಲಿ ನಿಂತರೇ ಹೊರತು 'ಪರಂಪರೆ'ಯಲ್ಲಿ ಸೇರಿಕೊಳ್ಳಲಿಲ್ಲ ಅನಿಸುತ್ತದೆ. ಸಂಪ್ರದಾಯದಲ್ಲೇ ಸಾಗಿ ಅನನ್ಯತೆಯನ್ನು ಪ್ರಕಟಿಸಿರುವರು ಎಂಬ ಪ್ರಶ್ನೆ ಬೇರೆ. ವಚನ ಪರಂಪರೆಯು 'ಸಂಕ್ರಾಂತಿ' (ಲಂಕೇಶ್), 'ಮಹಾಚೈತ್ರ' (ಶಿವಪ್ರಕಾಶ), 'ಕುಸುಮ ಬಾಲೆ' (ದೇವನೂರು)ಯಲ್ಲಿ ಕಾಣಿಸಿದೆ. ಜಾನಪದ ಪರಂಪರೆಯು ಬೇಂದ್ರೆಯವರ ಕಾವ್ಯ, ಕಂಬಾರರ ಕಾವ್ಯದಲ್ಲಿ ಕಾಣಿಸಿದೆ ಎಂಬ ಚರ್ಚೆಗಳು ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ

ನಡೆಯುತ್ತಿವೆ. ಶಾಂತರಸ, ಜಯತೀರ್ಥ ರಾಜಪುರೋಹಿತ, ಗೀತಾ ನಾಗಭೂಷಣ, ಚಂದ್ರಕಾಂತ ಕುಸನೂರ, ವೀರೇಂದ್ರ ಸಿಂಪಿ, ಜಂಬಣ್ಣ, ಅಮರಚಿಂತ, ಶಿವಶರಣ ಪಾಟೀಲ್ ಜಾವಳಿ, ಶೈಲಜಾ ಉಡಚಣ ಮುಂತಾದವರು ಆಧುನಿಕ ಸಾಹಿತ್ಯವನ್ನು ಆಧುನಿಕ ಪ್ರಕಾರಗಳಲ್ಲಿ ರಚಿಸಿರುವುದು ಉಚಿತವೆನಿಸುತ್ತದೆ. ಈ ದೃಷ್ಟಿಯಿಂದ ಈ ಪ್ರಾಂತ್ಯದಲ್ಲಿ ಆಧುನಿಕ ಸಾಹಿತ್ಯವು ಅನೇಕ ಸಾಂಸ್ಕೃತಿಕ ತೊಡಕುಗಳ ನಡುವೆಯೂ ನಿಧಾನವಾಗಿ ಹೆಜ್ಜೆಯಿಡುತ್ತಾ ನಡೆದು ಬಂದಿದೆ.

ಸ್ವಾತಂತ್ರ್ಯಪೂರ್ವದಲ್ಲಿ ಈ ಪ್ರಾಂತ್ಯದ ಕನ್ನಡವು ಲಿಂಗಾಯತರ ಮನೆಯಲ್ಲಿ, ಮಠಗಳಲ್ಲಿ ಜೀವ ಹಿಡಿದು ಉಳಿದಿತ್ತೆಂದು ಈಗಾಗಲೇ ತಿಳಿದುಕೊಳ್ಳಲಾಗಿದೆ. ಆದುದರಿಂದ ಅದು ಮುಂದೆ ಪುರಾಣ, ಶಾಸ್ತ್ರ, ತತ್ವಪದ, ವಚನ ಮುಂತಾದ ಸಾಹಿತ್ಯ ಸೃಷ್ಟಿಗೆ ಕಾರಣವಾಯಿತು. ಇಲ್ಲಿ ಉದಯಿಸಿರುವ ತತ್ವಪದ ಸಾಹಿತ್ಯಕ್ಕೆ, ಪುರಾಣ ಸಾಹಿತ್ಯಕ್ಕೆ, ವಚನ ಸಾಹಿತ್ಯಕ್ಕೆ ಮಠಮಾನ್ಯಗಳಲ್ಲಿ ಉಳಿದ ಭಾಷೆಯೇ ಪ್ರೇರಣೆಯಾಯಿತು. ಜನಸಾಮಾನ್ಯರಲ್ಲಿ, ಓಣಿ, ಸಂತೆಗಳಲ್ಲಿ ಉಳಿದ ಕನ್ನಡ ಭಾಷೆಯು ಪುನಃ ಈ ಹೊತ್ತಿನ ಕಥೆ ಕಾದಂಬರಿಗಳಲ್ಲಿ ಕಾಣಿಸಿಕೊಂಡಿದೆ. ಈ ಎಲ್ಲ ಬೆಳವಣಿಗೆಯ ಹಿನ್ನೆಲೆಯಲ್ಲಿ ಸಿದ್ಧಯ್ಯ ಪುರಾಣಿಕರು 'ವಚನ'ಗಳನ್ನು ಬರೆದಿರುವುದು, ಚೆನ್ನಣ್ಣ ವಾಲೀಕಾರ 'ಬೆಳ್ಯ' ಬರೆದಿರುವುದು ಆಕಸ್ಮಿಕವೂ ಅಲ್ಲ. ಸ್ವಾತಂತ್ರ್ಯಪೂರ್ವದಲ್ಲಿ ಈ ಪ್ರಾಂತ್ಯದಲ್ಲಿ ಜಯತೀರ್ಥ ರಾಜಪುರೋಹಿತ, ಜಿ.ಕೆ. ಪ್ರಾಣೇಶಾಚಾರ್ಯ, ರಾಘವೇಂದ್ರಾಚಾರ್ಯ (ಇರಾ) ಇಟಗಿ, ಮುತ್ತು ರಂಗಸ್ವಾಮಿ–(ಮುತ್ತುಗಾರ ಮಕ್ಕಳ ಕವಿ), ವೆಂಕಟೇಶ, ಶಿ.ಭಾ. ಶಾಸ್ತ್ರಿ, ಅಕ್ಕ ಕಟ್ಟಿ, ಸೀತಾರಾಮ ಜಾಗಿರದಾರ, ಹ.ಕೃ.ಕಮತಗಿ, ಮಾನ್ವಿ ನರಸಿಂಗರಾಯ, ರಾಮಚಂದ್ರ, ಹರಟೆಮಲ್ಲ, ರಾ.ಪ್ರ.ದೀ, ಸಿದ್ಧಯ್ಯ ಪುರಾಣಿಕರು (ಕಾವ್ಯಾನಂದ), ಕಲಾನಂದ ಗೂಗಲ್ಲು, ವಿ.ಎಂ. ಗುಂಡಾರಾಧ್ಯ, ಶಾಂತರಸ ಹೆಂಬೆರಾಳು, ಶಿವಲೆಂಕ ರಾಯಚೂರು, ಎಂ. ಶಿವಯ್ಯ, ಮಲ್ಲಿಕಾರ್ಜುನ ಮಸ್ಕಿ, ಚನ್ನಬಸಪ್ಪ ಬೆಟ್ಟದೂರು (ಅಮರಾನಂದ), ಡಿ.ಕೆ. ಭೀಮಸೇನರಾವ್, ಹೇಮಂತ, ಭೀಮಸೇನರಾವ್ ತವಗ, ಶ್ಯಾಮಸುಂದರ ಕವಿಗಳು, ನಾಭಾ ಶಾಸ್ತ್ರಿ, ಶ್ರೀಶರಣ, ಗ.ಭಾ, ಸೋಮೇಶಸಖ, ಅ.ಶ್ರೀ. ಮದಲಗಟ್ಟಿ, ಎಚ್.ಜೆ. ಉಪಾಧ್ಯಾಯ, ರವಿ, ಜ.ಶ್ರೀ. ಜರಕುಂಟಿ (ಜ.ಶ್ರೀ.ಜ), ವೆಂಕಯ್ಯ ಕವಿಗಳು, ಮನ್ಸಬ್ದಾರ, ಇಂದಿರೇಶ, ರಾಘವೇಂದ್ರ ಕುಲಕರ್ಣಿ (ರಾ.ಗು), ಮೃತ್ಯುಂಜಯ ಶಾಸ್ತ್ರಿಮಠ, ಶರಣುಬಸವ ಪಾಟೀಲ್ ಜಾವಳಿ, ಗೀತಾನಂದ, ಬಸವಲಿಂಗ ಇಟ್ಟಗಿ, ರಂ.ರಾ. ನಿಡಗುಂದಿ, ಕುಲಕರ್ಣಿ ವೆಂಕಟೇಶ, ಅಬ್ಬಿಗೇರಿ ವಿರೂಪಾಕ್ಷಪ್ಪ, ಮುಂತಾದ ಕವಿಗಳ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ.

ಅಲ್ಲದೆ ಕತೆಗಾರರಾದ ಎ.ಬಿ. ಮುತ್ತಾಳ, ದೇವೇಂದ್ರಕುಮಾರ ಹಕಾರಿ, ನರಸಿಂಹ, ಕುಮಾರಿ ಸುಶೀಲಾ ಬಾಡಗಂಡಿ, ಕುಸುಮಾಕರ ದೇಸಾಯಿ, ಶ್ರೀಮತಿ ವಾಗೀಶ್ವರಿ ನಾರಾಯಣ, ಎಚ್.ಬಿ. ಕುಲಕರ್ಣಿ, ಎಸ್.ಜಿ. ಬಿರಾದರ, ಎನ್. ಶ್ಯಾಮಪ್ರಸಾದ್ ಮುದಗಲ್, ಕೃಷ್ಣರಾಯ ನಿಲೋಗಲ್ಲು, ಶ್ರೀಮತಿ ವಿಮಲಾಬಾಯಿ ಮೇಲ್ಕೋಟೆ (ನಮ್ಮ ನಾಡಿನ ಸ್ತ್ರೀಯರ ಶಿಕ್ಷಣ), ಆಶ್ರಿತ (ಗೋಪಾಲ ಆಶ್ರಿತ), ಜಿ.ಕೆ. ಸಾಗರ, ಲಿಂಗಸಗೂರು ವಿಠ್ಠಲರಾಯ, ರಾಘವೇಂದ್ರ,

ಕುಮಾರಿ ನೀಲಾ, ಪಂಚಾಕ್ಷರಿ ಹಿರೇಮಠ, ರಾಮರಾವ್ ಕುಲಕರ್ಣಿ, ಕಿಕ್ಕೇರಿ ಹನುಮಂತರಾಯ, ರುಕ್ಮಿಣಿಕಂದ, ಶ್ರೀಪತಿ ಸರನಾಡ, ದತ್ತಾತ್ರೇಯರಾವ್ ಹೇರೂರು, ಭೀಮರಾವ್ ಮಾಸ್ತರ, ಉಕ್ಲಿ ಕುಪ್ಪಣ್ಣ, ವೆಂಕೋಬಾಚಾರ್ ಕಿನ್ನಾಳ್, ರಾಘವೇಂದ್ರ ಕುಷ್ಟಗಿ, ಬುದ್ದಿವಂತ ಸೆಟ್ಟರು, ಗುರಾಚಾರ ಬಾಡಿ, ಸುಗೂರುವೀರಶರ್ಮ ಮೊದಲಾದವರು ತಮ್ಮ ಅಭಿವ್ಯಕ್ತಿಯನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತ ಪಡಿಸಿದರು. ಇವರ ಕೆಲವೇ ಕೆಲವು ಕಾವ್ಯ, ಕತೆಗಳು, ನಾಟಕಗಳು ಈಗ ಲಭ್ಯವಾಗಿವೆ. ಪ್ರಕಟಿಸಲು ಪ್ರಕಾಶಕರ ಕೊರತೆ, ಸರಿಯಾದ ಮಾರ್ಗದರ್ಶನಗಳಿಲ್ಲದೆ ಇಲ್ಲಿನ ಸಾಹಿತ್ಯ ಕುಂಠಿತ ಗೊಳ್ಳಲು ಕಾರಣವಾಯಿತು. ಸಿಕ್ಕಿರುವ ಕೇಲವೇ ಕೆಲವು ಸಾಹಿತ್ಯ ಪ್ರಕಾರಗಳಿಂದ ಅವುಗಳಲ್ಲಿನ ಒಟ್ಟು ಅಂತರ್ಯವನ್ನು ಅರಿಯುವ, ಅದರಲ್ಲಿ ಅಡಗಿರುವ ತುಡಿತವನ್ನು ಹುಡುಕುವ ಮತ್ತು ಈ ಭಾಗದ ಸಾಹಿತ್ಯಿಕ ಅನನ್ಯತೆಯನ್ನು ಗುರುತಿಸುವ ಪ್ರಯತ್ನ ಈ ಅಧ್ಯಯನದಲ್ಲಿ ಮಾಡಲಾಗಿದೆ. ಮಠಗಳಲ್ಲಿ ಉಳಿದ ಕನ್ನಡ (ಗ್ರಾಂಥಿಕ ಸ್ವರೂಪದ್ದು) ಮತ್ತು ಓಣಿ, ಸಂತೆಗಳಲ್ಲಿ ಉಳಿದ ಕನ್ನಡ (ಆಡು ಮಾತಿನ ಸ್ವರೂಪದ್ದು) ಭಾಷೆಯನ್ನು ಇವರೆಲ್ಲ ತಮ್ಮ ಕಾವ್ಯ, ಕಥೆ, ನಾಟಕ, ಹರಟೆ ಹಾಗೂ ಪ್ರಬಂಧಗಳಲ್ಲಿ ಬಳಸಿರುವುದು ಕಂಡುಬರುತ್ತದೆ.

ಈ ಪ್ರಾಂತ್ಯದಲ್ಲಿ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕನ್ನಡ ಕಲಿಕೆ ಮತ್ತು ಕನ್ನಡ ಭಾಷೆಯ ಅಭಿವೃದ್ಧಿಗೆ ತೊಡಕಾದ ಎರಡು ಸಮಸ್ಯೆಗಳು ಮುಖ್ಯವಾಗಿ ಕಾಣುತ್ತದೆ. ಈ ಪ್ರಾಂತ್ಯಕ್ಕೆ ೧೯೪೮, ಸೆಪ್ಟೆಂಬರ್ ೧೭ಕ್ಕೆ ರಾಜಕೀಯ ಸ್ವಾತಂತ್ರ್ಯ ಬಂದ ಮೇಲೆ ಉರ್ದು ಮಾಧ್ಯಮದ ಶಾಲೆಗಳು ಕಡಿಮೆಯಾದವು. ಕನ್ನಡ ಮಾಧ್ಯಮ ಶಾಲೆಗಳು ಪ್ರಾರಂಭವಾದವು ಎಂಬುದು ಸಂತಸದ ಸಂಗತಿಯಾಗಿದೆ. ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾದ ಮೇಲೆ ಈ ಪ್ರಾಂತ್ಯಕ್ಕೆ ಜೀವ ಬಂದಂತಾಯಿತು. ಸ್ವಾತಂತ್ರ್ಯಪೂರ್ವದಲ್ಲಿ ಅಕ್ಷರ ಕಲಿಯಲು ಸಾಧ್ಯವಿದ್ದ ಬಹುತೇಕ ಕುಟುಂಬಗಳ ಸದಸ್ಯರು ಉರ್ದು, ಮರಾಠಿ ಮತ್ತು ತಕ್ಕಮಟ್ಟಿಗೆ ಇಂಗ್ಲೀಶ್ ಭಾಷೆಯನ್ನು ಬಲ್ಲವರಾಗಿದ್ದರು. ಸ್ವಾತಂತ್ರ್ಯಾ ನಂತರ ಈ ಕುಟುಂಬಗಳ ಸದಸ್ಯರು ಕನ್ನಡ ಭಾಷೆ ಕಲಿಕೆಗೆ ಮುಂದಾಗಲಿಲ್ಲ. ಇಂಥ ಪೀಳಿಗೆಯ ಜನರು ಉರ್ದು, ಮರಾಠಿ ಭಾಷೆಗಳಲ್ಲೇ ತಮ್ಮ ವ್ಯವಹಾರಗಳನ್ನು ಮುಂದುವರಿಸಿದರು. ಅದರಿಂದಾಗಿ ಅನ್ಯ ಭಾಷೆಯ ಅನೇಕ ಪದಗಳು ಕನ್ನಡದಲ್ಲಿ ಬಂದಿವೆ. ಈ ಮನೋಧರ್ಮ ಬೀದರ, ಗುಲಬರ್ಗಾ ಜಿಲ್ಲಾ ಪ್ರದೇಶದಲ್ಲಿ ಹೆಚ್ಚು ಕಾಣಿಸಿತು. ಈ ತಲೆಮಾರಿನ ಜನರು ಬಹುಬೇಗ ಕನ್ನಡ ಭಾಷಾಭಿಮಾನವನ್ನು ಬೆಳೆಸಿಕೊಳ್ಳಲಿಲ್ಲ. ಬೆಳೆಸಿಕೊಳ್ಳುವ ಅಗತ್ಯವೇ ಅವರಿಗೆ ಕಾಣಿಸಲಿಲ್ಲ. ಆದರೆ ಈ ತಲೆಮಾರಿನವರು ತಮ್ಮ ಮಕ್ಕಳಿಗೆ ಇಂಗ್ಲೀಶ್ ಕಲಿಸಲು ನೋಡಿದರೇ ಹೊರತು ಕನ್ನಡ ಕಲಿಯಲು ಪ್ರೇರೇಪಿಸಿದಂತೆ ಕಾಣುವುದಿಲ್ಲ.

ಸಾಮಾನ್ಯವಾಗಿ ಈ ಹೊತ್ತಿನ ಸಂದರ್ಭದಲ್ಲಿ 'ಜಾಗತೀಕರಣ' ಪ್ರಕ್ರಿಯೆಯಿಂದ ಇಂಗ್ಲೀಶ್ ಭಾಷೆಯೇ ಅಧಿಕೃತ ಭಾಷೆಯೆಂಬ ತಿಳುವಳಿಕೆಗೆ ಬಹಳ ಜನರು ಬಂದಿದ್ದಾರೆ. ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ಬಹುತೇಕ ಕುಟುಂಬಗಳು ಇಂಗ್ಲೀಶ್ ಮಾಧ್ಯಮದಲ್ಲಿ ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಸಂಭ್ರಮದಿಂದ ಕೊಡಿಸುತ್ತಿದ್ದಾರೆ. ಇಂಗ್ಲೀಶ್ ಮಾಧ್ಯಮ ಶಾಲೆಗಳು ಗ್ರಾಮಾಂತರ

ಪ್ರದೇಶಗಳಲ್ಲಿಯೂ ತಲೆ ಎತ್ತುತ್ತಿರುವ ಈ ಹೊತ್ತಿನಲ್ಲಿ ದುಡಿದು ಬದುಕುವ ಕುಟುಂಬದವರೂ ತಮ್ಮ ಮಕ್ಕಳನ್ನು ಇಂಗ್ಲೀಶ್ ಮಾಧ್ಯಮ ಶಾಲೆಗೆ ಕಳಿಸಲು ಹಾತೊರೆಯುತ್ತಿದ್ದಾರೆ. ಈ ಪ್ರಕ್ರಿಯೆಯಿಂದ ಗ್ರಾಮಾಂತರ ಪ್ರದೇಶದ ಮಕ್ಕಳಲ್ಲಿಯೂ ಕನ್ನಡ ಕಲಿಕೆಯ ಬಗ್ಗೆ ಉತ್ಸಾಹ ಮಾಯವಾಗುತ್ತಿದೆ. ಕನ್ನಡ ಕಲಿಕೆಯ ಬಗ್ಗೆ ಯಾವುದೇ ಆಡಳಿತ ರೂಢ ಸರಕಾರವು 'ರಾಜಕೀಯ ಇಚ್ಛಾಶಕ್ತಿ'ಯನ್ನು ಪ್ರಯೋಗಿಸಲಾಗಿಲ್ಲ. ಇಂಥ ಬಿಕ್ಕಟ್ಟುಗಳಿಂದ ಈ ಪ್ರಾಂತ್ಯದಲ್ಲಿ ಕನ್ನಡ ಭಾಷೆ ಬಿಡುಗಡೆಯಾಗುವ ಯಾವ ಸೂಚನೆಗಳು ಕಂಡುಬರುತ್ತಿಲ್ಲ. ಆಂಧ್ರ, ಮಹಾರಾಷ್ಟ್ರಗಳ ಗಡಿಗೆ ಈ ಪ್ರಾಂತ್ಯ ಹೊಂದಿಕೊಂಡು ಇರುವುದರಿಂದ ಸಹಜವಾಗಿ ತೆಲುಗು, ಮರಾಠಿ ಭಾಷೆಗಳಲ್ಲೇ ಜನಸಾಮಾನ್ಯರು ದಿನನಿತ್ಯದ ವ್ಯವಹಾರ ನಡೆಸುತ್ತಾರೆ. ಕಳೆದ ಎರಡು ದಶಕಗಳಿಂದ ರಾಯಚೂರು ಜಿಲ್ಲೆಯ ಬಹುತೇಕ ತಾಲೂಕು ಪ್ರದೇಶಗಳಲ್ಲಿ ಆಂಧ್ರದ ಜನರು ನೆಲೆಗೊಂಡಿರುವುದರಿಂದ ಗಡಿಯಲ್ಲಿದ್ದ ತೆಲುಗು ಭಾಷೆಯು ಜಿಲ್ಲೆಯ ಒಳಗೆ ಸೇರಿಕೊಂಡಿದೆ. ಇವರ ಸಂಸ್ಕೃತಿ, ಭಾಷೆ ಸೇರಿದಂತೆ ಊಟ, ಉಡುಗೆಗಳು ಇಲ್ಲಿನ ಜನಸಾಮಾನ್ಯರಲ್ಲಿ ಅದರಲ್ಲೂ ಮುಖ್ಯವಾಗಿ ಕನ್ನಡಿಗರ ವ್ಯವಹಾರದಲ್ಲಿ ಸೇರಿಕೊಂಡಿವೆ.

ರಾಯಚೂರು ಜಿಲ್ಲೆಯ ಸಿಂಧನೂರು, ಮಾನ್ವಿ ಮತ್ತು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕುಗಳಲ್ಲಿ ಆಂಧ್ರದ ಜನರು ಬಂದು ಅಪಾರ ಪ್ರಮಾಣದಲ್ಲಿ ಭೂಮಿಯನ್ನು ಕೊಂಡು ಭೂ ಮಾಲೀಕರಾಗಿ ಬೆಳೆದಿದ್ದಾರೆ. ಇಲ್ಲಿಯ ಬಹುಸಂಖ್ಯಾತ ಕೆಳವರ್ಗದ ಜನರು ಈ ಆಂಧ್ರ ಭೂ ಮಾಲೀಕರ ಅಧೀನದಲ್ಲಿ ದುಡಿದು ಬದುಕುತ್ತಿದ್ದಾರೆ. ಹೀಗೆ ಭೂ ಮಾಲೀಕರ ಅಧೀನದಲ್ಲಿ ದುಡಿಯುವುದು ಕೇವಲ ಹೊಟ್ಟೆಪಾಡಿನ ಪರಿಸ್ಥಿತಿಯನ್ನು ತಿಳಿಸದೇ ಅವರ ಹತ್ತಿರ ದುಡಿಯುವುದರಿಂದ ಸಾಮಾಜಿಕವಾಗಿ ಅವರೊಂದಿಗೆ ಬೆರೆಯಬಹುದು. ಅದು ಒಂದು ಬಗೆಯ 'ಅಸ್ಪೃಶ್ಯತೆ'ಯನ್ನು ಕಳೆದುಕೊಳ್ಳುವಂತ ನಂಬಿಕೆ ಇದಕ್ಕೆ ಅಲ್ಲಿ ಹುಟ್ಟಿಕೊಂಡಿತ್ತು. ಹಾಗಾಗಿ ಜನರು ಇಲ್ಲಿ ಜಾತಿಯ ಕಟ್ಟುಪಾಡುಗಳಿಲ್ಲದೆ ಬೆರೆತು ದುಡಿಯುತ್ತಿದ್ದಾರೆ. ಇದು ಆಂಧ್ರದ ಸಂಸ್ಕೃತಿಯನ್ನು ಅನುಸರಿಸಲು ಕಾರಣವಾಗಿದೆ.

೧೩ನೇ ಶತಮಾನದಿಂದಲೇ ಈ ಪ್ರಾಂತ್ಯವು ಉತ್ತರದ ಅರಸರ ದಾಳಿಗೆ ಸಿಕ್ಕು ದುಸ್ಥಿತಿಗೆ ಈಡಾದ ಸ್ಥಿತಿಯನ್ನು ತಿಳಿದಿದ್ದೇವೆ. ಉತ್ತರದ ಅರಸರ ನಿರಂತರ ದಾಳಿ, ಆಳ್ವಿಕೆಯಿಂದಾಗಿ ಈ ಪ್ರಾಂತ್ಯವು ತನ್ನ ಭಾಷೆ, ಸಂಸ್ಕೃತಿಯನ್ನು ಕಳೆದುಕೊಂಡು ಸೊರಗಿತು. ಕನ್ನಡ ಭಾಷೆ ಕೇವಲ ಲಿಪಿರಹಿತವಾಗಿ ಜನಸಾಮಾನ್ಯರ ಬಾಯಿಮಾತಿನಲ್ಲಿ ಉಳಿಯಬೇಕಾಗಿತ್ತು. ಇದರಿಂದ ಈ ಪ್ರಾಂತ್ಯದಲ್ಲಿ ಲಿಖಿತ ಸಾಹಿತ್ಯ ಪರಂಪರೆಗೆ ತೊಡಕಾಯಿತು. ಆದರೆ ಮೌಖಿಕ ಸಾಹಿತ್ಯ ಪರಂಪರೆಯು ಸಮೃದ್ಧವಾಗಿ ಬೆಳೆಯಲು ಸಾಧ್ಯವಾಯಿತು. ಆದರೂ ಮಠಮಾನ್ಯಗಳಲ್ಲಿ ಉಳಿದಿದ್ದ ಕನ್ನಡ ಭಾಷೆಯಿಂದ ಪುರಾಣ, ಶಾಸ್ತ್ರಗ್ರಂಥಗಳು, ತಕ್ಕಮಟ್ಟಿಗೆ ಕಾವ್ಯಗ್ರಂಥಗಳೂ ಸೃಷ್ಟಿಯಾಗಿವೆ. ೨೦ನೇ ಶತಮಾನದ ಆದಿಯಲ್ಲಿ ಸಾಂಸ್ಕೃತಿಕ ಬಿಕ್ಕಟ್ಟುಗಳ ನಡುವೆಯೂ ಅನೇಕರು ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಯನ್ನು ಪುನರ್‌ಸ್ಥಾಪಿಸಲು ಶ್ರಮಿಸಿದ್ದಾರೆ. ಕಪಟರಾಳ್ ಕೃಷ್ಣರಾವ್

ಅವರಂಥ ವಿದ್ವಾಂಸರು ಈ ಪ್ರಾಂತ್ಯದಲ್ಲಿ ಹುಟ್ಟಿ ಕನ್ನಡ ಸಂಶೋಧಕರಾಗಿ ಬೆಳೆದದ್ದು ಪವಾಡವೆನಿಸುತ್ತದೆ. ಆಧುನಿಕ ಕನ್ನಡ ಸಾಹಿತ್ಯಿಕ ಸಂದರ್ಭದಲ್ಲಿ ಹೈದರಾಬಾದ್ ಕರ್ನಾಟಕದ ಕೊಡುಗೆಂ ಮೇಲು ನೋಟಕ್ಕೆ ಸಾಮಾನ್ಯವಾಗಿ ಕಾಣುತ್ತದೆ. ಆದರೆ ಈ ಪ್ರಾಂತ್ಯದ ಚರಿತ್ರೆಯ ಸಂಕಷ್ಟಗಳನ್ನು ನೋಡಿದರೆ ಕನ್ನಡದಲ್ಲಿ ಮಾತಾಡುವುದು, ಬರೆಯುವುದು ಒಂದು ಸಾಧನೆ ಎಂಬುದನ್ನು ಮರೆಯಲಾಗದು. ಈ ಪ್ರಾಂತ್ಯದ ಸಾಹಿತ್ಯವನ್ನು ಒಟ್ಟಾಗಿ ಗಮನಿಸಿದಾಗ ಸಾಹಿತ್ಯದ ಜೊತೆಗೆ ಭಾಷೇತರವಾದ ಸಂಗೀತ, ಚಿತ್ರಕಲೆ, ಶಿಲ್ಪಕಲೆ ಮುಂತಾದ ಕಲೆಗಳು ಈ ಪ್ರಾಂತ್ಯದಲ್ಲಿ ವಿಶಿಷ್ಟವಾಗಿ ಬೆಳೆದಿವೆ. ಸ್ವಾತಂತ್ರ್ಯಾ ನಂತರದಲ್ಲಿ ಕನ್ನಡ ಭಾಷೆ, ಸಾಹಿತ್ಯವು ಬೆಳೆಯುವ ಲಕ್ಷಣಗಳು ಕಂಡುಬಂದವು ಎಂಬುದು ನಿಜ. ಆದರೆ 'ಜಾಗತೀಕರಣ'ದ ಪ್ರಕ್ರಿಯೆಯಿಂದ ಈ ಪ್ರಾಂತ್ಯದಲ್ಲಿಯೂ ಕನ್ನಡ ಭಾಷೆಯ ಬೆಳವಣಿಗೆಗೆ ಅಷ್ಟಾಗಿ ಬೆಳವಣಿಗೆ ಆಗಿಲ್ಲವೆಂದೆ ಹೇಳಬಹುದಾಗಿದೆ.

**ಕೊನೆ ಟಿಪ್ಪಣಿಗಳು**

೧. ಕಪಟರಾಳ ಕೃಷ್ಣರಾವ್, ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಪು-೨೧೨.

೨. ಬಾಲಚಂದ್ರ ಜಯಶೆಟ್ಟಿ, ಸಮ್ಮೇಳನಾಧ್ಯಕ್ಷರ ಭಾಷಣ, ಪು-೯.

೩. ಕಪಟರಾಳ ಕೃಷ್ಣರಾವ್, ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಪು-೨೧೩.

೪. ಕಪಟರಾಳ ಕೃಷ್ಣರಾವ್, ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಪು-೨೧೭.

೫. ಕಪಟರಾಳ ಕೃಷ್ಣರಾವ್, ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಪು-೨೧೨.

೬. ಬಿ.ಬಿ ಹಂಪನಗೌಡ್ರು, (ಸಂ) ಜಯತೀರ್ಥ, ಪು-೩೫

೭. ಬಾಲಚಂದ್ರ ಜಯಶೆಟ್ಟಿ, ಸಮ್ಮೇಳನಾಧ್ಯಕ್ಷರ ಭಾಷಣ, ಪು-೨.

೮. ಕಾಶಿನಾಥ ಅಂಬಲಗೆ, ಚೆಂಬೆಲಗು, ಅಧ್ಯಕ್ಷೀಯ ಭಾಷಣ, ಪು-೧೩.

೯. ಕಪಟರಾಳ ಕೃಷ್ಣರಾವ್, ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಪು-೨೧೮.

ಅಧ್ಯಾಯ ೫

# ಮೌಖಿಕ ಸಾಹಿತ್ಯ ಪ್ರಕಾರಗಳ ತಾತ್ವಿಕ ಸಮೀಕ್ಷೆ

## ಅಧ್ಯಾಯ ೫

# ಮೌಖಿಕ ಸಾಹಿತ್ಯ ಪ್ರಕಾರಗಳ ತಾತ್ವಿಕ ಸಮೀಕ್ಷೆ

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಸಾಹಿತ್ಯವನ್ನು ಶಿಷ್ಟ ಸಾಹಿತ್ಯ, ಮೌಖಿಕ ಸಾಹಿತ್ಯವೆಂದು ವಿಂಗಡಿಸುವ ಪರಿಪಾಠವಿದೆ. ಶಿಷ್ಟ ಸಾಹಿತ್ಯವನ್ನು ಲಿಖಿತವೆಂದು, ಮೌಖಿಕ ಸಾಹಿತ್ಯವನ್ನು ಜಾನಪದವೆಂದು ಭಾವಿಸಲಾಗುತ್ತದೆ. ಜಾನಪದ ಒಂದು ವಿಶಾಲವಾದ ಕ್ಷೇತ್ರ. ಅದು ಭೂಮಿ ಮೇಲಿರುವ ಸಕಲ ವಿಷಯಗಳನ್ನೂ ಒಳಗೊಂಡಿದೆ. ಅದು ಚರಿತ್ರೆ, ಸಾಹಿತ್ಯ, ಸಮಾಜ, ಭಾಷಾಶಾಸ್ತ್ರ, ಮನಃಶಾಸ್ತ್ರ, ಇತ್ಯಾದಿ ವಸ್ತು ವಿಷಯಗಳ ವ್ಯಾಪ್ತಿಯನ್ನು ಹೊಂದಿದೆ. ಸಾಹಿತ್ಯ ಪರಂಪರೆಯಲ್ಲಿ ಅದನ್ನು 'ದೇಸಿ' 'ಮಾರ್ಗ' ಶೈಲಿ ಎಂದು ನೋಡುವ ವಾಡಿಕೆ ಇದೆ. ಈ ವಿಂಗಡನಾ ಕ್ರಮವು ಅಕ್ಷರಸ್ಥ, ಅನಕ್ಷರಸ್ಥ ಎಂಬ ಪರಿಕಲ್ಪನೆಯನ್ನು ನೀಡುತ್ತದೆ. ಲಿಖಿತ ಸಾಹಿತ್ಯವು ಕೇವಲ ಅಕ್ಷರಸ್ಥರಿಗೆ ಸೀಮಿತವಾದರೆ, ಮೌಖಿಕ ಸಾಹಿತ್ಯವು ಜನಸಾಮಾನ್ಯರಿಗೆ ಸೀಮಿತವೆಂಬ ಗ್ರಹಿಕೆ ಒಂದು ಕಾಲದಲ್ಲಿ ಇತ್ತು. ವಸಾಹತುಶಾಹಿಯ ಆಗಮನದಿಂದ ಮೌಖಿಕ ಸಾಹಿತ್ಯವು ಅಕ್ಷರ ರೂಪ ಪಡೆದು ಈ ತಾರತಮ್ಯವನ್ನು ಕೊನೆಗಾಣಿಸಿತು. ಮುಖ್ಯವಾಗಿ ಮೌಖಿಕ ಸಾಹಿತ್ಯದ ವ್ಯಾಪ್ತಿಯಲ್ಲಿ ತತ್ವಪದ ಸಾಹಿತ್ಯ, ಮೊಹರಂ ಪದ (ಅಲಾಯಿ ಹಾಡು), ಲಾವಣಿ ಪದ, ಸವಾಲ್ ಜವಾಬ್, ಗೀ ಗೀ ಪದ, ಕೋಲಾಟದ ಪದಗಳು, ಬುಲಾಯಿ ಹಾಡು, ಸಣ್ಣಾಟ, ದೊಡ್ಡಾಟ, (ಬಯಲಾಟಗಳು), ಬುರ್ರಕಥಾ, ಪುರಾಣಗಳು, ಇತ್ಯಾದಿ ಪ್ರಕಾರಗಳು ಬರುತ್ತವೆ. ವಿಭಿನ್ನ ಸಂಸ್ಕೃತಿಗಳು ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಮಿಳಿತವಾದುದರಿಂದ, ಪ್ರಭುತ್ವ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿನ ಓರೆಕೋರೆಗಳನ್ನು ಸರಿಪಡಿಸಲು ಮೌಖಿಕ ಸಾಹಿತ್ಯ ಪ್ರಕಾರಗಳು ಹೆಚ್ಚಾಗಿ ರಚಿತವಾಗಿವೆ. ಹೈದರಾಬಾದ್ ಕರ್ನಾಟಕದಲ್ಲಿ ಮೌಖಿಕ ಸಾಹಿತ್ಯವು ಶ್ರೀಮಂತಿಕೆಯ ಪರಂಪರೆಯನ್ನು ಹೊಂದಿದೆ. ಜನಸಾಮಾನ್ಯರ ಸಮಸ್ಯೆಗಳಿಗೆ

ಸ್ಪಂದಿಸಿದ ಮೌಖಿಕ ಸಾಹಿತ್ಯದಲ್ಲಿ ಕೆಲವು ಮುಖ್ಯವೆನಿಸುವ ಪ್ರಕಾರಗಳನ್ನು ತೆಗೆದುಕೊಂಡು ಅವುಗಳ ರಾಚನಿಕ ಸ್ವರೂಪ, ಬಳಕೆಯಾದ ವಸ್ತು, ಭಾಷೆ, ಅವುಗಳೊಂದಿಗಿನ ಪ್ರಾದೇಶಿಕ ಸಂಬಂಧ ಇತ್ಯಾದಿ ಅಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**೫.೧. ಸಣ್ಣಾಟ**

ಮಾನವ ಹಿಂದಿನ ಕಾಲದಲ್ಲಿ ಬೇಟೆಯಾಡಿ ಜೀವಿಸುತ್ತಿದ್ದ. ಬೇಟೆಯಲ್ಲಿನ ಅನುಭವಗಳನ್ನು ತನ್ನ ಆಂಗಿಕ ಚಲನೆಗಳಿಂದ ಇತರರ ಮುಂದೆ ಪ್ರಸ್ತುತ ಪಡಿಸುತ್ತಿದ್ದ. ಈ ಆಂಗಿಕ ನಟನೆಯೇ ನಾಟಕದ ಹುಟ್ಟಿಗೆ ಕಾರಣವೆನ್ನಬಹುದು. ಅವನು ತನ್ನ ನಟನೆಗೆ ವಾದ್ಯ, ಸಂಗೀತ, ಹಾಡುಗಳನ್ನು ಸೇರಿಸಿಕೊಂಡು ಅದಕ್ಕೊಂದು ಮೆರಗನ್ನು ನೀಡಿದ. ಮುಂದೆ ದಿನಗಳುರುಳಿದಂತೆ 'ಕಾಲ, ದೇಶ, ಪರಿಸ್ಥಿತಿ, ಸಂದರ್ಭ ಸನ್ನಿವೇಶಗಳಿಗನುಗುಣವಾಗಿ ಮನುಷ್ಯನ ಅಭಿರುಚಿಯೂ ಬದಲಾಯಿತು. ಅಭಿರುಚಿ ಬೆಳೆಯುತ್ತ ಹೊರಟಂತೆ ಮನರಂಜನ ವಿಧಾನವು ನಾನಾ ಮುಖ ತಾಳಿತು. ಗುಡ್ಡಗಾಡು ಜೀವಿಯಾಗಿದ್ದ ಮನುಷ್ಯ ತಾನು ಚಿತ್ರಿಸಿದ ಪಶು-ಪಕ್ಷಿ-ಪ್ರಾಣಿಗಳೇ ಗ್ರಾಮೀಣ ನೆಲೆಯಲ್ಲಿ ದೇವಾನುದೇವತೆಗಳ ಚಿತ್ರಗಳಾಗಿ ಬೆಳೆದು ಬಟ್ಟೆಯ ಮೇಲೆ ಅವನ್ನು ಬರೆಯಲಾಯಿತು. ಅವುಗಳನ್ನು ಊರೂರಿಗೆ ತೆಗೆದುಕೊಂಡು ಹೋಗಿ ತೋರಿಸಿ ಹಾಡಿ ಕುಣಿದು ವಾದ್ಯಬಾರಿಸಿ ಮನರಂಜನೆ ನೀಡುತ್ತ ಬಂದ ಪದ್ಧತಿ ಬೆಳೆಯುತ್ತ ಹೊರಟಿದ್ದು ಮುಂದೆ ತೊಗಲಗೊಂಬೆ ಆಟಕ್ಕೆ ಕಾರಣವಾಯಿತು'[೧] ರಾಮಾಯಣ, ಮಹಾಭಾರತದ ಕಥಾಪ್ರಸಂಗಗಳನ್ನು ತೆಗೆದುಕೊಂಡು ಬೀದಿ ಆಟಗಳನ್ನಾಗಿ ಆಡಲು ಪ್ರಾರಂಭಿಸಿದರು. ಇಂದು ಅವುಗಳನ್ನು ಬಯಲಾಟ ಅಥವಾ ಸಣ್ಣಾಟಗಳೆಂದು ಕರೆಯುತ್ತಾರೆ.

ವೇದ, ಉಪನಿಷತ್ತುಗಳ ಕಾಲದಲ್ಲಿ ಜನ ಮನರಂಜಿಸಲು ಮಂತ್ರ-ಸ್ತೋತ್ರಗಳನ್ನು ತಿಳಿಸಲು ಬದುಕಿನಲ್ಲಿರುವ ಪ್ರಸಂಗಗಳನ್ನೆತ್ತಿ ಹೇಳುತ್ತ ಕುಣಿದು, ಹಾಡಿ, ವಾದ್ಯ ಬಾರಿಸಿ ವಿವರಿಸುವಲ್ಲಿ ಸಣ್ಣಾಟದ ಸ್ವರೂಪವನ್ನು ಕಾಣುತ್ತೇವೆ. ಸಾಮಾನ್ಯ ಜನ ಬಯಲಾಟ, ರಂಗಭೂಮಿಯಲ್ಲಿ ಮರಂಜನೆ ಪಡೆದರೆ ಮೇಲ್ವರ್ಗದ ಜನ ರಾಜರ ಆಸ್ಥಾನದಲ್ಲಿ ನಡೆಯುವ ಗೀತ ನಾಟಕ, ನೃತ್ಯಗಳಲ್ಲಿ ಮನರಂಜನೆ ಪಡೆಯುತ್ತಿದ್ದರು. ಯುದ್ಧ, ರಾಜ್ಯಾಡಳಿತಳಿಂದ ಬೇಸತ್ತ ಅರಸರು ಮನಸ್ಸಂತೋಷಕ್ಕಾಗಿ ಆಸ್ಥಾನದಲ್ಲಿ ಗೀತಾಟಕಗಳನ್ನು ಏರ್ಪಡಿಸುತ್ತಿದ್ದರು. ಅವು ಪ್ರೀತಿ, ಪ್ರೇಮ, ಶೃಂಗಾರ, ಹಾಸ್ಯ, ವಿನೋಧಗಳನ್ನು ಒಳಗೊಂಡಿರುತ್ತಿದ್ದವು. ಸಾಮಾನ್ಯ ಜನ ದೈವಸಾಕ್ಷಾತ್ಕಾರಕ್ಕಾಗಿ ಭಕ್ತಿಪ್ರೇರಿತ ದೇವಿ ಆಟಗಳನ್ನು ಆಡುತ್ತಿದ್ದುದು ಪರಂಪರೆಯಲ್ಲಿ ಕಾಣುತ್ತೇವೆ. ನಮ್ಮ ಹಳಗನ್ನಡದ ಕವಿಗಳು ಪ್ರತ್ಯೇಕ ನಾಟಕ ನಿರ್ಮಿತಿ ಮಾಡದಿದ್ದರೂ ಅದನ್ನೇ ಬೇರೆ ರೀತಿಯಲ್ಲಿ ತಮ್ಮ ಕಾವ್ಯಗಳಲ್ಲಿ ಸೇರಿಸಿದ್ದನ್ನು ಕಾಣುಬಹುದು. ಉದಾಹರಣೆಗೆ ಕವಿರಾಜಮಾರ್ಗ, ವಡ್ಡಾರಾಧನೆ, ಧರ್ಮಾಮೃತ ಕಾವ್ಯಗಳು ಬೇರೆ ಬೇರೆ ಹೆಸರಿನಲ್ಲಿ ಈ ಬಯಲಾಟದ ಪ್ರಕಾರಗಳಿದ್ದವೆಂಬುದನ್ನು ತಿಳಿಯುತ್ತೇವೆ. ಬಯಲಾಟ ಮೂಲದಲ್ಲಿ ಹುಟ್ಟಿಕೊಂಡಿದ್ದು ದೇವಿಯ ಆರಾಧನೆಗಾಗಿ. ನಂತರ ಮಧ್ಯಕಾಲೀನ ಸಂದರ್ಭದಲ್ಲಿ ಅದು ವೃತ್ತಿಗೆ ತಿರುಗಿತು. ಇದರಿಂದ ವೃತ್ತಿಕಲೆ ಎನಿಸಿಕೊಂಡಿತು.

ಇಂಥವರಿಗೆ ಜಾತಗಾರರು, ಬಹುರೂಪಿಗಳೆನ್ನುವರು. ೧೨ನೇ ಶತಮಾನದಲ್ಲಿ ಬಹುರೂಪಿ ಚೌಡಯ್ಯ ಈ ಬಗೆಯ ಕಾರ್ಯ ನಡೆಸುತ್ತಿದ್ದುದು ತಿಳಿದುಬರುತ್ತದೆ.

ಹರಿಹರನ ರಗಳೆಗಳಲ್ಲಿ, ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ, ಜನ್ನನ ಯಶೋಧರ ಚರಿತೆಯಲ್ಲಿ, ಚಾಮರಸನ ಪ್ರಭುಲಿಂಗಲೀಲೆಯಲ್ಲಿ, ಕುಮಾರವ್ಯಾಸನ ಭಾರತದಲ್ಲಿ ನಾಟಕೀಯ ಅಂಶಗಳಿರುವುದನ್ನು ಕಾಣುತ್ತೇವೆ. ೧೫-೧೬ನೇ ಶತಮಾನದ ಸಂಕ್ರಮಣದ ಕಾಲದಲ್ಲಿ ಆಳರಸರ ಅರಾಜಕತೆಯಿಂದ ತತ್ತರಿಸಿಹೋದ ಜನತೆಗೆ ಮಾನಸಿಕ ನೆಮ್ಮದಿ, ಬದುಕನ್ನು ಗೆಲ್ಲುವ ಛಟ್ಟಿ ಮನಸ್ಸು ರೂಪಿಸಲು ದಾಸರು, ಅನುಭಾವಿಗಳು ಶ್ರಮಿಸಿದರು. ಅವರ ಭಕ್ತಿರಸದ ಪರಿಣಾಮದಿಂದ ಬಯಲಾಟಗಳ ಸ್ವರೂಪ ಸಂಪೂರ್ಣ ಬದಲಾಯಿತು. ಮೇಲ್ವರ್ಗದವರು ಈ ತತ್ವಗಳನ್ನು ದೊಡ್ಡಾಟದ ಮೂಲಕ, ಕೇಳವರ್ಗದವರು ಸಣ್ಣಾಟದ ಮೂಲಕ ಇವನ್ನೆಲ್ಲ ಪ್ರಕಟಿಸಲು ಆರಂಭಿಸಿದರು.

'ಶರಣರ, ದಾಸರ, ಅನುಭಾವಿಗಳ ಪ್ರಭಾವದಿಂದ ಸಾಹಿತ್ಯ ಜನರ ಹತ್ತಿರ ಬಂದಿತು. 'ಭೂಕೈಲಾಸ', 'ನಿಜಗುಣ', 'ತಿರುನೀಲಕಂಠ', 'ಅಲ್ಲಮಪ್ರಭು' ಬಯಲಾಟಗಳು; ದಾಸರ ಪ್ರಭಾವದಿಂದ 'ಶ್ರೀಕೃಷ್ಣ ಪಾರಿಜಾತ', 'ಕಭೀರ', 'ರಾಧಾನಾಟ'ಗಳು ಹುಟ್ಟಿಕೊಂಡವು. ಮೊದಲು ಇವೆಲ್ಲ ಬಿಡಿಬಿಡಿ ಪ್ರಸಂಗಗಳ ರೂಪದಲ್ಲಿ ವೇಷಗಾರರ ಬೀದಿ ಆಟದಲ್ಲಿ ಹಾಡಿನಲ್ಲಿ ಇದ್ದವು'[೨] ೧೮-೧೯ನೇ ಶತಮಾನದಲ್ಲಿ ಇವು ಇಂದಿನ ಬಯಲಾಟಗಳ ಸ್ವರೂಪವನ್ನು ತಾಳಿದವು. ಈ ಕಾಲದಲ್ಲಿ ಮುಖ್ಯವಾಗಿ ನೀತಿಯನ್ನು ಹೇಳಲು ಸಣ್ಣಾಟ ಹುಟ್ಟಿಕೊಂಡಿತು. ಅಲ್ಲದೆ ಕಾಳಜಿ ಮತ್ತು ಕಲೆಗಾರಿಕೆಯಿಂದಲೂ ಸಣ್ಣಾಟಗಳು ಸಮೃದ್ಧಿಗೊಂಡಿರುವುದನ್ನು ಕಾಣುತ್ತೇವೆ.

೨೦ನೇ ಶತಮಾನದ ಕೊನೆಯಾರ್ಧದಲ್ಲಿ ಹುಟ್ಟಿದ ಬಯಲಾಟಗಳಲ್ಲಿ ಹಿಂದಿನ ಕಲೆ ಮತ್ತು ಕಾಳಜಿಗಳ ವೇಗವನ್ನು ಕಾಣಲಾಗದು. ಇದಕ್ಕೆ ಆಧುನಿಕ ಮಾಧ್ಯಮಗಳ ಹಾವಳಿಯೂ ಕಾರಣವಾಗಿದೆ. ಕಾಲದ ಕೂಸಾಗಿ ಶ್ರೀ ಸಾಮಾನ್ಯರ ದೈವೀಆರಾಧನಾ ವಸ್ತುವಾಗಿ, ನೀತಿಯ ಪಾಠಶಾಲೆಯಾಗಿ, ಮನರಂಜನೆಯ ಮಾಧ್ಯಮವಾಗಿ ಬಯಲಾಟವು ಬೆಳೆದು ನಿಂತಿದೆ. ಅದನ್ನು ಎರಡು ರೀತಿಯಾಗಿ ವಿಂಗಡಿಸಲಾಗುತ್ತದೆ.

೧. ಪಡುವಲ ಪಾಯ

೨. ಮೂಡಲ ಪಾಯ.

ಕರಾವಳಿಯ 'ಪಡುವಲ ಪಾಯ' ಬಯಲಾಟಕ್ಕೆ ಯಕ್ಷಗಾನ ಎನ್ನುವರು. ಇದು ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಮಾತ್ರ ಕಂಡುಬರುತ್ತದೆ. ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದ ಜನರು ಆಡುವ ಬಯಲಾಟಗಳಿಗೆ 'ಮೂಡಲ ಪಾಯ' ಎನ್ನುವರು. ಇದರಲ್ಲಿ ಹಾಡು ಮತ್ತು ಮಾತುಗಳು ಸಮಸಮವಾಗಿರುತ್ತವೆ. ಇದರಲ್ಲಿ ಎರಡು ಬಗೆ. ಒಂದು ದೊಡ್ಡಾಟ, ಎರಡನೆಯದು ಸಣ್ಣಾಟ. ಇವೆರಡಕ್ಕೂ ಹಲವಾರು ಬಗೆಯ ಸಾಮ್ಯತೆಯಿರುವುದನ್ನು ಕಾಣಬಹುದು. ಮೌಖಿಕವಾಗಿರುವ ಈ ಪ್ರಕಾರವು ಇತ್ತೀಚಿಗಷ್ಟೆ ಅಕ್ಷರ ರೂಪ ತಾಳಿದೆ. ಭಕ್ತಿ ಇಲ್ಲವೆ ನೀತಿ

ಪ್ರಧಾನ ಬೋಧೆ ಇರುವುದು ಇವುಗಳ ಮುಖ್ಯ ಲಕ್ಷಣ. ಸಣ್ಣಾಟವು ಸಂಪೂರ್ಣವಾಗಿ ಸಾಮಾನ್ಯ ಜನರಿಂದ ಕೂಡಿದ ಕಾರಣ ಪಾತ್ರಧಾರಿಗಳ ವೇಷ-ಭೂಷಣಗಳು ಸಾಮಾನ್ಯವಾಗಿರುತ್ತವೆ. ಹೆಚ್ಚಾಗಿ ಈ ಆಟಗಳನ್ನು ವಿಶೇಷ ಸಂದರ್ಭಗಳಾದ ಹಬ್ಬ-ಹರಿದಿನಗಳಲ್ಲಿ, ಮಂಗಳ ಕಾರ್ಯಗಳಲ್ಲಿ, ಜಾತ್ರೆ ಉತ್ಸವಗಳಲ್ಲಿ ಆಡುತ್ತಾರೆ.

ಮನರಂಜನೆಯ ಜೊತೆಗೆ ಮನೋವಿಕಾಸ ಮಾಡುವ ತೆರನಾಗಿ ಸಣ್ಣಾಟದ ಕಥಾವಸ್ತುವನ್ನು ಹೆಣೆಯಲಾಗಿರುತ್ತದೆ. ಮೌಖಿಕ ಪರಂಪರೆಯ ಈ ಸಣ್ಣಾಟಗಳು ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಆಯಾಮಗಳಲ್ಲಿ ಅದರ ರಚನೆಯಾಗಿರುತ್ತದೆ. 'ಭೂ ಕೈಲಾಸ', 'ಚಂದ್ರಶಿರೋಮಣಿ', 'ಶ್ರೀಕೃಷ್ಣಪಾರಿಜಾತ' ಗಳನ್ನು ಪೌರಾಣಿಕ ವಸ್ತುವುಳ್ಳ ಸಣ್ಣಾಟಗಳೆಂದು ವಿಂಗಡಿಸಿದರೆ, 'ನಿಜಗುಣ ಶಿವಯೋಗಿ', 'ಅಲ್ಲಮಪ್ರಭು ಬಯಲಾಟ' ಇವುಗಳನ್ನು ಐತಿಹಾಸಿಕ ವಸ್ತುಗಳಾಗಿ ಮತ್ತು 'ಸಂಗ್ಯಾ ಬಾಳ್ಯ', 'ಅರಬರಾಟ' ಇವುಗಳನ್ನು ಸಾಮಾಜಿಕ ವಸ್ತುವುಳ್ಳ ಸಣ್ಣಾಟಗಳೆಂದು ಗುರುತಿಸಬಹುದಾಗಿದೆ. ಭಾಷೆಯ ದೃಷ್ಟಿಯಲ್ಲಿ ಬಯಲಾಟಗಳಲ್ಲಿ ಹಾಡು ಮತ್ತು ಮಾತುಗಳ ವಿಷಯ ಒಂದೇ ಆಗಿರುತ್ತದೆ. ಅವು ಒಂದಕ್ಕೊಂದು ಪೂರಕವಾಗಿರುತ್ತವೆ. ಮಾತು ಗದ್ಯ-ಪದ್ಯ ಮಿಶ್ರಿತವಾದ ವಚನದ ರೀತಿಯಲ್ಲಿದ್ದರೆ; ಹಾಡು ಪೂರ್ಣವಾಗಿ ತಾಳ, ಲಯ, ಪ್ರಾಸ, ಗೇಯತೆಯ ಗತ್ತಿನಿಂದ ಕೂಡಿರುತ್ತದೆ. ಸಾಮಾಜಿಕ ಸಣ್ಣಾಟಗಳಲ್ಲಿ ಹೆಚ್ಚಾಗಿ ಮಾತಿಗೆ ಆಡು ಭಾಷೆಯನ್ನೇ ಬಳಸುವುದು ಕಂಡುಬರುತ್ತದೆ. ಉದಾಹರಣೆಗೆ ಸಂಗ್ಯಾ ಬಾಳ್ಯಾದಲ್ಲಿನ ಒಂದು ಮಾತನ್ನು ಇಲ್ಲಿ ನೋಡಬಹುದಾಗಿದೆ. 'ಗಂಗೀ, ಈ ರೂಮಾಲ ಯಾರದಿದು, ಹೊಂ ಬೊಗಳು ಇದು ಸಂಗ್ಯಾಂದು ಈ ಊರಾಗ ಇರೋವು ಇಂಥವು ಎರಡಾ ಎರಡು ಪಟಗಾ ಒಂದು ನಂದು, ಇನ್ನೊಂದು ಸಂಗ್ಯಾಂದು. ಅಂವ ಕತ್ತಲಾಗ ಓಡಿ ಹೋದ ಕೈಗಿ ಸಿಕ್ಕಿದ್ರ ಇಲ್ಲೆ ಕಡದು ಹಾಕತಿದ್ನಿ'[೩] ಈ ಮಾತುಗಳು ಅಪ್ಪಟ ದೇಸಿ ನೆಲೆಯ ಜನರ ಮಾತಾಗಿ ಕಾಣುತ್ತದೆ. ಜನರ ನಡುವೆ ಹುಟ್ಟಿದ್ದಕ್ಕಾಗಿಯೆ ಸಣ್ಣಾಟಗಳು ಇಂತಹ ಆಡುನುಡಿಗಳನ್ನು ತನ್ನದಾಗಿಸಿಕೊಂಡಿವೆ. ಒಟ್ಟಾರೆಯಾಗಿ ಸಣ್ಣಾಟವು ಜನಸಾಮಾನ್ಯರನ್ನು ಜಾಗೃತಗೊಳಿಸಿ, ಸಮಾಜದಲ್ಲಿ ಮನರಂಜನೆಯನ್ನು ನೀಡುತ್ತ ಮೌಖಿಕ ಸಾಹಿತ್ಯದಲ್ಲಿ ತನ್ನದೇ ಆದ ಉಳಿಸಿಕೊಂಡು ಬಂದಿದೆ.

**೫.೨. ಬುಲಾಯಿ ಹಾಡುಗಳು**

ಹೈದರಾಬಾದ್ ಕರ್ನಾಟಕದ ಗಡಿನಾಡಿನ ಬೀದರ ಜಿಲ್ಲೆಯಲ್ಲಿ ವಿಶೇಷವಾಗಿ ಕಂಡುಬರುವ 'ಬುಲಾಯಿ ಹಾಡು' ಜನಪದ ಗೀತಸಾಹಿತ್ಯದಲ್ಲಿ ಒಂದು ವಿಶಿಷ್ಟ ಪ್ರಕಾರವಾಗಿದೆ. 'ಬುಲಾಯಿ' ಎಂದರೆ, 'ಬನ್ನಿ' ಎಂಬ ಅರ್ಥ ಇದೆ. ಈ ಪದವು ಉರ್ದುವಿನ ಪ್ರಭಾವದಿಂದ ಬಂದಿದೆ. 'ಬುಲಾಯಿ ಹಾಡು' ಮೂಲತಃ ಸ್ತ್ರೀ ಪ್ರಧಾನ ಸಾಹಿತ್ಯವಾಗಿ ರಚಿತವಾದದ್ದು. ಮುಸ್ಲೀಂ ಮಹಿಳೆಯರು ಹೆಣ್ಣು ಮಕ್ಕಳಿಗೆ ಕರೆಯುವಾಗ ಮಾತ್ರ ಈ ಪದ ಬಳಕೆಯಾಗುತ್ತಿತ್ತೆಂದು ತಿಳಿಯುತ್ತದೆ. ಇದರ ಉಗಮ, ಸ್ವರೂಪದ ಬಗೆಗೆ ಲೇಖಕರೊಬ್ಬರು ಈ ರೀತಿಯಾಗಿ ಹೇಳುತ್ತಾರೆ. 'ಸಮೂಹವಾಗಿ ಹಾಡುವ ಈ ಪ್ರಕಾರದಲ್ಲಿ ಮಹಿಳೆಯರು ಒಟ್ಟಿಗೆ ಸೇರಿ ಹಾಡನ್ನು ಪ್ರಾರಂಭಿಸುತ್ತಾರೆ.

ಜನಪದರ ಈ ವಿಶಿಷ್ಟ ಗೀತಸಾಹಿತ್ಯವು ಯಾವಾಗ ಉಗಮವಾಯಿತು ಎಂಬುದರ ಬಗೆಗೆ ನಿಖರವಾಗಿ ಮಾಹಿತಿ ದೊರೆತಿಲ್ಲ. ಸಾಮಾನ್ಯವಾಗಿ ಇದು ಇಸ್ಲಾಂ ಸಂಸ್ಕೃತಿಯ ಜೊತೆಗೆಯೆ, ಬಂದಿರಬಹುದು. 'ಬುಲಾಯಿ ಹಾಡು'ಗಳಲ್ಲಿ ಇತಿಹಾಸ, ಪೌರಾಣಿಕ ವಿಷಯವಸ್ತುಗಳನ್ನು ಒಳಗೊಂಡಿದ್ದು, ಜನಪದರು ತಮ್ಮ ಮೇಲೆ ಪ್ರಭಾವ ಬೀರಿದ ಮಹಾನುಭಾವರನ್ನು ಹಾಗೂ ದೇವತೆಗಳನ್ನು ಸ್ಮರಿಸುತ್ತ ಹಾಡುವ ಸಂಪ್ರದಾಯ ಬೆಳೆದು ಬಂದಿದೆ. ಈ ಹಾಡುಗಳು ದ್ವಿಪದಿಯಲ್ಲಿದ್ದು, ದೀರ್ಘವಾಗಿರುತ್ತವೆ. ಅಲ್ಲದೇ ಹಾಡಿನ ಪ್ರತಿ ನುಡಿಯ ಕೊನೆಗೆ 'ಕೋಲೆಣ್ಣ ಕೋಲ'' ಎಂಬ ಸೊಲ್ಲು ಪ್ರಧಾವಾಗಿ ಇರುವುದು ಕಾಣುತ್ತದೆ. ಈ ಹಾಡುಗಳು ಬಾಯಿಂದ ಬಾಯಿಗೆ ಹರಿದು ಬಂದವುಗಳಾಗಿದ್ದು, ಹಾಡಿನ ಧಾಟಿ ಮಾತ್ರ ಒಂದೇ ಆಗಿ ಕಾಣುತ್ತದೆ. ವೀರರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುವ ಉದ್ದೇಶದಿಂದ ರಚಿತವಾದ ಈ ಬುಲಾಯಿ ಹಾಡುಗಳ ಜನಸಾಮಾನ್ಯರ ಕಷ್ಟದಲ್ಲಿ ಹುಟ್ಟಿದಂತಹ ಗೀತ ಪ್ರಕಾರವಾಗಿದೆ. ಈ ಹಾಡುಗಳಲ್ಲಿ ಹಿಂದಿ, ಮರಾಠಿ, ಉರ್ದು, ಹಾಗೂ ತೆಲಗು ಭಾಷೆಯ ಅನೇಕ ಶಬ್ದಗಳು ಕನ್ನಡದೊಂದಿಗೆ ಬೆರೆತುಕೊಂಡು ಭಾಷಾ ವೈವಿಧ್ಯತೆಯಿಂದ ಕೂಡಿವೆ. ಉದಾಹರಣೆಗೆ ಪೋರಿ, ವಾಪೀಸು, ಖಿಲ್ಲೆ, ಕಬ್ಜಾ, ಹತಿಯಾರ್, ಹುಕಂ, ಅತ್ಯಾಚಾರ್, ಘಾಟ್, ಖುಲ್ಲಾ, ಝುಂಡಾ, ಖೂನಿ, ಇತ್ಯಾದಿ. ಸಾಮಾನ್ಯವಾಗಿ ಪಂಚಮಿ ಹಬ್ಬದ ಸಂದರ್ಭದಲ್ಲಿ ವಿಶೇಷವಾಗಿ ಕಂಡುಬರುವ ಈ ಬುಲಾಯಿ ಹಾಡುಗಳನ್ನು ಓಣಿಗಳಲ್ಲಿ ಮಹಿಳೆಯರು ಕೈ ಕೈ ಹಿಡಿದು ಗೋಲಾಕಾರದಲ್ಲಿ ನಿಂತು ಹಾಡುವರು. ತುಂಬಾ ದೀರ್ಘವಾಗಿ ಇರುವ ಇವುಗಳು, ಸೋಮರಾಯ, ಕುಮಾರರಾಮ, ಹೇಮರೆಡ್ಡಿ ಮಲ್ಲಮ್ಮ ಅಂಥವರ ಪ್ರಾಚೀನ ಮಹಾನುಭಾವರ ಚರಿತ್ರೆಗಳು, ಕಲ್ಪಿತ ಕತೆಗಳು, ದೈವಿಸೂತ್ರಗಳು, ಪ್ರಸ್ತಾಪವಾಗಿ ಕಂಡು ಬರುತ್ತವೆ. ಮುಖ್ಯವಾಗಿ ಈ ಹಾಡುಗಳು ಶೋಷಣೆ, ಸಾಹಸ, ನೋವು, ನಗೆ, ಅಸಹಾಯಕತೆ, ತ್ಯಾಗ, ಸಹನೆ, ಮುಂತಾದವುಗಳು ಪ್ರತಿನಿಧಿಸುತ್ತವೆ. ನಿಜಾಮ್ ಆಳ್ವಿಕೆಯ ಸಂದರ್ಭದಲ್ಲಿ ರಜಾಕಾರರು ಎಸಗಿದ ದೌರ್ಜನ್ಯಕ್ಕಾಗಿ ಜಾತಿಮತ ಭೇದಕ್ಕಾಗಿ ಅನೇಕ ಹಾಡುಗಳು ರಚಿತವಾಗಿವೆ. 'ಜಾತಿಯತೆಯ ಧಿಕ್ಕಾರ' ಎನ್ನುವ ಬುಲಾಯಿ ಹಾಡುಗಳು ಪ್ರಸ್ತುತದಲ್ಲಿಯೂ ಹೊಸ ಭ್ರಾತೃತ್ವವನ್ನು ಬೆಸೆಯುತ್ತವೆ.

ಬುಲಾಯಿ ಹಾಡುಗಳು ಹಿಂದಿನ ಸಂಸ್ಕೃತಿಯನ್ನು ಪ್ರತಿನಿಧಿಸಿ ಬದಲಾಗುತ್ತಿರುವ ಸಮಾಜದಲ್ಲಿ ಇಂದು ಸಂಶೋಧಕರಿಗೆ ಹೊಸ ಅವಕಾಶವನ್ನು ಕಲ್ಪಿಸಿವೆ. ಮುಖ್ಯವಾಗಿ ಜನಪದರ ಸಾಹಿತ್ಯ, ಸಂಸ್ಕೃತಿ, ರಾಷ್ಟ್ರೀಯ ಪ್ರಜ್ಞೆ, ಜೀವನ ವಿಧಾನಗಳನ್ನು ಒಳಗೊಳ್ಳುವ ಇವು ಅನೇಕ ಕಾರಣಗಳಿಗಾಗಿ ಮುಖ್ಯವೆನಿಸುತ್ತವೆ.

'ನಾವಿಬ್ಬರು ಅಕ್ಕತಂಗೆಯರು ನೆರಮನಿ ಗೆಳದೇರು,
ನಮಗ್ದಡದ ತಾಯಿದೇರು ಕೋಲೆಣ್ಣಾ ಕೋಲ.
ನನ್ನ ಆಕಳ ಹೆಂಡಿ ಸಾರುಸಿ ಮನಿಗ್ವಾಡಿ ದರಸ್ಯಾರೆ
ವೀಭೂತಿ ಮಾಡಿ ಕೋಲೆಣ್ಣಾ ಕೋಲ.
ನಾವು ಉಂಬಲು ಹಿಂಡಿಯ ಹಾಲ ಮಾಡಿ ಉಂಬಲ್ಲಿ
ಗಿನ್ನಾ ನನ್ನ ಮಗಾ ಬಸವಣ್ಣ ಕೋಲೆಣ್ಣಾ ಕೋಲ.

ನನ ಮಗ ಬಸವಣ್ಣಾ ನಿಮಗಾಗಿ ದುಡೀತಾರ
ನಿಮಗಾಗಿ ದುಡಿತಾರ ಕೋಲೆಣ್ಣಾ ಕೋಲ.
ಹೊಸದು ನಾರಿನ ಧಾರ ಹಿಡಿದು ಡಬ್ಬಣ್ಣ ಖೂರ
ಮೂಗಿನಲ್ಲಿ ಪೇಣಿಸ್ಯಾರ ಕೋಲೆಣ್ಣಾ ಕೋಲ.
ಮೂಗಿನಲ್ಲಿ ಪೋಣಿಸ್ಯಾರ ಹಗ್ಗಚ್ಚಿ ಎಳೆದಾರ ವ್ಯಾಪಾರಕೆ
ನಡದಾರ ಕೋಲೆಣ್ಣಾ ಕೋಲ.
ವ್ಯಾಪಾರಕ ನಡದಾರ ಬಸವಣ್ಣನ ಗುಡಿಮುಂದ
ವ್ಯಾಪಾರಕ ನಿಂದ್ರಿಸ್ಯಾರ ಕೋಲೆಣ್ಣಾ ಕೋಲ.
ಖಟಕರು ಬಂದಾರ ವ್ಯಾಪಾರ ಮಾಡ್ಯಾರ ಹಗ್ಗಚ್ಚಿ
ಎಳೆದಾರ ಎಳೆದಾರ ಕೋಲೆಣ್ಣಾ ಕೋಲ.
ಹಗ್ಗಚ್ಚಿ ಎಳೆದಾರ ನಾಲ್ಕು ಕಾಲ ಬಿಗದಾರ ಭೂಮಿಗಿ
ಖೆಡವ್ಯಾರ ಕೋಲೆಣ್ಣಾ ಕೋಲ.
ಒಳ್ಳೆನಂದರ ಬಾಯಿನಿಲ್ಲ ಎದ್ದನೆಂದರ ಶಕ್ತಿಯಿಲ್ಲ
ಬಿಚ್ಚಿ ತೆಗದಾರೆ ತೊಗಲ ಕೋಲೆಣ್ಣಾ ಕೋಲ.
ಹಾಲು-ಬಾನ ಉಂಡೀದು ಉಪಕಾರ ಉಳಿಯಣಿಲ್ಲ
ಬಿಚ್ಚಿ ತೆಗೆದಾರ ಕೋಲೆಣ್ಣಾ ಕೋಲ.
ಕಾವಿಯ ಉಟ್ಟಿದರು, ಕಾವಿಯ ತೊಟ್ಟಿದವರು,
ತಮ್ಮ ಧರ್ಮ ಬಿಟ್ಟಿದಾರು ಕೋಲೆಣ್ಣಾ ಕೋಲ.
ಕಲ್ಯಾಣ ಅಗಸ್ಯಾಗ ಫೋಟು ತೆಗೆಸ್ಯಾರ ಹತ್ತು ಅದಕ್ಕ
ಬಿಗಸ್ಯಾರೆ ಮುತ್ತು ಕೋಲೆಣ್ಣಾ ಕೋಲ.
ಕ್ವಾಟೆಯ ಅಗಸ್ಯಾಗ ಫೋಟು ತೆಗಸ್ಯಾರೆ ಹತ್ತು
ಅದಕ ಬಿಗುಸ್ಯಾರೆ ಮುತ್ತು ಕೋಲೆಣ್ಣಾ ಕೋಲ"[೫]

ಈ ಹಾಡಿನಲ್ಲಿ ರೈತಮಿತ್ರ ಎಂದು ಕರೆಯಿಸಿಕೊಳ್ಳುವ ಎತ್ತುಗಳ ಬಗೆಗಿನ ಕನಿಕರದ ಚಿತ್ರಣವಿದೆ. ನಮ್ಮ ಜನಸಾಮಾನ್ಯರು ಮೂಲತಃ ಕೃಷಿಕರು. ಭೂಮಿ ಊಳುವ ಎತ್ತುಗಳನ್ನು ಜನಪದರು ಬಸವಣ್ಣ ಎಂದು ನಂಬಿದ್ದಾರೆ. ಭೂಮಿ ಉಳುಮೆ ವೇಳೆಯಲ್ಲಿ ಅವುಗಳಿಗೆ ಜನರು ಇಲ್ಲಸಲ್ಲದ ಕಷ್ಟಗಳನ್ನು ಕೊಡುತ್ತಾರೆ. ಕೊನೆಗೆ ಅವುಗಳನ್ನು ಕಟುಕರಿಗೆ ಒಪ್ಪಿಸುತ್ತಾರೆ. ರೈತರ ಜೀವನಾಧಾರಕ್ಕೆ ಸಹಾಯ ಮಾಡುವ ಎತ್ತುಗಳ ಬಗೆಗೆ ಕನಿಕರದಿಂದ ಅವುಗಳ ಜೀವನ ವೃತ್ತಾಂತವನ್ನು ಈ ಬುಲಾಯಿ ಹಾಡು ಹೇಳುತ್ತದೆ. ಕೋಲೆಣ್ಣಾ ಕೋಲ ಎಂಬ ಪುನರುಕ್ತಿಯ ಪದ ಇಲ್ಲಿ ಕೇಳುಗರನ್ನು ಆಕರ್ಷಿಸುತ್ತದೆ. ಪ್ರತಿ ಸಾಲಿನಲ್ಲಿ ಒಂದು ಚಿತ್ರಣ ಕೊಡುವ ಈ ಹಾಡು ಜನಪದರ ಸಾಮಾನ್ಯ ಭಾಷೆಯಿಂದ ರಚಿತವಾದದ್ದಾಗಿದೆ. ಇದು ಒಂದು ಇತಿಹಾಸವನ್ನು ಹೇಳುವುದರ ಜೊತೆಗೆ ಪ್ರಸಂಗವೊಂದನ್ನು ಕಟ್ಟಿಕೊಂಡು ಸಾಗುವಂತೆ ಭಾಸವಾಗುತ್ತದೆ. ಅದೇ ರೀತಿಯಾಗಿ ವಿದೇಶಿ ಆಳ್ವಕೆಯಿಂದ ಬೇಸತ್ತು ಭಾರತ ಸ್ವಾತಂತ್ರ್ಯದಲ್ಲಿ ಜನರನ್ನು ಜಾಗೃತಗೊಳಸಿ, ಹೋರಾಡಿದ ರಾಷ್ಟ್ರೀಯ ನಾಯಕರು ನಮಗೆ ಎಂದಿಗೂ ಮುಖ್ಯರಾಗಿದ್ದಾರೆ. ಅವರ ಗುಣಗಾನವನ್ನು ಮಾಡಿರುವ ಒಂದು ಬುಲಾಯಿ ಹಾಡು ಇಂತಿದೆ.

'ಭಾರತ ಮಾತಾ ನಿಮ್ಮ ಸ್ಮರಣ, ಚರಣಕ್ಕೆ ಹಚ್ಚಾರ ಹಣಿ,
ಆಗಲಿ ಕೊಟ್ಟಾರೆ ವರುಷದ ಖಣಿ, ಕೋಲೆಣ್ಣಾ ಕೋಲ.
ತಿಳಿಲಿಲ್ಲಾ ನಿನ್ನ ಮಹಿಮೆ, ಶಿವ ಮಾಡಿ ಗಾಂಧೀ ಮಹಾತ್ಮಾ
ಹಂಗ ತಿಳಿದಾರೊ ಪರಧರ್ಮ, ಕೋಲೆಣ್ಣಾ ಕೋಲ.
ಸತ್ಯಲಿಂದು ಸ್ವರಾಜ್ಯ ಗೆದ್ದು, ಹಿಂದುಸ್ಥಾನ ಕುಂತಿತು ಎದ್ದು,
ಜಾತಿ ಧರ್ಮ ಎಂದು ಇಟ್ಟಿಲ್ಲ ಭೇದು, ಕೋಲೆಣ್ಣಾ ಕೋಲ.
.........................................................................................
ವಿಜಯಾ ಬೀರಿದ ಸಾರಿ, ಚನ್ನಬಸವಣ್ಣ ಬರತಾನ ಹುಟ್ಟಿ,
ಸುಳ್ಳು ಆಡಿದ ಜನರು ಹರಿದು ಹೋಗದು ಘಟ್ಟಿ ಕೋಲೆಣ್ಣಾ ಕೋಲ'.[೬]

ಎಂದು ಮುಕ್ತಾಯವಾಗುತ್ತದೆ. ಈ ಹಾಡಿನಲ್ಲಿ ಭಾರತಕ್ಕೆ ವಿದೇಶಿಯರಿಂದ ಸ್ವಾತಂತ್ರ್ಯ ಕೊಡಿಸುವಲ್ಲಿ ಶ್ರಮಿಸಿದ ರಾಷ್ಟ್ರೀಯ ನಾಯಕರ ಗುಣಗಾನವಿದೆ. ಸತ್ಯ ಅಹಿಂಸೆಗಳಿಂದ ಪಡೆದ ಜಾತಿ ಭೇದವೆಣಿಸದ ಮಹಾತ್ಮರ ಈ ಪುಣ್ಯಕಾರ್ಯದಿಂದ ಮುಂದೆ ಬಸವಣ್ಣನಂತ ಮೇಧಾವಿ ಹುಟ್ಟುವ ಆಶಯದಿಂದ ಹಾಡು ಕೊನೆಗೊಳ್ಳುತ್ತದೆ. ಒಟ್ಟಾರೆಯಾಗಿ ಜನಪದರ ಸಮಸ್ಯೆ ಮತ್ತು ಅಂದಿನ ಸ್ಥಿತಿಗತಿಗಳಿಗೆ ಬುಲಾಯಿ ಹಾಡುಗಳು ಸ್ಪಂದಿಸಿರುವುದು ಕಾಣುತ್ತದೆ.

**೫.೩. ಲಾವಣಿ**

ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಕಂಡುಬರುವ ಲಾವಣಿಯು ಒಂದು ಪದ್ಯ ಜಾತಿಗೆ ಸೇರಿದ್ದಾಗಿದೆ. ಸಾಮಾನ್ಯ ಜನರು ಈ ಲಾವಣಿಗೆ 'ಡಪ್ಪಿನ ಪದ', 'ಗೀ ಗೀ ಪದ', 'ಬೀ ಬೀ ಪದ', 'ಶಾವಿರಕಿ ಪದ' ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಲಾವಣಿ ಪದದ ಉತ್ಪತ್ತಿಯ ಬಗೆಗೆ ವಿದ್ವಾಂಸರಲ್ಲಿ ಹಲವು ಭಿನ್ನಾಭಿಪ್ರಾಯಗಳಿವೆ. ಇದು ಸಂಸ್ಕೃತ ಮೂಲದ್ದೆಂದು ಕೆಲವರು ವಾದಿಸಿದರೆ, ಮತ್ತೆ ಕೆಲವರು ಮರಾಠಿಯಿಂದ ಬಂದಿದ್ದಾಗಿದೆ ಎಂದು ಚರ್ಚಿಸಿದ್ದಾರೆ. ಅಲ್ಲದೆ ಈ ಸಾಹಿತ್ಯ ಪ್ರಕಾರ ಮಹಾರಾಷ್ಟ್ರದಿಂದ ಬಂದ ಕಲೆಯೋ, ಕರ್ನಾಟಕದಲ್ಲಿಯೇ ಇದ್ದಂತ ಕಲೆಯೋ ಎಂಬ ವಾದ ವಿವಾದ ನಡೆಯುತ್ತಲೇ ಇದೆ. ಲಾವಣಿ–ಗೀಗೀ ಹಾಡುಗಳು ಬೇರೆ ಬೇರೆ ಎಂದು ಕೆಲವರು ಹೇಳಿದರೆ, ಲಾವಣಿ–ಗೀಗೀ ಒಂದೇ ಎಂದು ಕೆಲವರ ತರ್ಕವಾಗಿದೆ. ಈ ಸಾಹಿತ್ಯವು ಮರಾಠಿಯಿಂದ ಕನ್ನಡಕ್ಕೆ ಬಂದಿದ್ದೆಂದು ಹೆಚ್ಚಿನ ವಿದ್ವಾಂಸರ ಅಭಿಪ್ರಾಯವಾಗಿದೆ. ಉತ್ತರ ಕರ್ನಾಟಕದಲ್ಲಿ ಅದರಲ್ಲೂ ಮಹಾರಾಷ್ಟ್ರ ರಾಜ್ಯಕ್ಕೆ ಹೊಂದಿಕೊಂಡಿರುವ ಹಳ್ಳಿಗಳಲ್ಲಿ ಈ ಲಾವಣಿಗಳು ಜನಸಾಮಾನ್ಯರ ಜೀವನಾಡಿಯಂತೆ ಇಂದಿಗೂ ಗೋಚರಿಸುತ್ತವೆ. ಹಾಗಾಗಿ ಲಾವಣಿ–ಗೀಗೀ ಹಾಡುಗಾರಿಕೆ ಮಹಾರಾಷ್ಟ್ರದ 'ಪೋವಾಡ'ದಿಂದಲೇ ಪ್ರೇರಣೆ ಪಡೆದ ಕಲೆ ಎಂದು ಭಾವಿಸಬಹುದಾಗಿದೆ.

ಲಾವಣಿ–ಗೀಗೀ ಹಾಡುಗಾರಿಕೆ ಭಿನ್ನ ಮಾದರಿಯದ್ದಲ್ಲ. ಕನ್ನಡದಲ್ಲಿ ಇವೆರಡೂ ಒಂದೇ. 'ಮರಾಠಿ ಭಾಷೆಯ ಲಾವಣಿಯಲ್ಲಿ ವೀರರಸ ಪ್ರಧಾನವಾದ ಪದಗಳನ್ನು 'ಪೋವಾಡ'ವೆಂದು ಶೃಂಗಾರ ರಸ ಪ್ರಧಾನವಾದ ಹಾಡುಗಳನ್ನು ಲಾವಣಿ ಎಂದು ಬೇರೆ ಬೇರೆಯಾಗಿ ಗುರುತಿಸಿದಂತೆ ಕನ್ನಡದಲ್ಲಿ ಗುರುತಿಸಿಲ್ಲ. ಶೃಂಗಾರರಸವೇ ಇರಲಿ, ವೀರರಸವೇ ಇರಲಿ, ಚರಿತ್ರೆ, ನೀತಿ

ತತ್ವಗಳಿಗೆ ಸಂಬಂಧಿಸಿದವೇ ಆಗಿರಲಿ ಗೀಗೀ ಹಾಡುಗಳನ್ನೆಲ್ಲ ಲಾವಣಿ ಎಂದು ಕರೆಯುವ ವಾಡಿಕೆ ಇದೆ. ಹಾಗಾಗಿ ಲಾವಣಿ–ಗೀಗೀ ಬೇರೆ ಬೇರೆಯಲ್ಲ. ಎಂಬ ಅಭಿಪ್ರಾಯ ವಿದ್ವಾಂಸರಾದ ಡಾ. ಬಿ.ಬಿ. ಹೆಂಡಿಯವರದ್ದಾಗಿದೆ.[೭] ಲಾವಣಿ–ಗೀಗೀ ಪದಗಳ ಮೂಲಕ ಈ ಪ್ರದೇಶದ ಸಾಂಸ್ಕೃತಿಕ ಚಹರೆಯನ್ನು ಸೂಕ್ಷ್ಮವಾಗಿ ತಿಳಿಯಪಡಿಸುತ್ತವೆ. 'ಲಾವಣಿ ಮತ್ತು ಗೀಗೀ ಪದಗಳಿಗಿರುವ ಅಂತರ ಗೋಷ್ಠಿ ವಿಧಾನದಲ್ಲಿಯೇ ಹೊರತು ರಚನಾ ಶಿಲ್ಪದಲ್ಲಲ್ಲ. ಮೂಲತಃ ಲಾವಣಿ ಕವಿ ಒಂದು ಹಾಡನ್ನು ಒಬ್ಬನೇ ಹಾಡಬೇಕು. ಅಥವಾ ಮೇಳದವರೆ ಹಾಡಬೇಕು ಎಂದು ನಿಶ್ಚಯಿಸಿ ಕಟ್ಟುವುದಿಲ್ಲ. ಒಂದು ಲಾವಣಿ ಪದ ನಿರ್ಮಾಣಗೊಂಡ ಮೇಲೆ ಅದನ್ನು ಒಬ್ಬನೇ ನಿಂತು ಹಾಡಬಹುದು ಅಥವಾ ಮೇಳಗೂಡಿಯೂ ಹಾಡಬಹುದು. ಒಬ್ಬನೇ ನಿಂತು ಹಾಡುವಾಗ ಅದು ಬಯಲು ಲಾವಣಿ ಎನಿಸಿಕೊಳ್ಳುತ್ತದೆ. ಮೇಳಗೋಡಿ ಹಾಡುವಾಗ ಅದು ಮೇಳ ಲಾವಣಿ ಎನಿಸಿಕೊಳ್ಳುತ್ತದೆ. ಈ ಮೇಳಲಾವಣಿಗೆ ಗೀಗೀ ಪದ, ಶಾವರಿಕಿ ಪದ, ಜೀಜೀ ಪದ ಎಂಬ ಪರ್ಯಾಯ ನಾಮಗಳು ಇವೆ. ಮೂಲದಲ್ಲಿ ಲಾವಣಿ ಎನ್ನುವ ಪದ ಒಂದೇ ಇರುತ್ತದೆ. ಹಾಡುಗಾರರು ತಮಗೆ ಬೇಕಾದ ರೀತಿಯಲ್ಲಿ ಮಾರ್ಪಾಡು ಮಾಡಿಕೊಳ್ಳುತ್ತಾರೆ. ಹಾಗಾಗಿ ಗೀಗೀ–ಲಾವಣಿ ಒಂದೇ ಎನ್ನುವ ಧ್ವನಿಯೂ ಇಲ್ಲಿದೆ'[೮] ಈ ಮೇಲಿನ ಮಾತುಗಳಿಂದ ಗೀಗೀ–ಲಾವಣಿಗಳು ಭಿನ್ನವಲ್ಲ, ಅವು ಒಂದೇ ಸ್ವರೂಪದವುಗಳು ಎಂದು ಭಾವಿಸಬಹುದು.

ಕನ್ನಡದ ಆದಿ ಕವಿಗಳು ತಮ್ಮ ಕಾವ್ಯದ ಆರಂಭದಲ್ಲಿ ಸ್ತುತಿ ಪದ್ಯಗಳನ್ನು ರಚಿಸಿರುವಂತೆ, ಲಾವಣಿಕಾರರೂ ಸಹ ದೈವ ಸ್ತುತಿಯ ಹಾಡುಗಳನ್ನು ಆರಂಭದಲ್ಲಿ ಹಾಡುವರು. ಅಂತಹ ಒಂದು ಪದ ಇಲ್ಲಿದೆ

'ಶ್ರೀ ಗೌರೀಸುಕುಮಾರಾ, ಸುಜ್ಞಾನಕಾಧಾರಾ,
ಕಿಡಿಗೇಡಿ ಇಲಿದೇರಾ, ಸರ್ವ ವಿಘ್ನಗಳನ್ನು ಪರಿಹರಿಸಿ,
ಪೊರೆಯೆನ್ನ ಸ್ವಾಮಿ ನೀ ಗಣವರಾ
ಸದಾ ನೆನೆವೆ ನಾನಿನ್ನ ಚರಣ ಪವಿತ್ತರಾ'[೯]

ಜನಪದರು ದೈವಗಳಲ್ಲಿ ನಂಬಿಕೆ ಇಟ್ಟವರು. ತಮ್ಮ ಯಾವುದೇ ಕೆಲಸಗಳು ಸುಗಮವಾಗಿ ಸಾಗಲು, ವಿಘ್ನಗಳು ಬಾರದಿರಲು, ಅವರು ದೈವಗಳಿಗೆ ಮೊರೆ ಹೋಗಿದ್ದಾರೆ. ಅದರಂತೆ ಲಾವಣಿಗಳ ಮೊದಲ ಭಾಗಗಳನ್ನೂ ದೇವರ ಸ್ಮರಣೆಯಿಂದ ಆರಂಭಿಸದರೆ ಒಳ್ಳೆಯದಾಗುವುದೆಂಬ ನಂಬಿಕೆ ಇವರದ್ದಾಗಿದೆ. ಗೀಗೀ ಹಾಡುಗಳಲ್ಲಿ ಸವಾಲ್–ಜವಾಬ್ ವಾದದ ಹಾಡುಗಳು ಪ್ರಮುಖವಾಗಿವೆ. ಹರದೇಶಿ–ನಾಗೇಶಿ (ಕಲ್ಗಿ ತುರಾ) ಪಕ್ಷದವರು ಹಾಡುವ ಇವುಗಳಲ್ಲಿ ಶಾರದೆ, ಸರಸ್ವತಿ, ಪಾರ್ವತಿ, ಹೀಗೆ ಹೆಣ್ಣು ದೇವತೆಗಳ ಪರವಾಗಿ ನಾಗೇಶಿ ಪಕ್ಷದವರು ನೆನಪಿಸಿಕೋಂಡರೆ, ಗಣೇಶ, ವಿಷ್ಣು, ಶೀವ ಗಂಡು ದೇವರನ್ನು ಸ್ತುತಿಸುವುದರ ಮೂಲಕ ಹರದೇಶಿ ಪಕ್ಷದವರು ಹಾಡಿಗೆ ಚಾಲನೆಯನ್ನು ನೀಡುತ್ತಾರೆ. ಮುಖ್ಯವಾಗಿ ಲಾವಣಿಗಳಲ್ಲಿ ಪ್ರಕೃತಿ, ನೀತಿಸಾರುವ, ಆಧ್ಯಾತ್ಮದ ಭೋಧೆ, ಸಾಮಾಜಿಕ ಸಂಬಂಧ, ಪುರಾಣ, ಮನೋರಂಜನೆಗಳು ಒಳಗೊಂಡಿರುತ್ತವೆ. ಉತ್ತರ ಕರ್ನಾಟಕದಲ್ಲಿ ಬರುವ ಲಾವಣಿಗಳನ್ನು ಒಂಟಿ ಲಾವಣಿ, ಮೇಳ

ಲಾವಣಿ ಗಳೆಂದು ವಿಂಗಡಿಸುವ ಕ್ರಮ ಇದೆ. ಒಂಟಿ ಲಾವಣಿ ಹಾಡುವವನು ಒಬ್ಬನೇ ಆಗಿದ್ದು ಕಾಲಿಗೆ ಗೆಜ್ಜೆ, ಧೋತರ ಅಥವಾ ಬಣ್ಣದ ಪಟ್ಟಿಯನ್ನು ಕಟ್ಟಿಕೊಳ್ಳುತ್ತಾರೆ. ಹಬ್ಬ, ಮದುವೆ, ಜಾತ್ರೆಗಳಂತ ಸಂದರ್ಭಗಳಲ್ಲಿ ವೀರಪುರುಷರ ಶೌರ್ಯಗಳನ್ನು ಕೊಂಡಾಡಿ ವೀರಗೀತೆಗಳನ್ನು ಹಾಡುವುದು ತಿಳಿಯುತ್ತದೆ. ಮೇಳ ಲಾವಣಿಗಳಲ್ಲಿ ಸಾಮಾನ್ಯವಾಗಿ ಮೂರು ಜನರಿದ್ದು, ಕಪ್ಪು ತುಂತಣಿ ತಾಳಗಳನ್ನು ಹಿಡಿದು ಹಾಡುತ್ತಾರೆ. ಒಬ್ಬ ದಪ್ಪ ಹಿಡಿದು ಮುಂದೆ ಹಾಡಿದರೆ, ಉಳಿದವರು ಹಿಂಮ್ಮೇಳದಿಂದ ಹಾಡುತ್ತಾರೆ. ಇವುಗಳನ್ನು ಸ್ತ್ರೀ, ಪುರಷರು ಎಂಬ ಭೇದವಿಲ್ಲದೇ ಇಬ್ಬರೂ ಹಾಡುತ್ತಾರೆ. ಕಚ್ಚೆಪಂಜೆ, ಜುಬ್ಬಾ, ತಲೆಗೆ ಪೇಟಾ–ಟೊಪ್ಪಿಗೆ ಧರಿಸುವ ಇವರು ನಿಂತಲ್ಲೇ ಹಾಡುಗಳನ್ನು ಕಟ್ಟಿ ಜನರನ್ನು ರಂಜಿಸುವ ವಿದ್ವತ್ತನ್ನು ಹೊಂದಿರುತ್ತಾರೆ. ವೀರಪುರುಷರ ಶೌರ್ಯಗಳನ್ನು ಕೊಂಡಾಡಿ ವೀರಗೀತೆಗಳನ್ನು ಹಾಡುವ ಲಾವಣಿಗಳಲ್ಲಿ ಮುಂಡರಗಿ ಭೀಮರಾಯನ ಲಾವಣಿ ಒಂದಿದ್ದು ಅದು ಇಂತಿದೆ.

'ದಿಟ್ಟ ಭೀಮರಾಯ ಮುಟ್ಟಿ ಹಣೆಯ
ಅದೃಷ್ಟವೆಂದು ಮೀಸೆಮುರಿದು
ಬಿಡುಬಿಡು ದೇಸಾಯಿ ಹಿಡಿಹಿಡಿ ಕತ್ತಿ
ನಡಿ ನಡಿ ಕುದುರೆಯನು ಏರು
ಇರುತಲಿ ಭಂಟರನು ಕರೆಸಿದನು
ಹಮ್ಮಿಗೆಪುರ ಆಕ್ಷಣಕೆ ಹೊಕ್ಕನು
ಶ್ಯಾನುಭೋಗನ ಕಿವಿ ಮೂಗು ಕೊಯ್ಸಾನು
ಬಂದ ಸವಾರನ ಕಡಿದು ಬಡಿದು
ಧುಮ್ಮು ದುಡುಕು ಮಾಡಿದನು'[೧೦]

ಈ ಲಾವಣಿಯಲ್ಲಿ ಮುಂಡರಗಿ ಭೀಮರಾಯನ ಶೌರ್ಯ ವ್ಯಕ್ತವಾಗಿದೆ. ಮುಂಡರಗಿಯ 'ಹಮ್ಮಿಗೆ ಪ್ರದೇಶದ ದೇಸಾಯಿಯ ಆಳ್ವಿಕೆಯಲ್ಲಿ ಟೇಲರ್ ಸಾಹೇಬನೆಂಬ ಬ್ರಿಟೀಶ್ ಉಸ್ತುವಾರಿ ಅಧಿಕಾರಿ ಇದ್ದನು. ಅವನು ತನ್ನ ಆಡಳಿತ ವ್ಯಾಪ್ತಿಯ ಪ್ರದೇಶದಲ್ಲಿ ಯಾರೂ ಕೂಡ ಮದ್ದು, ಗುಂಡು, ಕತ್ತಿ, ಕಠಾರಿ ಹೊಂದಿರಬಾರದೆಂದು, ಇರುವವರು ಅವುಗಳನ್ನು ಸರ್ಕಾರಕ್ಕೆ ಒಪ್ಪಿಸಬೇಕೆಂದು ಹುಕುಂ ಹೊರಡಿಸುತ್ತಾನೆ. ಊರಿನ ಶಾನುಭೋಗ ಸರ್ಕಾರಕ್ಕೆ ವರದಿ ಮಾಡಿ ಮದ್ದು ಗುಂಡುಗಳನ್ನು ಹೊಂದಿರುವವರ ಸುಳಿವು ನೀಡುತ್ತಾನೆ. ಇದಕ್ಕಂಜಿದ ದೇಸಾಯಿ ಟಿಪ್ಪುವಿನೊಂದಿಗೆ ಹೋರಾಡಿದ ವೀರ ಭೀಮರಾಯನಿಗೆ ತನಗಾಗಿರುವ ವಿಪತ್ತನ್ನು ದೂರಗೊಳಿಸಲು ಸಹಾಯ ಮಾಡು ಎಂದು ಈ ಲಾವಣಿಯಲ್ಲಿ ಬೇಡಿಕೊಂಡಿದ್ದಾನೆ. ಸಂದರ್ಭದ ಅವಘಡಗಳಿಗೆ ಲಾವಣಿಗಳು ಸ್ಪಂದಿಸಿರುವುದು ಕಾಣುತ್ತದೆ. ಹೈದರಾಬಾದ್ ಕರ್ನಾಟಕದಲ್ಲಿನ ರಜಾಕಾರರ ಮತಾಂಧ ಧೋರಣೆಯನ್ನು ಖಂಡಿಸಿ ಚನ್ನನಗೌಡ ಮಾಸ್ತರ ಯಲಬುರ್ಗಿ ಅವರು ರಚಿಸಿರುವ ಒಂದು ಜೀ ಪದವನ್ನು ನೋಡಬಹುದಾಗಿದೆ.

'ನಮಜಾತೀ, ನಿಮಜಾತಿ, ಎಲ್ಲ ಜಾತಿಯ ವಿಚಾರಿಸಿ ನೋಡಿರಿ
ಒಂದೇ ಐತಿ ಮಾನವನೀತಿ ತೀ ತೀ ॥ಅನುಪಲ್ಲವಿ॥

ಹಿಂದು ಇರಲಿ ಅಥವಾ ಮುಸಲಿಮನಿರಲಿ, ರಾಜ್ಯದಲ್ಲಿ ಎಲ್ಲರಿಗೂ ಸಮಾನ ಹಕ್ಕೈತೀ
ಈ ಮಾತಿಗೆ ನೀವು ತಪ್ಪಿ ನಡೆದರೆ ಕೆಡತೈತಿ ನಿಮ ರಾಜ್ಯ ಆಡಳತಿ
ರೈತರೆಂದರೆ ರಾಜರ ಮಕ್ಕಳು, ಮಕ್ಕಳೀಗೆ ಹಿರೇತನ ಒಪ್ಪಿಸಿ ಬಿಟ್ಟರೆ ತಂದೆಯ ಗೌರವ
ಹೆಚ್ಚಾಗತೈತೀ ತೀ ತೀ
'ನಮಜಾತೀ ನಿಮಜಾತೀ, ದೇಶವೆಂಬ ವನ ಹಾಳುಮಾಡಿತೋ
ಈ ಜಾತಿಯ ಕೋತಿ॥ ರಜವಿ ನಿಜಾಮರಿಗೆ ತೀ ತೀ'[೧೧] ಸಮಕಾಲೀನ ವಸ್ತು ವಿಷಯ

ಗಳನ್ನು ಒಳಗೊಂಡ ಈ ಲಾವಣಿಗಳು ದೀರ್ಘವಾಗಿರುತ್ತವೆ. ಪ್ರಾಸ ಒಳಪ್ರಾಸ, ಅಂತ್ಯಪ್ರಾಸಗಳಲ್ಲಿ ಕಂಡು ಬರುವ ಇವು ಶಿಷ್ಟಸಾಹಿತ್ಯದ ಲಕ್ಷಣಗಳನ್ನು ಒಳಗೊಂಡಿವೆ ಎಂದರೆ ತಪ್ಪಾಗಲಾರದು. ನಮ್ಮ ಲೇಖಕರು ಎಂದಿಗೂ ಕೋಮುವಾದಿಗಳಾಗಿರುವುದಿಲ್ಲ ಎನ್ನುವುದಕ್ಕೆ ಈ ಲಾವಣಿಯಲ್ಲಿ ಬಳಕೆಯಾಗಿರುವ 'ಹಿಂದು ಇರಲಿ ಅಥವಾ ಮುಸಲಿಮನಿರಲಿ, ರಾಜ್ಯದಲ್ಲಿ ಎಲ್ಲರಿಗೂ ಸಮಾನ ಹಕ್ಕೈತೀ' ಎಂಬಸಾಲುಗಳೇ ಸಾಕ್ಷಿಯಾಗುತ್ತವೆ.

ಅದೇ ರೀತಿಯ ಇನ್ನೊಂದು ಲಾವಣಿ ಇದ್ದು ಹೈದರಾಬಾದ್ ಸಂಸ್ಥಾನ ಸ್ವಾತಂತ್ರ್ಯ ಹೊಂದಿದ ನಂತರ ರಚಿತವಾದ ನಲವಡಿ ಕೃಷ್ಣಶಾಸ್ತ್ರಿಗಳು ಅದನ್ನು ರಚಿಸಿದ್ದಾರೆ. ಒಂದು ಚರಿತ್ರೆಯಂತಿರುವ ಈ ಲಾವಣಿ ಬಹುಮುಖ್ಯ ಎನಿಸುತ್ತದೆ. ಅದು ಹೀಗಿದೆ:

'ಕೇಳಿರಿದೋ ಈ ಕ್ರಾಂತಿ ಕಥೆಯಾ ಹೈದರಾಬಾದಿನ ಶರಣಾಗತಿಯಾ
ಕಾಗ್ರೆಸ್ಸಿನ ಕರೆ ಕಣ್ಣಿರಿನ ಮೋರೆ ಕಾಸಿಮ ರಜವಿ ನರಹತಿಯಾ॥ಪ॥
ಭಾರತದೇಶವು ಸ್ವತಂತ್ರವಾಯಿತು ಬ್ರಿಟೀಶರಾಜ್ಯದಾಳಿಕೆ ಮುಗಿದು
ಭಾರತ ಸಂಸ್ಥಾನಿಕರು ಸೇರಿದರು ಹಿಂದೀ ಒಕ್ಕೂಟವನೊಲಿದು
ಭಾರತಿ ಕಣ್ಣಲ್ಲಿ ನೋಡಿ ನಲಿದಳು ಆನಂದಾಶ್ರಗಳನು ಸುರಿದು
ಸಾರಲೇನು ಹದಗೆಟ್ಟಿತು ಹೈದರಾಬಾದವು ಕಾಂಗ್ರೆಸ್ಸನು ಜರಿದು
ಯಾರದಿಲ್ಲ ಅಧಿಕಾರವೆಂಬ ನೈಜಾಮ ದೊರೆಯು ಮಾರ್ಗವ ತೆರೆದು'

..........................................................................................

'ಆರತಿ ಜಯಜಯ ಭಾರತಿ ಗಾಂಧಿ ಮಹಾತ್ಮರ ಪಡೆಯ ದಯಾಧರಣಿ
ಶೂರ ಸರದಾರ ಸುಬಾಷ ನೇಹರೂ ವೀರರತ್ನಗಳ ಗರ್ಭಗಣಿ
ಸೇರಲಿ ಹೈದರಾಬಾದ ನಿಜಾಮರು ಭಾರತ ಒಕ್ಕೂಟದಿ ಜವದಿ
ಏರಲಿ ರಾಷ್ಟೀಯ ಧ್ವಜ ಹೈದರಾಬಾದಿನ ಸರ್ವಜಗಜ್ಜನದಿ
ಆರತಿಗೈಯಲಿ ಭಾರತಮಾತೆಗೆ ಪ್ರೇಮದಿಂದ ಹಿಂದೂ ಭಗನಿ'[೧೨] ಎಂದು ಮುಕ್ತಾಯವಾಗುತ್ತದೆ.

ಭಾರತಕ್ಕೆ ಬ್ರಿಟೀಶರಿಂದ ಸ್ವಾತಂತ್ರ್ಯ ದೊರೆತಿರುವಾಗ, ಹೈದರಾಬಾದ್ ಸಂಸ್ಥಾನವು ನಿಜಾಮ್ ಆಳ್ವಿಕೆಯಿಂದ ಮುಕ್ತವಾಗಿರುವುದಿಲ್ಲ. ಅಂದಿನ ಸಂಸ್ಥಾನದಲ್ಲಿ ನಡೆದ ಸಾಮಾಜಿಕ, ರಾಜಕೀಯ ಹೋರಾಟಗಳ ಸ್ವರೂಪವನ್ನು ಈ ಲಾವಣಿ ತಿಳಿಸುತ್ತದೆ. ನಿಜಾಮ್ ಅಲ್ಲದೇ ಕಾಸಿಮ್ ರಜ್ವಿ

ಎಂಬ ರಜಾಕಾರನ ನಡೆಸಿದ ದೌರ್ಜನ್ಯಗಳನ್ನು ಈ ಲಾವಣಿ ಕಟ್ಟಿಕೊಡುತ್ತದೆ. ಐತಿಹಾಸಿಕ ಘಟನಾವಳಿಯನ್ನು ವಸ್ತುವನ್ನಾಗಿಸಿಕೊಂಡು ರಚಿತವಾದ ಈ ಲಾವಣಿಯು ಹೈದರಾಬಾದ್ ಸಂಸ್ಥಾನವು ನಿಜಾಮ್ ಆಳ್ವಿಕೆಯಿಂದ ಮುಕ್ತಿಯನ್ನು ಹೋಂದಿದ ಸಂದರ್ಭವನ್ನು ಹೇಳುತ್ತದೆ. ಇದರಲ್ಲಿ ಭಾಗವಹಿಸಿರುವ ರಾಷ್ಟ್ರೀಯ ನಾಯಕರನ್ನು, ವೀರ ಸೇನಾನಿಗಳನ್ನು ಅಲ್ಲಿ ನಡೆದ ಅನೇಕ ಘಟನಾವಳಿಗಳನ್ನು ಆ ಲಾವಣಿಯಲ್ಲಿ ಸ್ಮರಿಸಿಕೊಳ್ಳಲಾಗಿದೆ. ಜನಸಮುದಾಯಗಳು ರಜಾಕಾರರಿಂದ ಮಾತ್ರ ಹಾನಿಗಳಗಾಗದೇ ಸ್ಥಳೀಯ ಕಳ್ಳರು, ಭೂ ಮಾಲೀಕರಿಂದರಲೂ ಹಾನಿಗೊಳಗಾಗಿರುವುದು ಕಂಡುಬರುತ್ತದೆ. ರಜಾಕಾರರು ದರೋಡೆ, ದೌರ್ಜನ್ಯಗಳಲ್ಲಿ ತೊಡಗಿದರೆ, ಊಳ್ಳವರು ಬರಗಾಲ ಎಂದು ಸರ್ಕಾರಕ್ಕೆ ಸುಳ್ಳು ದಾಖಲೆಗಳನ್ನು ನೀಡಿ ಹಣ ಎತ್ತುತ್ತಿದ್ದರು. ರಜಾಕಾರರು ದರೋಡೆ ಕೆಲ ದಿನಗಳದ್ದಾದರೆ, ಇಂತಹ ಸಮಯ ಸಾಧಕರ ದರೋಡೆ ನಿತ್ಯದ್ದಾಗಿರುತ್ತಿತ್ತು. ಹಾಗಾಗಿ ರಜಾಕಾರರ ಸಂದರ್ಭವನ್ನು ಕೇವಲ ಮತೀಯ ದೃಷ್ಟಿಯಿಂದ ನೋಡಿ ಸರಳೀಕರಿಸುವುದು ಉಚಿತವಲ್ಲ. ಒಟ್ಟಾರೆಯಾಗಿ ಲಾವಣಿಗಳು ಜನಜೀವನದ ನಾಡಿಮಿಡಿತದ ಭಾಗವಾಗಿ ಕನ್ನಡದಲ್ಲಿ ಹುಟ್ಟಿದ ಪ್ರಕಾರವಾಗಿ, ಅವು ಇಂದಿಗೂ ಇರುವುದನ್ನು ಕಾಣಬಹುದಾಗಿದೆ.

**೩.೪. ತತ್ವಪದ**

ಮೌಖಿಕ ಪರಂಪರೆಯಲ್ಲಿ ತತ್ವಪದ ಸಾಹಿತ್ಯಕ್ಕೆ ತನ್ನದೇ ಆದ ಮಹತ್ವವಿದೆ. 'ತತ್ವ' ಎಂದರೆ ನುಡಿದವನ ಸಿದ್ಧಾಂತ ಅಥವಾ ನಿಜಸ್ಥಿತಿ ಎಂದರ್ಥ. ಈ ನುಡಿಯು ಜೀವನಾನುಭವದಿಂದ ಪಕ್ವಗೊಂಡದ್ದಾಗಿರುತ್ತದೆ. ಸಿದ್ಧಾಂತವೊಂದು ಹಾಡಿನ ಮೂಲಕ ಅಭಿವ್ಯಕ್ತಗೊಂಡಾಗ ಅದು ತತ್ವಪದ ಎನಿಸುತ್ತದೆ. ಅದಕ್ಕೆ ಮನುಷ್ಯನ ಬದುಕನ್ನು ಹಸನುಗೊಳಿಸುವ ಸಾಮರ್ಥ್ಯವಿರುತ್ತದೆ. ಅದಕ್ಕಾಗಿಯೇ ಈ ಸಂತರ, ಯೋಗಿಗಳ, ಅನುಭಾವಿಗಳ ತತ್ವಪದಗಳನ್ನು ಲೌಕಿಕರು ನಿರ್ಮಲ ಮನಸ್ಸಿಗಾಗಿ ವ್ಯಕ್ತಿಗತವಾಗಿಯೂ, ಸಾಮೂಹಿಕವಾಗಿಯೂ ಹಾಡುವ ಪರಂಪರೆ ಇದೆ. ತತ್ವಪದಕಾರರು ತತ್ವವನ್ನು ಪದವಾಗಿ ವ್ಯಕ್ತಪಡಿಸಲು ನಾದ, ಲಯವನ್ನು ಅವಲಂಭಿಸುತ್ತಾರೆ, ನಾದ ಲಯಕ್ಕಾಗಿ ಏಕತಾರಿಯನ್ನು, ಚಿಟಿಕೆಯನ್ನು ಉಪಯೋಗಿಸಿಕೊಂಡು ಹಾಡುತ್ತಾರೆ. ಜನಸಮುದಾಯಗಳು ಭಜನೆಗಳಲ್ಲಿ ಹಾಡುವ ಮೂಲಕ ಈ ತತ್ವಪದ ಸಾಹಿತ್ಯವನ್ನು ಮೌಖಿಕವಾಗಿ ಉಳಿಸಿಕೊಂಡು ಬಂದಿವೆ. ಮೌಖಿಕ ಪರಂಪರೆಯ ಈ ಸಾಹಿತ್ಯವನ್ನು ಈಚೆಗೆ ಅಕ್ಷರ ಸಂಸ್ಕೃತಿಯ ಪರಿಣಾಮವಾಗಿ ಲಿಖಿತಕ್ಕೆ ಪರಿವರ್ತಿಸಿ ಕೃತಿ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ತತ್ವಪದಕಾರರು ವ್ಯಕ್ತಿಗತವಾಗಿ 'ದೇವರ'ನ್ನು ಸಾಕ್ಷೀಕರಿಸಿಕೊಳ್ಳಬಹುದೆಂದು ನಂಬಿದವರು. ಇಂಥ ಅನುಭವಕ್ಕಾಗಿ ಬೇಕಾಗುವ ತನ್ಮಯತೆಯನ್ನು ಹೊಂದಲು, ಲೌಕಿಕದ ಕಟ್ಟುಪಾಡುಗಳನ್ನು ಬದಿಗಿರಿಸಿ ತಮ್ಮ ಒಳದನಿಗೆ ಮಾತ್ರ ಒಗೊಡುವ ಸ್ಥಿತಿಗೆ ಬದ್ಧರಾದವರು.

ತತ್ವಪದಗಳ ಉಗಮ ಸ್ವರೂಪವನ್ನು ವಿದ್ವಾಂಸರಾದ ಎಚ್.ಎಸ್. ಶಿವಪ್ರಕಾಶ್ ಅವರು 'ತತ್ವಪದ ಗತದ ಕುತೂಹಲವಾದ ಒಂದು ಕಾವ್ಯ ಪ್ರಕಾರವಲ್ಲ. ಅದೊಂದು ಸಂಸ್ಕೃತಿ, ಆಚರಣೆ ಯಾಕೆಂದರೆ ಅದಕ್ಕೆ ಒಂದು ಸಾಮೂಹಿಕ ಚಹರೆ ಇದೆ. ಸಂಗೀತ, ಹಾಡುಗಾರಿಕೆ,

ತಾತ್ವಿಕತೆ, ಧೂಪದೀಪಗಳು ಎಲ್ಲವೂ ಅದರಲ್ಲಿ ಕೂಡಿರುತ್ತವೆ. ಜೊತೆಗೆ ಅದಕ್ಕೊಂದು ಪವಿತ್ರ ಭೂಗೋಳವಿದೆ; ಅದು ನಡೆಯುವುದು ಸಂತರ ಸನ್ನಿಧಿಯಲ್ಲಿ, ಗದ್ದುಗೆಯಲ್ಲಿ, ದೇವಸ್ಥಾನದ ಹಜಾರದಲ್ಲಿ'[೧೩] ಎಂದು ಹೇಳುತ್ತಾರೆ. ವಿದ್ವಾಂಸರ ಈ ಅಭಿಪ್ರಾಯದಿಂದ ತತ್ವಪದ ಸಾಹಿತ್ಯವು ಪ್ರಾಚೀನವಾದುದಲ್ಲ, ಅದು ವಸಾಹತುಶಾಹಿಯ ಆಳ್ವಿಕೆಯ ನಂತರದ ಅಂದರೆ ೧೭-೧೮ನೇ ಶತಮಾನದಲ್ಲಿ ಜನಸಾಮಾನ್ಯರು ಕಟ್ಟಿಕೊಂಡು ಬಂದ ಪರಂಪರೆ ಎಂದು ತಿಳಿಯಬಹುದು. ತತ್ವಪದಕಾರರು ತಾವು ನಂಬಿದ ಶಕ್ತಿಗೆ ಶರಣಾಗಿ, ಹಿಡಿದ ಹಾದಿಯಲ್ಲಿ ಮೌನಸಂಧಾನ ನಡೆಸಿ ಲೌಕಿಕವನ್ನು ಮೀರಿನಿಲ್ಲಲು ಯತ್ನಿಸಿದವರು. ಲೌಕಿಕಕ್ಕಿಂತ ಭಿನ್ನವಾದ ಮತ್ತು ಲೌಕಿಕವನ್ನು ಮೀರುವ ಪರಿಯನ್ನು ತೋರಿಸುವ 'ಗುರು'ವಿಗಾಗಿ ಹಂಬಲಿಸಿ, ತಮ್ಮ ಒಳದನಿಯ ಪ್ರವೇಶಕ್ಕೆ ಗುರುವಿನ ಹಸ್ತಕದ ಸ್ಪರ್ಶದೊಂದಿಗೆ ಸಾಧನೆಯ ಹಾದಿಯನ್ನು ಹಿಡಿದವರು. ಇದು 'ಗುರು-ಶಿಷ್ಯ' ವ್ಯವಸ್ಥೆಯಲ್ಲಿ ನಡೆಯುವ ಒಂದು ಸಂಪ್ರದಾಯ. ತತ್ವಪದಕಾರರು ವ್ಯಕ್ತಿಗತವಾಗಿ ತಮ್ಮ ಆತ್ಮೋನ್ನತಿಗಾಗಿ ಧ್ಯಾನ, ಯೋಗದಲ್ಲಿ ನಿರತರಾಗಿ ಲೌಕಿಕವಾದ ವ್ಯಾಮೋಹವನ್ನು ಕಳೆದುಕೊಂಡು ಯೋಗಿಗಳು, ಸಂತರು ಆದರು. ತಮ್ಮ ಹಾದಿಯಲ್ಲಿ ಸಾಗಲು ಲೌಕಿಕರನ್ನು ಪ್ರೇರೇಪಿಸುತ್ತಾ ಲೋಕಕಲ್ಯಾಣವನ್ನು ಹಂಬಲಿಸಿ ಹಾಡಿದರು. ಆ ಹಾಡು ತತ್ವಪದವಾಗಿ ಬೆಳೆದುನಿಂತಿದೆ.

ತತ್ವಪದ ಸಾಹಿತ್ಯದಲ್ಲಿ ಮುಖ್ಯವಾಗಿ ಗುರುಸ್ಮರಣೆ, ಸತಿಪತಿಭಾವ, ಅನುಭಾವ, ಬೆಡಗು ಕುರಿತ ಪದಗಳು ಎಲ್ಲ ತತ್ವಪದಕಾರರಲ್ಲಿ ಕಾಣಿಸುತ್ತವೆ. ಕೆಲ ತತ್ವಪದಕಾರರಲ್ಲಿ ಕೇವಲ ನೀತಿಯನ್ನು ಭೋಧಿಸುವ ಪದಗಳು ಹೆಚ್ಚಾಗಿವೆ. ಸಾಮಾಜಿಕ, ರಾಜಕೀಯ ಧಾರ್ಮಿಕ ವಿಡಂಬನೆ ಕುರಿತ ಪದಗಳು ಕೆಲವರಲ್ಲಿದ್ದರೆ, ಹಾದರ, ಗಾಂಜಾ, ಗೂಳಿ, ಮೂಗುತಿ, ದೆವ್ವ, ಚೇಳು ಮುಂತಾದ ಸಮಾಜದಲ್ಲಿ ಕಾಣುವ ವಸ್ತು-ವಿಷಯಗಳನ್ನು ಎತ್ತಿಕೊಂಡು ರೂಪಕಗಳನ್ನಾಗಿ ಬಳಸಿಕೊಂಡು ಬರೆದ ಲೋಕನೀತಿಯ ಪದಗಳು ಕೆಲವರಲ್ಲಿ ವಿಶೇಷವಾಗಿವೆ. ಮಡಿ-ಮೈಲಿಗೆ, ಜಾತಿಯತೆ, ಸಾಮಾಜಿಕ ಅಸಮಾನತೆಯನ್ನು ವಿರೋಧಿಸಿ ಬರೆದ ತತ್ವಪದಗಳು ಎಲ್ಲರಲ್ಲಿ ಕಾಣುತ್ತವೆ. ವಸಾಹತುಶಾಹಿ ಪರಿಣಾಮದಿಂದ ಭಾರತೀಯ ಸಮಾಜದಲ್ಲಿ ಕಾಣಿಸಿಕೊಂಡ ಹೊಸ ವ್ಯವಸ್ಥೆ, ಅದರಿಂದ ಉದ್ಭವಿಸಿದ ಸಮಸ್ಯೆ ಹಾಗೂ ಪರಿಣಾಮಗಳನ್ನು ಕುತೂಹಲದಿಂದ, ಆತಂಕದಿಂದ ಕಂಡು ಪ್ರತಿಕ್ರಿಯಿಸಿ ಕೆಲವರು ಬರೆದಿದ್ದಾರೆ. ಆಧುನಿಕ ಕಾಲದ ಬಿಕ್ಕಟ್ಟುಗಳು ಕೂಡ ತತ್ವಪದದಲ್ಲಿ ವ್ಯಕ್ತವಾಗಿವೆ. ಲೋಕದ ವಿದ್ಯಮಾನಗಳೆಲ್ಲ ಲೌಕಿಕದ ಮೂಲಕ ಹುಟ್ಟಿಬೆಳೆದು ಅನುಭಾವದ ನೆಲೆಯಲ್ಲಿ ತತ್ವಪದಗಳಾಗಿ ರೂಪುಗೊಂಡಿವೆ. ಅಂತಿಮವಾಗಿ ತತ್ವಪದ ಸಾಹಿತ್ಯ ವ್ಯಕ್ತಿ-ಸಮಾಜದ ಒಳತಿಗಾಗಿ ಮರುಗಿದೆ. ಅಷ್ಟೇ ಅಲ್ಲದೆ ಅದು ಜನಸಾಮಾನ್ಯರ ಮನ ಮಿಡಿಯುವಂತೆ ಮಾಡಿದೆ.

### ೫.೪.೧. ತತ್ವಪದಕಾರರು

ಸಾಹಿತ್ಯ ಪರಂಪರೆಯಲ್ಲಿ ಲೋಕದ ಹಿತವನ್ನು ಬಯಸಿ ಅಲ್ಲಿನ ಮೌಢ್ಯತೆಯನ್ನು ತೊಡಗಿಸಲು ಪ್ರಯತ್ನಿಸಿದವರಲ್ಲಿ ತತ್ವಪದಕಾರರು ಪ್ರಮುಖರಾಗುತ್ತಾರೆ. 'ವಚನ' ರಚನೆ ಮಾಡಿದವರನ್ನು ಶರಣರೆಂದು, 'ಕೀರ್ತನೆ' ರಚಿಸಿದವರನ್ನು ಕೀರ್ತನಕಾರರೆಂದು, ದಾಸರೆಂದು

ಗುರುತಿಸುವ ರೂಢಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಇದೆ. ತಾವು ನಂಬಿದ ಶಕ್ತಿಗೆ ಶರಣಾಗಿರುವುದು, ದಾಸನಾಗಿರುವುದು ಎಂಬ ಅರ್ಥದಲ್ಲಿ ಹಾಗೂ ಅವರ ತಾತ್ವಿಕ ನಿಲುವುಗಳಿಂದ ಅವರನ್ನು 'ಭಕ್ತರು' ಎನ್ನಲಾಗಿದೆ. ಹಾಗೆಯೇ 'ತತ್ವಪದ' ಬರೆದವರನ್ನು ತತ್ವಪದಕಾರರು ಎಂದು ಸಾಮಾನ್ಯವಾಗಿ ಕರೆಯಲಾಗುತ್ತಿದೆ. ಇವರೆಲ್ಲರನ್ನೂ ಸಾಧಕರು, ಅನುಭಾವಿಗಳು, ಸಂತರು, ಆರೂಢರು, ಯೋಗಿಗಳು ಎಂದು ಕೂಡ ಭಾವಿಸಲಾಗುತ್ತದೆ. ಅವರು ಲೋಕದ ಹಿತಕ್ಕಾಗಿ ತಮ್ಮನ್ನು ಅರ್ಪಿಸಿಕೊಂಡವರು. ಎಲ್ಲ ಜೀವಿಗಳಿಗೆ ಲೇಸನು ಬಯಸುವ ಉದಾತ್ತ ನಿಲುವಿನವರು. ಲೌಕಿಕರಿಗೆ ಭವದ ದುಃಖವನ್ನು ಮೀರಲು ಸರಳತನ, ಪ್ರಾಮಾಣಿಕತೆ, ಹೆಚ್ಚು ಆಮಿಷಗಳಿಗೆ ಬಲಿಯಾಗದಂತೆ ಮಿತವ್ಯಯದಿಂದ ಬದುಕನ್ನು ಹಸನಾಗಿರಿಸಿಕೊಂಡು ಬಾಳುವ ಹಾದಿಯನ್ನು ಹಿಡಿಯಲು ಬೋಧಿಸಿದವರು. ಇಂಥ ಬದುಕನ್ನೇ ಬಾಳಿ ನಿದರ್ಶನವಾಗಿ ನಿಂತವರು ತತ್ವಪದಕಾರರು. ತತ್ವಪದಕಾರರು ಮೂಲತಃ ಮೌಖಿಕ ಪರಂಪರೆಗೆ ಸೇರಿದವರು. ಇವರು ಲಿಖಿತ ರೂಪದ ವೇದ, ಶಾಸ್ತ್ರ, ಪುರಾಣಗಳನ್ನು ಮತ್ತು ಇವುಗಳನ್ನು ಓದುವ, ಇವುಗಳನ್ನೇ ಬಂಡವಾಳ ಮಾಡಿಕೊಂಡ ಪುರೋಹಿತರನ್ನು ಪ್ರಶ್ನಿಸಿ ಅನೇಕ ತತ್ವಪದಗಳಲ್ಲಿ ಖಂಡಿಸಿದ್ದಾರೆ. ವಚನಕಾರರು ಇವು ಜನವಿರೋಧಿ ತತ್ವವನ್ನು ಹೊಂದಿವೆ ಎಂದು ಪ್ರಶ್ನಿಸಿದರು. ಅವರಿಗೆ ಹಾಗೆ ಪ್ರಶ್ನಿಸುವ ಮುಂಚೆ ಅವನ್ನು ಅಭ್ಯಾಸ ಮಾಡಿದ ಪರಿಣತಿಯಿತ್ತು. ಆದರೆ ತತ್ವಪದಕಾರರು ಅಕ್ಷರ ಸಂಸ್ಕೃತಿಗೆ ಸೇರಿದವರೂ ಅಲ್ಲ. ಧರ್ಮಶಾಸ್ತ್ರಗಳನ್ನು ಓದಿ ತಿಳಿಯಬೇಕೆಂಬ ಹಂಬಲದವರೂ ಅಲ್ಲ. ಕೇವಲ ಅನುಭವ, ಯೋಗ ಮತ್ತು ಅಂತರಂಗದ ದನಿಗೆ ಓಗೊಟ್ಟು ಮುಕ್ತವಾಗಿ ಇರಲು ಬಯಸಿದವರು. ಜಾತಿ, ಮತ, ಗುಡಿ, ದೇವರು, ಮಡಿ, ಮೈಲಿಗೆ ಇಂಥ ಬಾಹ್ಯ ಆಡಂಬರಗಳಿಗೆ ವಿರೋಧಿಯಾಗಿ ನಿಂತವರು. ಜನತೆಯ ನಡುವೆ ಇದ್ದುಕೊಂಡು, ಜನತೆಯ ಕಲ್ಯಾಣವನ್ನು ಬಯಸಿದವರು. ತಮ್ಮ ತಮ್ಮ ಹಿತಗಳಿಗಾಗಿ ಹುಟ್ಟಿಸಿಕೊಂಡ ಬಾಹ್ಯರೂಪದ ಆಚರಣೆಗಳನ್ನು ಅಲ್ಲಗಳೆದು ಬೆಳೆದವರು. ಯಾವುದೇ ಮೋಹಕ್ಕೆ, ವಾಸನೆಗೆ ಬಲಿಯಾಗದೆ ಇಂಥವುಗಳನ್ನು ಮೀರಿ ನಿಂತವರು.

೧೨ನೇ ಶತಮಾನವು ಹಲವು ಕಾರಣಗಳಿಗಾಗಿ ವಿಶಿಷ್ಟತೆಯನ್ನು ಪಡೆದಿದೆ. ಸಮಾಜದ ಅನೇಕ ವಲಯಗಳಲ್ಲಿ ಹಲವಾರು ನೆಲೆಗಳಲ್ಲಿ ಅಸಮಾನತೆ ತುಂಬಿತ್ತು. ಸಮಾನತೆಯನ್ನು ತರಲು ವಚನಕಾರರು ಸಾಮೂಹಿಕ ಹೋರಾಟಕ್ಕೆ ತಯಾರಾದರು. ಪ್ರಭುತ್ವ, ಮತ, ಜಾತಿ, ಮುಂತಾದವುಗಳನ್ನು ಪ್ರಶ್ನಿಸಿ 'ಎಲ್ಲರೂ ಸಮಾನರು' ಎಂಬ ತತ್ವದ ನೆಲೆಯಲ್ಲಿ ರಚನಾತ್ಮಕವಾದ ಹೋರಾಟವನ್ನು ನಡೆಸಿದರು. ಈ ಹೋರಾಟದಿಂದ ಸಮಾಜದಲ್ಲಿ ಸಂಘರ್ಷಗಳುಂಟಾದವು. ಜನರ ಮನಸ್ಸುಗಳು ಕದಡಿದವು. ಹೊಸ ಸಮಾಜದ ಕನಸುಗಳು ಮೂಡಿದವು. ವಚನಕಾರರು ಮೂಲತಃ ಸಾಧಕರು, ಅನುಭಾವಿಗಳು, ಸಮಾಜ ಸುಧಾರಕರು. ಸಮಾಜದ ಹಲವು ಅನಿಷ್ಟಗಳ ಜತೆ ಸಂಘರ್ಷಕ್ಕೆ ಇಳಿದಂತೆ ವ್ಯಕ್ತಿಗತ ನೆಲೆಯಲ್ಲಿ ತಮ್ಮ ಅಂತರಂಗದ ದನಿಯ ಜತೆ ಸಂವಾದ–ಸಂಘರ್ಷಕ್ಕೆ ಇಳಿದು ತಮ್ಮೊಳಗಿದ್ದ ಲೌಕಿಕ ಆಸೆ–ಆಮಿಷಗಳನ್ನು ಮೀರಿ ಮನುಷ್ಯನಾಗುವ ಪರಿಯನ್ನು ಕಂಡುಕೊಂಡರು. ಈ ವಚನಕಾರರು ತಮ್ಮ ಅನೇಕ ಬಗೆಯ ತುಡಿತಗಳನ್ನು,

ಆತಂಕಗಳನ್ನು ವ್ಯಕ್ತಪಡಿಸಲು 'ವಚನ' ಎಂಬ ರೂಪವನ್ನು ರೂಪಿಸಿಕೊಂಡರು. ತಮ್ಮ ತಾತ್ವಿಕತೆಯನ್ನು ವಚನಗಳಲ್ಲಿ ನಿರೂಪಿಸಿದರು. ಅಂತ ವಚನಗಳು ಅಂದಿನಿಂದ ಇಂದಿನವರೆಗೆ ಧಾರ್ಮಿಕವಾಗಿ, ಸಾಮಾಜಿಕವಾಗಿ, ಸಾಹಿತ್ಯಕವಾಗಿ ಮಹತ್ವವನ್ನು ಪಡೆದಿವೆ.

ಶರಣರು ವಚನಗಳನ್ನು ಬರೆದು ಒಂದು ಮಾರ್ಗವನ್ನು ನಿರ್ಮಿಸಿದರು. ಈ ಮಾರ್ಗದಲ್ಲಿ ನಡೆದವರ ಪರಂಪರೆಯೇ ಇದೆ. ತತ್ವಪದಕಾರರು ಈ ಪರಂಪರೆಗೆ ಸೇರಿದವರು. ಸ್ವರೂಪದಲ್ಲಿ ಬೇರೆ ಕಂಡರೂ ಹಲವು ನೆಲೆಗಳಲ್ಲಿ ಇವರು ವಚನಕಾರರನ್ನು ಅನುಸರಿಸಿದವರು. ವಚನ ರೂಪವು ಗದ್ಯ-ಪದ್ಯದಿಂದ ಕೂಡಿದ ರೂಪವಾಗಿದೆ. ಆದರೂ ವಚನ ಹಾಡಲು ಬರುತ್ತಿತ್ತು. ಸ್ವರ ಸೇರಿಸಿ ಹಾಡುವ 'ಸ್ವರ ವಚನ'ಗಳನ್ನು ವಚನಕಾರರು ಬರೆದಿರುವುದನ್ನು ಈಗ ಕನ್ನಡ ಸಾಹಿತ್ಯದಲ್ಲಿ ಗುರುತಿಸಲಾಗಿದೆ. ಸ್ವರದ ಜೊತೆಗೆ ತಾಳ, ಲಯ, ರಾಗ ಮುಂತಾದ ನಿಯಮಗಳನ್ನು ಕಟ್ಟಿಕೊಂಡು ಹಾಡಲು ಬರುವಂಥ ಸ್ವರವಚನಗಳನ್ನು ರಚಿಸುತ್ತ ಬಂದವರ ಒಂದು ಪರಂಪರೆಯೇ ಇದೆ. ಸಕಲೇಶ ಮಾದರಸ ಮೊದಲುಗೊಂಡು ಅನೇಕ ವಚನಕಾರರು ಸ್ವರವಚನಗಳನ್ನು ರಚಿಸಿರುವುದು ಮೊದಲ ಹಂತವಾಗಿ ನಂತರ ನಿಜಗುಣ ಶಿವಯೋಗಿ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಬಾಲಲೀಲಾ ಮಹಾಂತ ಶಿವಯೋಗಿ, ಘನಮಠದ ಶಿವಯೋಗಿ ಮುಂತಾದವರು ಎರಡನೆಯ ಹಂತವಾಗಿ, ೧೮-೧೯ನೇ ಶತಮಾನ ಮತ್ತು ನಂತರವೂ ಸೇರಿದಂತೆ ರಾಮಪುರ ಬಕ್ಕಯ್ಯ, ಕಡಕೋಳ ಮಡಿವಾಳಪ್ಪ, ಕೂಡಲೂರು ಬಸಲಿಂಗಪ್ಪ, ಶಿಶುನಾಳ ಷರೀಫ ಸಾಹೇಬ, ಕೈವಾರ ನಾರಾಯಣಪ್ಪ, ಮೋಟ್ನಹಳ್ಳಿ ಹಸನಸಾಹೇಬ, ವಡಕಿ ತಾತಪ್ಪಯ್ಯ, ಖೇಮಣ್ಣ, ಬಿದನೂರ ಗಂಗಮ್ಮ, ನಿಡವಂಚಿ ಭದ್ರೇಶ್ವರ ಮುಂತಾದವರು ಮೂರನೆಯ ಹಂತದಲ್ಲಿ ಕಾಣಿಸಿಕೊಂಡಿದ್ದಾರೆ. ಈ ಮೂರನೆಯ ಹಂತದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸೇರಿದ ಅನೇಕರು ಈ ತತ್ವಪದ ಸಾಹಿತ್ಯವನ್ನು ರಚಿಸಿದ್ದಾರೆ. 'ಕೈವಲ್ಯ ಸಾಹಿತ್ಯ' 'ಅನುಭಾವ ಸಾಹಿತ್ಯ', 'ಸ್ವರವಚನ ಸಾಹಿತ್ಯ' ಮತ್ತು 'ತತ್ವಪದ' ಇತ್ಯಾದಿ ಹೆಸರುಗಳಿಂದ ಇದನ್ನು ಕರೆಯಲಾಗುತ್ತದೆ.

ತತ್ವಪದಕಾರರು ತತ್ವಪದ ಸಾಹಿತ್ಯದಲ್ಲಿ ಗುರುವಿಗೆ ಬಹುಮುಖ್ಯ ಸ್ಥಾನವನ್ನು ಕೊಟ್ಟಿದ್ದಾರೆ. ಮೂಲತಃ ಅವರು ಸಾಧಕರು, ಯೋಗಿಗಳಾಗಿದ್ದಾರೆ. ಇವರಿಗೆ ಸಾಧನೆಯ ಮಾರ್ಗವನ್ನು ತಿಳಿಯಲು ಗುರು ಬೇಕು. ತತ್ವಪದಕಾರರಲ್ಲಿ ಗುರುವನ್ನು ಪಡೆಯುವುದು ಒಂದು ಮುಖ್ಯವಾದ ಸಂಪ್ರದಾಯವಿದೆ. ಪ್ರತಿಯೊಬ್ಬ ತತ್ವಪದಕಾರನಿಗೆ ಒಬ್ಬ ಗುರು ಇದ್ದೇ ಇರುತ್ತಾನೆ. ಅವನ ಉಪದೇಶಗಳಿಂದಲೇ ಆತ ಮುಕ್ತಿಯ ಮಾರ್ಗವನ್ನು ಕಂಡುಕೊಳ್ಳುತ್ತಾನೆ. ಪ್ರತಿಯೊಬ್ಬ ಸಾಧಕ ಕಡ್ಡಾಯವಾಗಿ ಗುರುವನ್ನು ಪಡೆದುಕೊಳ್ಳಬೇಕು. 'ಹಸ್ತ-ಮಸ್ತಕ'ವಾಗಬೇಕು. ಅಂದರೆ ಸಾಧಕನ ಮಸ್ತಕದ ಮೇಲೆ ಗುರುವು ಹಸ್ತವನ್ನಿಡುವುದು. ಅಲ್ಲಿಗೆ ಸಾಧಕನಿಗೆ ಗುರು ನಿಮಿತ್ತನಾಗುತ್ತಾನೆ. ಗುರುವಿನ ಸ್ಮರಣೆಯಿಂದಲೇ ತನ್ನ ಸಾಧನೆಯ ಹಾದಿಯನ್ನು ಸುಗಮಗೊಳಿಸಿಕೊಳ್ಳುತ್ತಾನೆ. ತತ್ವಪದ ಸಾಹಿತ್ಯ ರಚನೆಗೆ ಮೊದಲಿಗನಾದ ನಿಜಗುಣ ಶಿವಯೋಗಿಯು 'ಶ್ರೀ ಗುರು

ವಚನೋಪದೇಶವನಾಲಿಸಿದಾಗಳಹುದು ನರರಿಗೆ ಮುಕುತಿ' ಎಂದಿದ್ದಾನೆ. ಗುರುವಿನ ಉಪದೇಶವನ್ನು ಆಲಿಸಿದ ಕ್ಷಣದಿಂದಲೇ ನರರಿಗೆ ಮುಕ್ತಿಯ ಮಾರ್ಗ ತೆರೆಯುತ್ತದೆ ಎಂಬ ಮಾತಿನಿಂದ ಗುರುವಿನ ಸ್ಥಾನ ಎಂಥದ್ದೆಂದು ತಿಳಿಯುತ್ತದೆ.

'ನರನ ಕೆಡಿಸಿ ಹರನ ಮಾಡಿದ ಸದ್ಗುರು ರಾಯ'(ಕೊಡಲೂರು ಬಸವಲಿಂಗಪ್ಪ), 'ಭವಗೆಲಿಸು ಗುರುವಿನ ಕೂಡೋ' (ಕಡಕೋಳ ಮಡಿವಾಳಪ್ಪ), 'ಹರ ಮುನಿದರೆ ಗುರು ಕಾಯ್ವನು ಶಾಶ್ವತ' (ನೀರಲಕೇರಿ ಬಸವಲಿಂಗ ಶರಣ) ಎಂಬ ತತ್ವಪದಕಾರರ ಈ ಮಾತುಗಳನ್ನು ಗಮನಿಸಬೇಕು. ಆಶೆ–ಆಮಿಷಗಳಿಂದ ಭವದ ಮೇಲೆ ಮೋಹ ಇರಿಸಿಕೊಂಡವನೇ ನರ. ಈ ಮೋಹವನ್ನು ಹರಿದು ಬೀಸಿದರೆ ಮನುಷ್ಯನೇ ಹರನಾಗುತ್ತಾನೆ. ನರನನ್ನು ಹರನನ್ನಾಗಿ ಮಾಡುವ ಶಕ್ತಿ ಗುರುವಿಗಿದೆ. ಹರನಾಗುವುದು ಎಂದರೆ ಲೌಕಿಕದ ವ್ಯಾಮೋಹವನ್ನು ಮೀರಿ ನಿಲ್ಲುವುದು. ಭೋಗಿಯಾಗುವುದಕ್ಕಿಂತ ಯೋಗಿಯಾಗುವುದು ಎಂದರ್ಥ. ಯೋಗಿಯಾಗುವುದು, ಸಂತನಾಗುವುದು ಎಂದರೆ ಸಂಸಾರದ ಜವಾಬ್ದಾರಿಯಿಂದ ವಿಮುಕ್ತನಾಗುವುದು ಎಂದರ್ಥವಲ್ಲ. ಸಂಸಾರದಲ್ಲಿದ್ದೂ ಇಲ್ಲದಂತಿರುವುದು. ಸಂಸಾರ ಅಥವಾ ಭವದ ಮೇಲೆ ಅತಿ ಆಶೆ ಇರಬಾರದು. ಪ್ರೀತಿಯಿರಬೇಕು ಎಂಬುದೇ ಈ ತತ್ವಪದಕಾರರ ಮುಖ್ಯ ನಿಲುವು.

ತತ್ವಪದಕಾರರು ವೇದ, ಶಾಸ್ತ್ರ, ಪುರಾಣಗಳ ವೇದಾಂತವನ್ನು ಓದಿ ಅವುಗಳನ್ನು ಅನುಸರಿಸಿದವರಲ್ಲ. ವಚನಕಾರರು ಅವುಗಳನ್ನು ಓದಿ ಪ್ರಶ್ನಿಸಿದರು. ಆದರೆ ತತ್ವಪದಕಾರರು ಹೆಚ್ಚಾಗಿ ಓದಿನಿಂದ ಜ್ಞಾನವನ್ನು ಪಡೆದವರಲ್ಲ. ಅನುಭವದಿಂದ ಕಲಿತವರು. ಅದಕ್ಕಾಗಿಯೇ, 'ದಾರಗೊಡವಿ ನಮಗೇನಾದರಿ ಗುರು ತೋರಿದ ಹಾದಿಯೊಳಗಿರಬೇಕರಿ'(ಕಡಕೋಳ ಮಡಿವಾಳಪ್ಪ)ಎಂದು ಹೇಳಿರುವುದು. ಅವರು ಬೌದ್ಧಿಕ ಚಿಂತನೆಗಿಂತ ತಮ್ಮ ಅಂತರಂಗದ ದನಿಗೆ ಮಿಡಿದವರು. ಲೌಕಿಕರಿಗೆ ಭವದ ಕಷ್ಟಗಳು ಸಮಾಜದ 'ವ್ಯವಸ್ಥೆ'ಯಿಂದಲೇ ಬಂದಿವೆ. ಸಮಾಜದ 'ಅಸಮಾನತೆ'ಗೆ ಯಾರು ಕಾರಣರೆಂದು ಚಿಂತಿಸುವುದಿಲ್ಲ. ಬಂದ ಕಷ್ಟಗಳನ್ನು ನೀಗಿಸಿಕೊಳ್ಳಲು ತತ್ವಪದಕಾರರು ಗುರುವಿನ ಮೊರೆ ಹೋಗುವುದನ್ನು ಗಮನಿಸಬಹುದು.

ಯಾತಕ್ಕೆ ಚಿಂತೆ ಮನವೆ ಗುರುನಾಥನಿರ
ಲ್ಯಾತಕ್ಕೆ ಚಿಂತೆ ಮನವೆ
ಯಾತಕ್ಕೆ ಚಿಂತೆ ಗುರುನಾಥನ ಕರುಣದಿ
ಪಾತಕ ಪಿಂಗಿ ಪರಮಾತ್ಮನಾದ ಬಳಿಕ್ಯಾತಕ್ಕೆ.'[೧೯].(ಗಬ್ಬೂರು ಹಂಪಣ್ಣ) ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಗಬ್ಬೂರಿನ ಅರಕೇರಿಯ ಈ ತತ್ವಪದಕಾರ ದೇವರಿರುವ ಸ್ಥಳ ಕಾಶಿ, ಕೈಲಾಸ ಎಂಬ ನಂಬಿಕೆಗಳನ್ನು ಕೈಬಿಟ್ಟು ಗುರುವಿನ ಅಂಗಳವನ್ನು ಕಾಶಿಯೆಂದು, ಗುರುವಿನ ಮನೆಯನ್ನು ಕೈಲಾಸವೆಂದು ತಿಳಿಯುತ್ತಾನೆ. ಗುರುವನ್ನು ನಂಬಿದವರಿಗೆ 'ನಿಜ ಮುಕ್ತಿ ಸ್ಥಿರ' ಎಂಬ ನಿಲುವು ತತ್ವಪದಕಾರರದಾಗಿದೆ.

'ಎಂಟು ಮಂದಿಯ ಕಡದನ
ಆರು ಮಂದಿನ ಬಗದನ

ಮೂರು ಮಂದಿನ ಬಿಡಿಸಿ ಪಾರು ಮಾಡಿದ ನನಗ

ಪರದೇಶಕ ಕರದೊಯ್ದನೆ'.[೧೫] (ರಾಮಪುರ ಬಕ್ಕಪ್ಪಯ್ಯ)

ತತ್ವಪದಗಳ ವೈಶಿಷ್ಟ್ಯವೆಂದರೆ, ಅವುಗಳ ಹೊರ ಅರ್ಥವು ಸರಳವಾಗಿಯೂ ಲೌಕಿಕವಾಗಿಯೂ ಕಾಣುತ್ತವೆ. ಆದರೆ ಅವುಗಳ ಒಳ ಅರ್ಥವು ಗಂಭೀರ, ಅರ್ಥವತ್ತಾಗಿ, ಉನ್ನತವಾದ ಗೂಡಾರ್ಥವನ್ನು ಹೊಂದಿರುತ್ತವೆ. ಬಕ್ಕಪ್ಪಯ್ಯನ ಈ ತತ್ವಪದ ಸರಳವಾಗಿದೆ. ಆದರೆ ಅರ್ಥವನ್ನು ಬಿಡಿಸಿದರೆ ಇದರ ಮಹತ್ವ ತಿಳಿಯುತ್ತದೆ. ಜನ ಸಾಮಾನ್ಯರ ನಡುವೆ ಬೆಳೆದ, ಅವರಿಗಾಗಿಯೇ ಹಾಡಿದ. ಈ ತತ್ವ ಪದದಲ್ಲಿ ಎಂಟು 'ಮಂದಿ ಎಂದರೆ' ಅಷ್ಟಮದಗಳೆಂದು(ಕುಲ, ಛಲ, ಧನ, ರೂಪ, ಯೌವನ, ವಿದ್ಯೆ, ರಾಜ, ತಪೋ) 'ಆರು ಮಂದಿ' ಎಂದರೆ ಅರಿಷಡ್ವರ್ಗಗಳು (ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ) 'ಮೂರು ಮಂದಿ' ಎಂದರೆ (ಹೆಣ್ಣು, ಹೊನ್ನು, ಮಣ್ಣು)ಮಾಯೆಗಳು. ಮನುಷ್ಯನನ್ನು ಸುತ್ತುವರಿದು ಅಜ್ಞಾನಕ್ಕೆ ದಾರಿಮಾಡುವ ಇವುಗಳನ್ನು ಬಿಡಿಸಿ ಮುಕ್ತಿಯ ಕಡೆ ಕರೆದೊಯ್ಯುವವನೆ ಗುರುವಾಗಿದ್ದಾನೆ. 'ಗುರು' ಅರಿವಿನ ಸಂಕೇತವಾಗಿದ್ದಾನೆ. ಅರಿವು ಎಂದರೆ ತನ್ನ ತಾನು ತಿಳಿಯುವುದು. ತನ್ನನ್ನು ತಾನು ತಿಳಿಯುವುದು ಎಂದರೆ, ಮನುಷ್ಯನಾಗಿ ಹುಟ್ಟಿದ ಮೇಲೆ ಅವನ ಕರ್ತವ್ಯಗಳೇನು, ಅವನ ಜವಾಬ್ದಾರಿ ಎಂಥದ್ದು ಎಂಬುದರ ಬಗ್ಗೆ ಅರಿವನ್ನು ಮೂಡಿಸಿಕೊಂಡು ಒಳ್ಳೆಯ ವ್ಯಕ್ತಿತ್ವವನ್ನು ಪಡೆಯುವುದೇ ಆಗಿದೆ.

ತತ್ವಪದಕಾರರು ವ್ಯಕ್ತಿವಾದಿಗಳಿರಬಹುದು. ಸಂಘಟನಾತ್ಮಕ ಹೋರಾಟವನ್ನು ಸಮಾಜ ಸುಧಾರಣೆಗೆ ಕೈಕೊಳ್ಳಲಿಲ್ಲವೆಂಬುದು ನಿಜವಿರಬಹುದು. ಆದರೆ ಸಮಾಜದ ಒಳಿತಿಗಾಗಿ ಮೂಲತಃ ಬೇಕಾದದ್ದನ್ನೇ ಅವರು ಹೇಳಿದ್ದಾರೆ. ತನ್ನ ತಾನು ಸಂತೈಸಿಕೊಳ್ಳುವುದೇ ಮೂಲ ತತ್ವವಾಗಿದೆ. ಪ್ರತಿಯೊಬ್ಬ ಮನುಷ್ಯ ತಮ್ಮ ತಮ್ಮ ನೆಲೆಯಲ್ಲಿ ತಮ್ಮನ್ನು ಸಂತೈಸಿಕೊಂಡರೆ, ತಮ್ಮನ್ನು ತಾವೇ ಅರಿತುಕೊಂಡರೆ ಅದಕ್ಕಿಂತ ಪರಮ ಸುಖ ಯಾವುದಿಲ್ಲ. ತತ್ವಪದಕಾರರಲ್ಲಿ 'ಗುರು' ಅರಿವಿನ ಸಂಕೇತವಾಗಿ ನಿಂತಿದ್ದಾನೆ. ನರನ ಕೆಡಿಸಿದ, ಭವಗೆಲಿಸಿದ ಗುರು ಎಂದರೆ ಅದು ಸನ್ಮಾರ್ಗದ ಅರಿವು ಪಡೆದಂತೆ. ಅರಿವು ಪಡೆದು ಪುನಃ ಮರವಿಗೆ ಬೀಳಬಾರದು. ಲೋಕದ ಜನರು ಅರಿತೂ ದಾರಿಗೆಡುವ ಕೆಲಸದಲ್ಲಿ ನಿರತರಾಗಿರುತ್ತಾರೆ. ಇದು ಅಪಾಯಕಾರಿಯಾದ ನಿಲುವು. ಇಂಥವರನ್ನು ದಾರಿಗೆ ತರುವುದೇ ಕಷ್ಟ. ಇಂಥ ವಸ್ತುಸ್ಥಿತಿಯನ್ನು ತನ್ನದೇ ಆದ ನಿಲುವಿನಲ್ಲಿ ಸಿರಗಾಪುರ ಬಂಡೆಪ್ಪ ಹಾಡಿದ್ದಾನೆ:

'ತಕ್ಕಡಿ ಎಂಬಾದೊಂದು ಹಾದಿ

ತತ್ಕಾಲ ತಿಳಕೋ ನೀ ಗುರುಬೋದಿ

ಗುರುವಿನ ಹೊರ್ತು ಗತಿಯಿಲ್ಲಣ್ಣ

ಜಗದೊಳಗ ನೀ ಜಾತ್ರಿ ಮಾಡಣ್ಣ

ದೇಸದೊಳಗ ವಾಸ ಸಿರಗಾಪುರ ಗ್ರಾಮ

ಈಶವೀರೇಶನ ನೀ ಭಜನಿ ಮಾಡಣ್ಣ'[೧೬]

ತಕ್ಕಡಿ, ಭಜನೆ, ಜಾತ್ರೆ ಇವೆಲ್ಲವೂ ಧ್ಯಾನ ಪರವಶದ ಸಂಕೇತವಾಗಿದೆ. ಗುರುವಿನಿಂದ ಪಡೆದ ಅರಿವನ್ನು ಹದಗೊಳಿಸಿಕೊಳ್ಳಬೇಕು. ಇದಕ್ಕೆ ತನ್ಮಯದ ಅಗತ್ಯವಿದೆ. ಈ ತನ್ಮಯತೆಯನ್ನು ಪಡೆಯಬೇಕು. ಅರಿವು ಮರವಾಗದಂತೆ ಉಳಿಯಲು ತನ್ಮಯತೆಯನ್ನು ತಂದುಕೊಡುವ ಶಕ್ತಿ ಭಕನೆಗೆ ಇದೆ. 'ಗುರು ಪುತ್ರರಾದವರು ಗುರಿಮುಟ್ಟಿ ಗುರುವಾಗಬೇಕು' ಎಂದು ಮೋಟ್ನಹಳ್ಳಿ ಹಸನಸಾಹೇಬ ಹೇಳಿರುವುದನ್ನು ಗಮನಿಸತಕ್ಕ ವಿಚಾರವಾಗಿದೆ. 'ಗುರು'ವನ್ನು ಪಡೆದು, 'ಏಕತಾರಿ'ಯನ್ನು ಹಿಡಿದು ಕೂಡ 'ನಿಜಸುಖ'ದ ಹಾದಿ ಹಿಡಿಯದೆ ಲೌಕಿಕ ವ್ಯಾಮೋಹದಲ್ಲಿ ಇವವರನ್ನು ಕಂಡು ಎಚ್ಚರಿಕೆಗಾಗಿ 'ಗುರಿ ಮುಟ್ಟಿ ಗುರುವಾಗಬೇಕು' ಎಂದಿದ್ದಾನೆ. ಈ ಅನುಭಾವಿ ಪಂಥದವರು ದೇವರ ಅಸ್ತಿತ್ವವನ್ನು ಕುರಿತು ಚಿಂತಿಸಲು ಹೋಗಿಲ್ಲ. ಕಣ್ಣಿಗೆ ಕಾಣದ 'ದೇವರ' ಸ್ಥಾನದಲ್ಲಿ, ಕಣ್ಣಿಗೆ ಕಾಣುವ, ಕೈಗೆ ಸಿಗುವ 'ಗುರು'ವನ್ನು ಕೂಡಿಸಿದ್ದಾರೆ. ದೇವರಿಗೆ ಮೋಸ ಮಾಡಬಹುದು. ಆದರೆ ಕಣ್ಣ ಮುಂದಿರುವ ಗುರುವಿಗೆ ಮೋಸ ಮಾಡುವುದು ಸುಲಭವಲ್ಲ. ಈ ಕಾರಣದಿಂದ ಗುರುವನ್ನೇ ಸರ್ವಸ್ವವನ್ನಾಗಿ ಮಾಡಿರಬೇಕು. ಗುರುವಿನ ಭಯದಿಂದ ಗುರುಮಗನಾದವನು ಸಾಧನೆಯಲ್ಲಿ ತೊಡಗಿಕೊಳ್ಳಲು ಸಾಧ್ಯವಾಗುತ್ತಿತ್ತು. ಆದರೂ ಗುರುಮಗನಾಗಿಯೂ ನಡೆಯಬೇಕಾದ ದಾರಿಯಲ್ಲಿ ಸಾಗದೇ ತಪ್ಪಿ ನಡೆಯುವ ಪ್ರಸಂಗಗಳು ನಡೆದಿರಬೇಕು. ಆದ್ದರಿಂದಲೇ ಗುರಿ ಮುಟ್ಟಿ ಗುರುವಾಗಬೇಕು ಎಂದು ತತ್ವಪದಕಾರರು ಒತ್ತಿ ಹೇಳಿದ್ದಾರೆ.

ಸಾಮಾನ್ಯವಾಗಿ ಕೆಳವರ್ಗದವರಲ್ಲಿ ಜನ 'ಗುರು–ಶಿಷ್ಯ' ವ್ಯವಸ್ಥೆಯಲ್ಲಿ ನಂಬಿಕೆ ಇಟ್ಟುಕೊಂಡಿದ್ದಾರೆ. 'ಅನುಭಾವ'ದ ಈ ಪಂಥದಲ್ಲಿ ಕಾಣುವ 'ಗುರು–ಶಿಷ್ಯ' ಸಂಬಂಧಗಳು ಹೆಚ್ಚಾಗಿ ಈ ಪ್ರದೇಶದಲ್ಲಿ ಏರ್ಪಡಲು ಕಾರಣಗಳೇನು? ಜನ ಸಾಮಾನ್ಯರ ಆರ್ಥಿಕ ಸ್ಥಿತಿಗಳಿಗೂ ಮತ್ತು ಭೂ ಮಾಲೀಕರ ಆಳ್ವಿಕೆಗಳ ನಡುವಿನ ಸಂಬಂಧಗಳೇನಾದರೂ ಕಾರಣವಾಗಿರಬಹುದೇ? ಯಾಕೆಂದರೆ ವಿಜಯನಗರ ಪತನದ ನಂತರವೂ ಈ ಪ್ರದೇಶದಲ್ಲಿ ಹಲವಾರು ಯುದ್ಧಗಳು ನಡೆದಿವೆ. ೧೭ನೇ ಶತಮಾನದಿಂದ ಈ ಪ್ರದೇಶದಲ್ಲಿ ಜನ ಸಾಮಾನ್ಯರು ಯುದ್ಧದ ನೆರಳಿನಲ್ಲಿ ಬದುಕಿದ್ದಾರೆ. ಪರಕೀಯರ ದಾಳಿಗಳು, ದರೋಡೆಗಳು, ಕ್ಷಾಮ ಬರಗಾಲದಿಂದ ಇಲ್ಲಿನ ಸಾಮಾಜಿಕ ಬದುಕು ಅಸ್ತವ್ಯಸ್ತಗೊಂಡಿತ್ತು. ಸರಿಯಾದ ನಾಯಕತ್ವವಿಲ್ಲದೇ ಸಾಮಾನ್ಯರು ಅತಂತ್ರ ಸ್ಥಿತಿಯಲ್ಲಿದ್ದರು. ನೆಲೆಯೆಂಬುದು ಕನಸಿನ ಮಾತಾಗಿತ್ತು. ದಾಳಿಗೆ ಸಿಕ್ಕ ಊರಿನಂತೆ ಈ ಪ್ರದೇಶದ ಸ್ಥಿತಿಯಿತ್ತು. ಇಲ್ಲಿನ ಸಾರ್ವಜನಿಕ ಬದುಕು ಆಹಾಕಾರದಿಂದ ತುಂಬಿತ್ತು ಎಂಬುದು ಇತಿಹಾಸ ಹೇಳುತ್ತದೆ. ಇಂಥ ಪರಿಸ್ಥಿತಿಯಲ್ಲಿ ಸಂತರು, ಯೋಗಿಗಳು, ಅನುಭಾವಿಗಳು ಸಮಾಜದ ನೆಮ್ಮದಿಗೆ ಶ್ರಮಿಸಿದರು ಎಂಬುದು ನಿಜ. ಇವರ ಜೀವನ ಕ್ರಮ ಮತ್ತು ತತ್ವಪದಗಳು ಸಾಮಾನ್ಯರ ಬದುಕಿಗೆ ನೆಲೆ ಒದಗಿಸಿದೆ. ಜೊತೆಗೆ ಸಂತರ ಅನುಯಾಯಿಗಳಾಗುವುದರ ಮೂಲಕ ಅನೇಕರು ತಮ್ಮ ಜವಾಬ್ದಾರಿಯನ್ನು ಮರೆತರು. ಧಾರ್ಮಿಕ ವೇಷದಿಂದ ಮಾಡಬೇಕಾದ ಕರ್ತವ್ಯಗಳನ್ನು ಮಾಡದೆ ಸಮಾಜಕ್ಕೆ ಭಾರವಾಗತೊಡಗಿದರು. ಬೌದ್ಧ ಭಿಕ್ಷುಕರು ಕಾಲಾಂತರದಲ್ಲಿ

ಸಮಾಜಕ್ಕೆ ಹೊರೆಯಾದಂತೆ ಈ ಕಾಲದಲ್ಲಿಯೂ 'ಗುರು-ಶಿಷ್ಯ'ರ ಸ್ಥಿತಿಯಾಯಿತು. ಇದಕ್ಕೆ ಕೇವಲ ವ್ಯಕ್ತಿಗಳ ಸ್ವಭಾವ ಕಾರಣವಲ್ಲ. ಅಂದಿನ ಕಾಲದ ಪರಿಸ್ಥಿತಿಯೂ ಕಾರಣವಾಗಿರುತ್ತದೆ.

ರಾಜಕೀಯ ಸ್ಥಿತ್ಯಂತರಗಳಿಂದ ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳೂ ಅಸ್ತವ್ಯಸ್ತಗೊಳ್ಳುತ್ತವೆ. ದುಡಿಯುವ ವರ್ಗಗಳಿಗೆ ದುಡಿಮೆಯ ಅವಕಾಶಗಳೂ ಕಡಿಮೆಯಾಗುತ್ತವೆ. ದುಡಿಸಿಕೊಳ್ಳುವ ವರ್ಗಗಳ ದಬ್ಬಾಳಿಕೆಯೂ ಹೆಚ್ಚಾಗಿರುತ್ತದೆ. ಇಂಥ ಅನೇಕ ಕಾರಣಗಳು ಜನ ಸಾಮಾನ್ಯರನ್ನು ಅನುಭಾವಿ ಪಂಥಗಳತ್ತ ಆಕರ್ಷಿಸಿರಬೇಕು. ಇಲ್ಲಿ ಆಶ್ರಯ ಪಡೆಯುವ ಮೂಲಕ ಒಂದು ಬಗೆಯಲ್ಲಿ ರಕ್ಷಣೆಯನ್ನು ಪಡೆದಂತಾಗುತ್ತದೆ ಎಂದು ಜನ ಭಾವಿಸಿರಬೇಕು. ಈ ಪ್ರದೇಶದಲ್ಲಿ ಭೂ ಮಾಲೀಕರ ಅಧೀನದಲ್ಲಿ ಜನ ಸಾಮಾನ್ಯರು ದುಡಿದು ಬದುಕುತ್ತಾ ಬಂದಿದ್ದಾರೆ. ಇದರ ದಬ್ಬಾಳಿಕೆ, ಶೋಷಣೆಯನ್ನು ಅನುಭವಿಸಿದ್ದಾರೆ. ಅನೇಕ ಸಂದರ್ಭಗಳಲ್ಲಿ ಇದನ್ನು ತಾಳಿಕೊಳ್ಳದೆ ಗುರುವಿನ ಮಗನಾಗಿ ಸಂತನ ವೇಷ ಪಡೆಯುವ ಮೂಲಕ ರಕ್ಷಣೆ ಮತ್ತು ಪ್ರತಿಭಟಿಸಲು ಒಂದು ಬಗೆಯ 'ಅಧ್ಯಾತ್ಮಿಕ' ಅಥವಾ 'ಅನುಭಾವ'ದ ಶಕ್ತಿಯನ್ನು ಆಶ್ರಯಿಸಿರಬಹುದು. ಇದಕ್ಕೆ ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳೇ ಕಾರಣವಾಗಿವೆ ಎಂಬುದನ್ನು ಮರೆಯುವಂತಿಲ್ಲ. ಸಾಮಾಜಿಕ ವ್ಯವಸ್ಥೆಯೊಂದು ಪದೇ ಪದೇ ಸಾಮಾನ್ಯರ ಮೇಲೆ ಶೋಷಣೆ ಮಾಡಿದಾಗ ಅನಿವಾರ್ಯವಾಗಿ ಜನರು ಅನುಭಾವಿಗಳಾದರು ಎಂಬುದು ಇಲ್ಲಿ ಗಮನಿಸಬೇಕಾದ ಮಹತ್ವದ ಅಂಶವಾಗಿದೆ.

ಮೂಲತಃ ತತ್ವಪದಕಾರರು ಯೋಗಿಗಳಾಗಿ, ಅನುಭಾವಿಗಳಾಗಿ 'ಸರ್ವೋಜನ ಸುಖಿನೋಭವಂತು' ಎನ್ನುವಂತೆ ಅವರು ಲೋಕದ ಹಿತ ಬಯಸಿದವರು. ಜನಸಾಮಾನ್ಯರ ನಡುವೆ ಬದುಕಿದ ಅವರು ಸರಳತನ, ಸಾಮಾನ್ಯರ ಮಾತುಗಳಲ್ಲಿ ತಮ್ಮ ಅಭಿವ್ಯಕ್ತಿಯನ್ನು ಹೇಳುತ್ತಿದ್ದರು. ಅವರು ಹೇಳುವ ಲೌಕಿಕದ ಚಿತ್ರಗಳು ಕ್ಷಣಕ್ಕೆ ಕಂಡಂತಾದರೂ ಅವು ಒಳಾರ್ಥದಲ್ಲಿ ಗೂಢಾರ್ಥವನ್ನು ಹೊಂದಿರುತ್ತಿದ್ದವು. ಅನುಭಾವವೆನ್ನುವುದು ಹೇಳಲು ಆಗದಂತದ್ದು. ಅದು ಚಿಕ್ಕ ಮಕ್ಕಳು ಕಂಡ ಕನಸಿನಂತೆ. ಬಾಯಿ ಇಲ್ಲದವನು ರುಚಿಯನ್ನು ಹೇಳಿದಂತೆ ಎಂದು ವಚನಕಾರರು ನಂಬಿದ್ದರೂ ಅದನ್ನು ಅಭಿವ್ಯಕ್ತಪಡಿಸಲು ಅವರು ಹೆಣಗಿದರು. ಲೌಕಿಕದಲ್ಲಿ ಯಾವುದು ಘಟಿಸಲು ಅಸಾಧ್ಯವೋ ಅಂಥದ್ದು ಅನುಭಾವಿಗಳ ಲೊಕದಲ್ಲಿ ಸಾಧ್ಯವಾಗುತ್ತದೆ ಎಂಬಂತೆ ತತ್ವಪದಕಾರರು ತಮ್ಮ ಅನುಭಾವ ಸ್ಥಿತಿಯನ್ನು ಗೂಢಾರ್ಥಗಳ ಮೂಲಕ ಹೇಳಲು ಯತ್ನಿಸಿದ್ದಾರೆ.

'ನೀರುಯಿಲ್ಲದ ಭಾವಿಯೊಳಗೆ
ಬೇರುಯಿಲ್ಲದ ಮರದ ಮ್ಯಾಲೆ
ಮೋರೆಯಿಲ್ಲದ ಪಕ್ಷಿಯೊಂದು
ಹಾರಿ ಭರರರ ನೀರು ಕುಡಿವೋದು'[೨೭] (ವೆಂಕಟಾಪುರ ಖೇಮಣ್ಣ) ಅನುಭಾವಿ, ಯೋಗಿಗಳಿಗೆ ಸಹಜವೆನಿಸುವ ಈ ಮಾತುಗಳು ಲೌಕಿಕರಿಗೆ ಅದ್ಭುತ, ಪವಾಡ, ವಿಸ್ಮಯವಾಗಿ ಕಾಣಬಹುದು. ಮೂಲತಃ ಯೋಗಿಗಳಾದ ತತ್ವಪದಕಾರರು ತಮ್ಮ ಅನುಭವದೊಂದಿಗೆ

ಬೆಡಗಿನೊಂದಿಗೆ ಸಹಜವೆಂಬಂತೆ ತಮ್ಮದೇ ಆದ ಮಾದರಿಯಲ್ಲಿ ಹೇಳುವ ಕಲೆ ಕರಗತ ಮಾಡಿಕೊಂಡಿದ್ದರು. ಲೌಕಿಕದ ಆಸೆ ಆಮಿಷಗಳು, ಸಾಮಾನ್ಯವಾಗಿ ಸಂಸಾರದ ಮೋಹ, ವ್ಯಸನಗಳು ಮನುಷ್ಯನನ್ನು ಸಂಕೋಲೆಗಳಿಂದ ಬಂದಿಸಿದಂತೆ ಕಾಣುತ್ತವೆ. ಲೋಕದ ಆಸೆ ಕಾರಣವಾದ ಹೆಣ್ಣು, ಹೊನ್ನು, ಮಣ್ಣು ಇವುಗಳನ್ನು ಮೀರಿ ನಿಲ್ಲುವುದೇ ನಿಜವಾದ ಜೀವನ ಎಂದು ಈ ಅನುಭಾವಿಗಳು ಸಾರಿ ಹೇಳಿದರು.

**೫.೪.೨. ಸತಿ–ಪತಿ ಭಾವ**

ವಚನಕಾರರಲ್ಲಿ 'ಗುರು'ವಿಗೆ ಸ್ಥಾನವಿದೆ. ಆದರೆ ತತ್ವಪದಕಾರರು ಗುರುವಿಗೆ ನೀಡಿದ ಸ್ಥಾನವೇ ಬೇರೆ ಮತ್ತು ವಿಶಿಷ್ಟ ರೀತಿಯದ್ದು. ವಚನಕಾರರಲ್ಲಿ ಇಷ್ಟದೈವವೇ ಗಂಡನಾಗಿ, ಭಕ್ತನೇ ಹೆಂಡತಿಯಾಗುವ 'ಸತಿ–ಪತಿ' ಭಾವದ ಪರಿಕಲ್ಪನೆಯಿದೆ. ತತ್ವಪದದಲ್ಲಿ ಗುರುವೇ ಗಂಡ. ತತ್ವಪದಕಾರರು ಗುರುವೆಂಬ ಗಂಡನೊಂದಿಗೆ ಅನೇಕ ಬಗೆಯಲ್ಲಿ ಮೌನಸಂಧಾನ ನಡೆಸಿದ್ದಾರೆ. ಗುರುವನ್ನು ಪಡೆದು, ಗುರು ಉಪದೇಶದಂತೆ ಸಾಗಿದ ಮೇಲೆ ಲೌಕಿಕವಾಗಿ ಗಂಡನ ಜೊತೆ ಸಾಗುವುದು ಕಷ್ಟವಾಗುತ್ತದೆ. ಗುರುವನ್ನು ಗಂಡನನ್ನಾಗಿ ಭಾವಿಸಿದ ಮೇಲೆ ಲೌಕಿಕವಾಗಿ ಕಾಣುವ ವ್ಯವಹಾರಗಳನ್ನು ನೆಲೆಯಾಗಿಟ್ಟುಕೊಂಡೇ ಅಲೌಕಿಕ ನೆಲೆಗೆ ತಲುಪುವ ಪರಿ ವಿಶೇಷವಾದದ್ದು. ಸಂಸಾರದ ಗದ್ದಲ ಈ ಸಂಸಾರದ ಗಂಡನಿಂದ ಬಿಡುಗಡೆ ಹೊಂದುವ, ನಿಜವಾದ ಗಂಡನನ್ನು ಪಡೆಯುವ ಈ ಮಾತುಗಳು ಸರಳವಾಗಿ ಸಹಜವಾಗಿ ಕಂಡರೂ ಅವುಗಳ ಅರ್ಥ ಪಾರಮಾರ್ಥದಲ್ಲಿ ಬೇರೆಯಾಗಿ ನಿಲ್ಲುತ್ತವೆ. ಸಂಸಾರದ ಗಂಡನನ್ನು ಮೀರಿ ಅಲೌಕಿಕ ಗಂಡನನ್ನು ಪಡೆಯುವುದೂ ಸುಲಭವಲ್ಲ. ಪಡೆಯುವ ಸ್ಥಿತಿಯಲ್ಲಿ ನಡೆಯುವ ಮನಸ್ಸಿನ ತಳಮಳವನ್ನು ತತ್ವಪದಗಳಲ್ಲಿ ಕಟ್ಟಿರುವುದು ಕಾಣುತ್ತದೆ.

'ಮನಸಿಜ ರೂಪ ಮುನದೇನ ಗೆಳತಿ
ನೆನೆಸಿದರ ಎದಿ ಭುಗಿಲಂತಾದವ್ವ
ಕನಸಿನೊಳಗೆ ಆತ ಕಂಡಂಗ ಆಗುತದ
ಮನಸಿಗೆ ಜರ ಮರಿ ಆಗೇದವ್ವ'[೧೮] (ರಾಮಪುರ ಬಕ್ಕಪ್ಪಯ್ಯ) ಸಾಧಕ ತಾನು ನಂಬಿದ 'ಶಕ್ತಿ'ಯನ್ನು ಸಾಕ್ಷಾತ್ಕರಿಸಿಕೊಳ್ಳುವ ಹಾದಿಯಲ್ಲಿ ಇದು ಸಹಜ. ಇಂದ್ರಿಯಗಳನ್ನು ನಿಗ್ರಹಿಸುವ ಸ್ಥಿತಿಯಿದು. ಸೇರಬೇಕಾದ ನೆಲೆಗೆ ತಲುಪುವಾಗ ಆಗುವ ಮನಸ್ಸಿನ ಅನುಭವವನ್ನು ಬಕ್ಕಪ್ಪಯ್ಯ ಹೇಳಿದ್ದಾನೆ. ಅದರಂತೆ ಇನ್ನೊಬ್ಬ ಅನುಭಾವಿ

'ಅಂತರಂಗದ ಕೀಲು
ತಿಳಿಸಿ ಭ್ರಾಂತಿಗೊಳಿಸಿದಾಯನ್ನ ಕಾಂತ
ಚಿತ್ತಜಾರಿ ಬಾರೆಯೆಂದು ಯಿತ್ತ ಕರದೂ ಕೇಳವ್ವಾ
ನನಗೆ ನಿನಗೆ ಭೇದವೆಷ್ಟೂ ಇಲ್ಲವೆಂದ ಕೇಳವ್ವಾ
ನಾನೇ ನೀನು ನಾನೇ ನಾನು ನಿಜವು ತಿಳಿಯೆಂದಾಯನ್ನ ಕಾಂತ'[೧೯] (ವೆಂಕಟಾಪುರ ಖೇಮಣ್ಣ) ಎಂದು ಹೇಳುತ್ತಾನೆ ಲೋಕದ ಸಂಸಾರದ ಸುಖ ಸ್ಥಿರವಾದದಲ್ಲ; ಕ್ಷಣಿಕವಾದದ್ದು.

ಅದರ ಬಂಧನ, ವ್ಯಾಮೋಹಗಳಿಂದ ಅತೃಪ್ತಿಯೇ ಹೆಚ್ಚು. ಈ ಲೋಕದ ಸುಖಕ್ಕಿಂತ ತಾವು ಬಯಸುವ ಲೋಕದ ಸುಖವೇ ನಿಜವಾದ ಮತ್ತು ಕೊನೆಗೊಳ್ಳದ ಸುಖ ಎಂದು ನಂಬಿದ್ದಾರೆ. ಅಂತಹ ಲೋಕದ ಅನುಭವಕ್ಕೆ ಹೋಗುವುದು ಸುಲಭವಲ್ಲ. ಅದರ ಹಾದಿ ಹಿಡಿದರೆ ಲೋಕದ ವ್ಯಾಮೋಹವೂ ಹಿಡಿದು ತಡೆಯುತ್ತದೆ. ಇದನ್ನು ಬಿಡಿಸಿಕೊಳ್ಳುವ ಪರಿಯನ್ನು ತತ್ವಪದಕಾರರು ಭವದ ನೆಲೆಯಲ್ಲೇ ನಿಂತು ಹಾಡಿದ್ದಾರೆ. ಅನೇಕ ತತ್ವಪದಕಾರರು ಈ 'ಸತಿ-ಪತಿ' ಭಾವದ ಕಲ್ಪನೆಯನ್ನು ನೆಲಮೂಲದ ಚಿತ್ರಣಗಳಿಂದಲೇ ವ್ಯಕ್ತಪಡಿಸಿದ್ದಾರೆ.

ವಚನಕಾರರಲ್ಲಿಯೂ 'ಸತಿ-ಪತಿ' ಭಾವದ ವಚನಗಳು ರಮ್ಯವಾಗಿವೆ. ಅದರಲ್ಲೂ ಅಕ್ಕಮಹಾದೇವಿ ವಚನಗಳ ಸೊಗಸು ಅನನ್ಯವಾದದ್ದು. ಹೆಣ್ಣಾಗಿ ಅಕ್ಕಮಹಾದೇವಿ ಚೆನ್ನಮಲ್ಲಿಕಾರ್ಜುನನೆ ಗಂಡನೆಂದು ಬಗೆದು ಬರೆದ ವಚನಗಳು ವಿಶೇಷ ಅರ್ಥವನ್ನು ಪಡೆದಿವೆ. ಇದಕ್ಕೆ ಅವಳ ಆತ್ಮಕಥನವೂ ಸೇರಿಕೊಂಡು ಅರ್ಥವಲಯವನ್ನು ಹಿಗ್ಗಿಸಿದೆ. ಅಕ್ಕನ ವಚನಗಳನ್ನು ನೆನಪಿಗೆ ತರುವಂಥ ಈ ಭಾವದ ಅನೇಕ ತತ್ವಪದಗಳನ್ನು ಕೂಡಲೂರು ಬಸವಲಿಂಗಪ್ಪ ರಚಿಸಿದ್ದಾನೆ:

'ಅರಳಗಂಗಲೆ ಎಂದು ಕರೆದವನ ಬೈತಲೆ
ಬೆರಳಿನಿಂದ ತಿದ್ದಿ ನೋಡುವವನ
ಹರಳ ಕುಂದಣ ಮೂಗುತಿಡುವವನ
ಪರಮಾನಂದ ಪಡುವ ಚದುರನ
ಹತ್ತಿರ ಬಂದು ಸೆರಗು ಎಳೆವವನ
ಒತ್ತಿ ಸ್ತನಗಳ ಪಿಡಿಯುವವನ
ಎತ್ತಿ ಚುಂಬಿನ ಕೊಟ್ಟು ನಗುವವನ'[೨೦] (ಕೂಡಲೂರು ಬಸವಲಿಂಗಪ್ಪ) ತತ್ವಪದಕಾರರ

ಇಂಥ ರಚನೆಗಳಿಂದ ತಿಳಿಯುವದೇನೆಂದರೆ ಪತಿಯಲ್ಲಿ ಸತಿ ಇಡುವ ಪ್ರೀತಿ, ನಿಷ್ಠೆಯನ್ನು ಭಕ್ತ ಪರಮಾತ್ಮನಲ್ಲಿ ಇಡಬೇಕು, ಸತಿ-ಪತಿಯ ಮಧ್ಯ ಅನ್ಯೋನ್ಯತೆ ಏರ್ಪಡಬೇಕು. ಎರಡಳಿದು ಒಂದಾಗುವ ಸ್ಥಿತಿ ತಲುಪಬೇಕು. ಸತಿ-ಪತಿ ಬೇರೆಯಲ್ಲ. ಎರಡು ದೇಹ ಒಂದೇ ಜೀವ ಎಂಬಂತಾಗಬೇಕು. ಭಕ್ತ-ಪರಮಾತ್ಮ ಬೇರೆ ಬೇರೆಯಲ್ಲ. ನರ ಹರನಾಗುವ ತತ್ವವಿದು. ಮೂಲತಃ ಇದನ್ನು ಶರಣರಲ್ಲಿ ಕಾಣುತ್ತೇವೆ. ತತ್ವಪದಕಾರರಲ್ಲಿಯೂ ಇಂಥ ರಚನೆಗಳಿವೆ. ಭಕ್ತ ಪರಮಾತ್ಮನಲ್ಲಿ ಸತಿನಿಷ್ಠೆಯನ್ನಿಟ್ಟು ಕೊನೆಗೆ ಎರಡಳಿದು ಒಂದಾಗಿ ಹೋಗುವಂಥ ಸ್ಥಿತಿಯ ನಿದರ್ಶನವು, ಲೌಕಿಕರಿಗೆ ಸಂಸಾರದಲ್ಲಿ ದಾರಿಯಾಗಲೆಂದು ಹೇಳಿರಬಹುದೇ? ಸತಿ-ಪತಿಯ ನಡುವೆ ಸಂಸಾರಿಕ ಕಷ್ಟನಷ್ಟಗಳು, ಸರಸವಿರಸಗಳು ಏನಿದ್ದರೂ ಕೂಡಿ ಬಾಳುವ ಛಲ ಹುಟ್ಟಿಸಲು ಈ ತತ್ವ ಪದಕಾರರು ಶ್ರಮಿಸಿರಬಹುದು ಎನಿಸುತ್ತದೆ.

**೫.೪.೩. ಹಾದರ ಮಾಡುವ ಪರಿ**

'ಸತಿ-ಪತಿ' ಭಾವದ ಈ ಪರಿಕಲ್ಪನೆಯನ್ನು ತತ್ವಪದಕಾರರು ಲೌಕಿಕ ನೆಲೆಯಲ್ಲಿ 'ಹಾದರ' ಎಂದು ಭಾವಿಸಿದ್ದಾರೆ. ಅಲೌಕಿಕ ಗಂಡನ ಜೊತೆ ನಡೆಸಿದ ಮೌನ ಸಂವಾದವನ್ನು ಅನುಭಾವದ

ನೆಲೆಯಲ್ಲಿ ಹೇಳಲು ಅನೇಕ ತತ್ವಪದಕಾರರು ಪ್ರಯತ್ನಿಸಿದ್ದಾರೆ. ಆದರೆ 'ಅನುಭಾವ' ಅಭಿವ್ಯಕ್ತಿಗೆ ಸಿಗುವಂಥದ್ದಲ್ಲ ಎಂದು ವಚನಕಾರರೆ ಹೇಳಿದ್ದಾರೆ. ಇನ್ನು ಜನತೆಯ ಕವಿಗಳಾದ ತತ್ವಪದಕಾರರು ಒಗಟಿಗೆ, ನಿಗೂಢತೆಗೆ ಮೊರೆ ಹೋಗುವವರಲ್ಲ. ಆ ಪ್ರಯತ್ನಗಳನ್ನೂ ಮಾಡಿದ್ದಾರೆ. ಆದರೆ ಲೌಕಿಕ ವಿದ್ಯಮಾನಗಳಲ್ಲಿಯೇ ರೂಪಕಗಳನ್ನು ಸೃಷ್ಟಿಸಿದ್ದಾರೆ.

'ಹಾದರ ಕಲಿತೇನ ಎಂಥಾಹದೋ
ನಲ್ಲನೆಬ್ಬಿಸಿಕೊಂಡು ಹೋಗಂಥಾಹದೋ!
ನಾನು ಪಡೆದೇನ ಇಂಥಾಹದೋ
ತಿರುಗಿ ಈ ಊರಿಗೆ ಬಾರದಂಥಹದು
ಅತ್ತಿ ಮಾವನ ಮನಿ ಬಿಟ್ಟೇನ
ತಲಬಾಗಿಲ ಬಿಟ್ಟು ಹೊರಗ ಹೋಂಟೇನ
ಆರು ಮಕ್ಕಳ ಮಲಿ ಬಿಡಿಸಿದನ
ಮದವಿನಿ ಗಂಡನ ಕರಿಮಣಿ ಕೆಡಿಸಿದನ
ಹಾದರ ಮಾಡದು ಕಲ್ತೇನ
ಈ ಊರನ ಮಂದಿದು ಸುದ್ದೇನ?
ಬಹದ್ದೂರ ಮಡಿವಾಳನ ಬುದ್ದೇನ

ಈ ಹಾದರದೊಳಗ ಮುಳಮುಳಗಿ ಎದ್ದೇನ'[೨೧] (ಖೈನೂರ ಕೃಷ್ಣಪ್ಪ) ಈ ತತ್ವಪದದ ಅರ್ಥ ಹೊರ ರೂಪದಲ್ಲಿ ಲೌಕಿಕವಾದದ್ದು, ಅದು ಆಡು ನುಡಿಯಲ್ಲಿದೆ. ಲೋಕದಲ್ಲಿ ಗಂಡನನ್ನು ತೊರೆದು ಪರಪುರುಷನ ಜೊತೆ ಸಂಬಂಧ ಬೆಳೆಸಿದ ಸತಿಗೆ 'ಹಾದರಗಿತ್ತಿ' ಎಂದು ಕರೆಯಲಾಗುತ್ತದೆ. ಆದರೆ ಸಾಧಕ ತನ್ನ ಸಾಧನೆಯ ಹಾದಿಯಲ್ಲಿ ಗುರುವಿನೊಂದಿಗೆ ನಡೆಸಿದ ಮೌನಸಂಧಾನವನ್ನೂ ಹಾದರ ಎಂದು ಭಾವಿಸಲಾಗಿದೆ. ಲೌಕಿಕದ ಹಾದರ ಅಪಮಾನಕಾರಿಯಾದದ್ದು. ಅಲೌಕಿಕದ ಈ ಹಾದರ ತತ್ವಪದಕಾರರ ದೃಷ್ಟಿಯಲ್ಲಿ ಮುಕ್ತಿಯ ಹಾದಿ ತೋರಿಸುವಂಥದ್ದು. ಖೈನೂರು ಕೃಷ್ಣಪ್ಪನ ಈ ತತ್ವಪದದಲ್ಲಿ ಈ ಹಾದರ ಪವಿತ್ರವಾದದ್ದು. ಆದ್ದರಿಂದಲೇ 'ಈ ಹಾದರದೊಳಗ ಮುಳಮುಳಗಿ ಎದ್ದೇನ' ಎಂಬಲ್ಲಿ ಇದು ನಿಜದ ಹಾದಿ, ನಿಜಸುಖದ ಸ್ಥಿತಿ ಎಂಬುದನ್ನು ವ್ಯಕ್ತಪಡಿಸಿದ್ದಾನೆ.

'ಕಲಿಸಿದ ಹಾದರವೆಂಥದ್ದು
ವಲ್ಲೆನೆಂದರೆ ಮರಳು ಮಾಡಿದಂತಾದ್ದು
ನೆಲೆಯರಿಯದಿದ್ದೆನಿವ ನಿಂಥಾದ್ದು

ಬಲಿ ಹಾಕಿದ ಬಾಯಿ ಬಾರದಂತಾದ್ದು'[೨೨] (ನೀರಲಕೇರಿ ಬಸವಲಿಂಗ ಶರಣ) ಈ ತತ್ವಪದದಲ್ಲಿ, ಇದು ಗುರು ಕಲಿಸಿದ ಹಾದರ. ಅದಕ್ಕಾಗಿಯೇ ಸಹಮತವಿದೆ. ಈ ಹಾದರ ಕಲಿಯದಿದ್ದರೆ ಗುರು, ಗಂಡನ ಸುಖ ಸಿಗುವುದಿಲ್ಲ. ಅನಿವಾರ್ಯವಾಗಿ ಬೀಸಿದ ಬಲೆಯಲ್ಲಿ ಸಿಕ್ಕಿಹಾಕಿಕೊಳ್ಳಬೇಕಾಗಿದೆ. ಲೌಕಿಕರಿಗೆ ಇದರ ಮರ್ಮ ತಿಳಿದಿರಲಿಕ್ಕಿಲ್ಲ. ಅದಕ್ಕಾಗಿ,

'ಗಂಡ ಕಲಿಸಿದ ಹಾದರ ನಾನೇನು ಬಲ್ಲನೆ! ನೆರೆಮನೆ

ತುಂಡ ಮುಂಡೆಯರಾಡಿಕೊಡರೆ ಅಂಜಿಕೇನಗೇನೆ'[೨೩] (ಕೂಡಲೂರು ಬಸವಲಿಂಗಪ್ಪ) ಎಂದು ಹೇಳಿದ್ದಾನೆ. ಕಡಕೋಳ ಮಡಿವಾಳಪ್ಪನ ತಾಯಿಯೆಂದು ಹೇಳಲಾಗುವ ಬಿದನೂರ ಗಂಗಮ್ಮನ ತತ್ವಪದವೊಂದು ಈ ವಿಷಯಕ್ಕೆ ಸಂಬಂಧಪಟ್ಟಿದ್ದಿದೆ.

'ಪೂರ್ವದ ಹಾದಿ ಕಡೀದನ

ಪುನರಪಿ ಬೋಧಾ ಹೇಳಿದನ

ಮನಸಿನ ಮೈಲಿಗಿ ಬಿಡಿಸಿದನ

ಕನಸಿನ ಎಚ್ಚರ ಮರೆಸಿದನ

ಮೆಚ್ಚುತ ಹುಚ್ಚು ಹಿಡಿಸಿದನ

ಸತ್ಯ ಸದ್ಗುರು ವಿರೂಪಾಕ್ಷನ'[೨೪] ಈ ತತ್ವಪದವು ಬಿದನೂರು ಗಂಗಮ್ಮನ ಬದುಕಿಗೆ ಸಂಬಂಧಿಸಿದ್ದು ಎಂದು ಹೇಳಲಾಗುತ್ತದೆ. ಅಂದರೆ ಗಂಗಮ್ಮನ ಬದುಕಿಗೆ ಹೊಂದಿಕೊಂಡ ಕತೆಯೊಂದಿದೆ. ಆಕೆ ಬಾಲವಿಧವೆ. ವಿರೂಪಾಕ್ಷ ಎಂಬ ಜಂಗಮನೊಡಗೂಡಿ ಮಡಿವಾಳಪ್ಪನಿಗೆ ಜನ್ಮನೀಡಿದಳು ಎಂಬುದು ಆ ಕತೆ. ಆಕೆಯ ಲೌಕಿಕ ಬದುಕಿನಲ್ಲಿ ಘಟಿಸಿದ ಸಂಗತಿಯಿದು. ಅಲೌಕಿಕ ಗಂಡನ ಜೊತೆಗೆ ನಡೆಯುವ ಸ್ವಪ್ನ ಸಂಧಾನವು ಗಂಗಮ್ಮನ ಬದುಕಿನಲ್ಲಿ ವಿರೂಪಾಕ್ಷನೆಂಬ ಜಂಗಮನೊಂದಿಗೆ ಲೌಕಿಕದಲ್ಲೂ ನಡೆದಿದೆ. ಗಂಗಮ್ಮನ ತತ್ವಪದವನ್ನು ಗಮನಿಸಿದರೆ ಇದರ ಅರ್ಥ ತಿಳಿಯುತ್ತದೆ. ಸ್ವಪ್ನ ಸಂಧಾನ ಎನ್ನುವ 'ಕನಸಿನ ಎಚ್ಚರ ಮರಸಿದನ' ಎಂಬುದು ಇಲ್ಲಿ ವಿಶೇಷವಾಗಿದೆ.

ಈ ತತ್ವಪದಕಾರರು 'ಗುರು' ಎಂಬ ಗಂಡನ ಜತೆ ಮಾಡಿದ 'ಹಾದರ'ವನ್ನು ಪರಿಪರಿಯಾಗಿ ಸಂತೋಷದಿಂದ ಹೇಳುತ್ತ, ಅದರಿಂದಾಗುವ ಪರಿಣಾಮಗಳನ್ನು ವಿವರಿಸಿದ್ದಾರೆ. ಈ ಅನುಭಾವಿಗಳು ಹಾದರದ ರೂಪಕವನ್ನೇ ಯಾಕೆ ಬಳಸಿಕೊಂಡರು? ಇದಕ್ಕೆ ಸಮಾಜದಲ್ಲಿ ನಡೆಯುವ ಅನೈತಿಕ ಚಟುವಟಿಕೆಗಳಿಗೆ ಸಂಬಂಧವಿದೆಯೇ? ಹಾದರ ಎಂದರೆ ಅನೈತಿಕ ಸಂಬಂಧ ಎಂದು ಅರ್ಥ. ಅದು ಕೇವಲ ಮಹಿಳೆಗೆ ಮಾತ್ರ ಅನ್ವಯಿಸುವಂಥದ್ದಲ್ಲ. ಹೆಣ್ಣು ಮಾಡಿರಲಿ, ಗಂಡೇ ಮಾಡಿರಲಿ ಅದು ಅಪರಾಧವೇ. ಸಮಾಜದಲ್ಲಿ ಹೆಣ್ಣು ಗಂಡುಗಳ ನಡುವೆ ನಡೆಯುವ ಅನೈತಿಕ ಲೈಂಗಿಕ ಸಂಬಂಧಗಳನ್ನು ಕಂಡು ಬೇಸತ್ತಿರಬೇಕು. ಈ ಪ್ರದೇಶದಲ್ಲಿ ಹೆಣ್ಣು ಲೈಗಿಂಕವಾಗಿ ಹೆಚ್ಚು ಶೋಷಿತಳು ಎಂಬುದನ್ನು ಆಧುನಿಕ ಕಥೆ ಕಾದಂಬರಿಗಳು ಚಿತ್ರಿಸಿವೆ. ಇದಕ್ಕೆ ಜಮೀನ್ದಾರಿ ಶಕ್ತಿಗಳು ಸೇರಿದಂತೆ ಅನೇಕ ಶಕ್ತಿಗಳು ಕಾರಣವಾಗಿವೆ. ಹೆಚ್ಚು ಅನೈತಿಕ ಸಂಬಂಧಗಳು ಸಮಾಜದಲ್ಲಿ ಕಂಡಿರುವುದಂತು ನಿಜ. ಇದನ್ನು ಅರಿತ ಅನುಭಾವಿಗಳು ಈ ರೂಪಕವನ್ನು ಬಳಸಿಕೊಂಡಿದ್ದಾರೆ. ಲೌಕಿಕರು ಮಾಡುವ ಹಾದರಕ್ಕೂ, ಅನುಭಾವಿಗಳು ಮಾಡುವ ಹಾದರಕ್ಕೂ ವ್ಯತ್ಯಾಸವಿದೆ. ಲೌಕಿಕರು ಮಾಡುವ 'ಹಾದರ'ಗಳಿಂದ ವ್ಯಕ್ತಿಗಳಿಗೂ ಸಮಾಜಕ್ಕೂ ಕಳಂಕ ಬರುತ್ತದೆ. ಅನುಭಾವಿಗಳು ಮಾಡಿದ 'ಹಾದರ'ದಿಂದ ನಿಜಸುಖದ ಹಾದಿ ತೆರೆಯುತ್ತದೆ.

ಇದನ್ನು ಪರಿಶೀಲಿಸಿದರೆ ತತ್ವಪದಕಾರರು ಸಮಾಜದ ಒಳಿತಿಗೆ ದುಡಿದಿರುವ ಉದ್ದೇಶ ಸ್ಪಷ್ಟವಾಗುತ್ತದೆ. ದೇಶಿ ನುಡಿಗಟ್ಟಿನಲ್ಲಿ 'ಹಾದರ' ಎಂದು ಬಳಸುವ ಮೂಲಕ ಈ ಅನುಭಾವಿಗಳು ಜನರನ್ನು ನೈತಿಕತೆಯಿಂದ ಜೀವಿಸುವಂತೆ ಮಾಡಲು ಶ್ರಮಿಸಿರುವುದು ಕಂಡುಬರುತ್ತದೆ.

**೫.೪.೪. ಗಾಂಜಾ ಸೇದುವ ಪರಿ**

ಲೌಕಿಕದ 'ಹಾದರ'ವು ತತ್ವಪದಕಾರರ ಪಾರಮಾರ್ಥದ ನೆಲೆಯಲ್ಲಿ ಹೇಗೆ ವಿಶೇಷಾರ್ಥವನ್ನು ಪಡೆದಿದೆಯೋ ಹಾಗೆ ಸಾಮಾಜಿಕವಾಗಿ ಕೆಟ್ಟ ಚಟವೆಂದು ಪರಿಗಣಿತವಾದ 'ಗಾಂಜಾ ಸೇವನೆ'ಯು ಕೂಡ, ತತ್ವಪದಕಾರರ ಅಧ್ಯಾತ್ಮದ ದೃಷ್ಟಿಯಲ್ಲಿ ವಿಶೇಷ ಅರ್ಥವನ್ನು ಪಡೆದಿದೆ. 'ಗುರು–ಶಿಷ್ಯ'ರ ವ್ಯವಸ್ಥೆಯಲ್ಲಿ ಗಾಂಜಾ ಸೇವನೆಗೆ ಮೊದಮೊದಲ ಹಂತದಲ್ಲಿ ಅವಕಾಶವಿದೆ. ಲೌಕಿಕ ವ್ಯಾಮೋಹವನ್ನು ಮರೆಯಲು ಸ್ವತಃ ಗುರುವೇ ಶಿಷ್ಯನಿಗೆ ಗಾಂಜಾವನ್ನು ಕೊಡುತ್ತಾನೆ. ಸಾಧನೆಯ ಹಾದಿ ಹಿಡಿಯಲು ಬೇಕಾಗುವ 'ಪರವಶ'ಕ್ಕಾಗಿ ಇದು ಆರಂಭದಲ್ಲಿ ಅಗತ್ಯ ಎಂಬುದು ತತ್ವಪದಕಾರರ ನಂಬಿಕೆ. ಆದರೆ ನಿಜವಾದ ಸಾಧಕರು ತಮಗೆ ಬೇಕಾಗುವ 'ಪರವಶತೆ'ಯನ್ನು ಧ್ಯಾನ, ಯೋಗದಿಂದ ಪಡೆದುಕೊಳ್ಳುತ್ತಾರೆ. ಅರೆ ಸಾಧಕರಿಗೆ ಮತ್ತು ಸಾಧಕರೆಂದು ಹೇಳಿಕೊಳ್ಳುವ ಕಪಟಿಗಳಿಗೆ ಇದು ದಕ್ಕದೇ ಹೋಗಿ ಗಾಂಜಾ ಸೇವನೆಯಿಂದಲೇ ಮೈ ಮರೆಯುವ ಸ್ಥಿತಿಯಲ್ಲೇ ಉಳಿದು, ಕೊನೆಗೆ ಗಾಂಜಾದ ವ್ಯಸನಿಗಳಾಗಿ ಅಡ್ಡ ಹಾದಿ ಹಿಡಿಯುವವರೇ ಹೆಚ್ಚು. ಇದರಿಂದ ಸಮಾಜದಲ್ಲಿ ಯಾವ ಪ್ರಯೋಜನವೂ ಇಲ್ಲ. ಗಾಂಜಾ ಸೇದುವ ಬಗೆ ಬೇರೆಯಿದೆ. 'ಗಾಂಜಾ ಸೇದಬೇಕು' ಆದರೆ ಯಾವ ಬಗೆಯ ಗಾಂಜಾವನ್ನು ಹೇಗೆ ಸೇದಬೇಕು ಎಂಬುದನ್ನು ತತ್ವಪದಕಾರರು ಈ ರೀತಿ ಹೇಳುತ್ತಾರೆ.

'ಗಾಂಜಾ ಸೇದಬೇಕೋ ಮನವು ನಿರಂಜನದಿರಬೇಕೋ
ಗಾಂಜಾ ಸೇದಬೇಕು ಅಂಜನಗವಿಯೊಳು
ಮಂಜಿನ ಮನೆಯಲ್ಲಿ ರಂಜನೆಯಿಂದಲಿ
ಬೀಜ ಆಯಬೇಕೋ ಬೀಜದ ನಿಜವನರಿಯಬೇಕೋ
ಬೀಜವನರಿಯಬೇಕು ಸೂಜನಸಂಗದಿ
ಮೂಜಗದೊಡೆಯನ ಮೂಲ ತಿಳಿದು ಘನ
ಆದಾ ಮಾಡಬೇಕೋ ಅದರಾ ಸ್ವಾದವು ಸವಿಬೇಕೋ
ಅದಾ ಮಾಡಬೇಕು ಆರು ಅರಿಯದಂತೆ
ಸದಾಚಾರದಿಂದ ಮದಾ ಕ್ರೋಧ ಬಿಟ್ಟೂ
ಕಡ್ಡಿ ಅರಸಬೇಕೊ ಕಾಯದ ಖರ್ಮವು ಕಳೀಬೇಕೋ
ಕಡ್ಡಿ ಅರಸಬೇಕು ಕಣ್ಣಿಲಿ ನೋಡುತ
ಅಡ್ಡಿಯಿಲ್ಲದೆ ಆತ್ಮದೆ ನಿಂತೂ
ಸೊಂಗೆ ತುಂಬಬೇಕೋ ಸೊಂಗೆದ ಸೊಡಕು ನರಿಯಬೇಕೂ

ಸೊಂಗೆ ತುಂಬಬೇಕು ಸೊಬಗಿನಿಂದಲಿ
ಅಂಗದೊಳಗೆ ಮಹಲಿಂಗನ ನೆನೆವೂತಾ
ಬೆಂಕಿಯೇರಬೇಕೋ ಬಿಂಕದ ಬಿರುನುಡಿ ಬಿಡಬೇಕೋ
ಬೆಂಕಿಯೇರಬೇಕು ಶಂಕರಧ್ಯಾನದಿ

ಓಂಕಾರ ಬಂಡೆಗುರುವಾಂಕಿತದಿಂದಲೀ'[೨೫] (ವೆಂಕಟಾಪುರ ಖೇಮಣ್ಣ) ಈ ತತ್ವಪದದಲ್ಲಿ ಗಾಂಜಾ ಸೇದುವ ಚಿತ್ರಣವಿದೆ. ಇಲ್ಲಿ ಲೌಕಿಕದಲ್ಲಿ ಕಾಣುವ ವಸ್ತುಸ್ಥಿತಿಯೇ ಅಡಗಿದಂತಿದೆ. ಈ ಲೌಕಿಕ ನೆಲೆಯಲ್ಲಿ ಗಾಂಜಾ ಸೇದುವ ಕ್ರಿಯೆಯನ್ನು ಅನುಭಾವಿಯಾದ ಖೇಮಣ್ಣ ಗ್ರಹಿಸಿದ ಪರಿ ವಿಶೇಷವಾದದ್ದು. ಲೌಕಿಕರು ಗಾಂಜಾ ತಂದು, ಅದರಲ್ಲಿರುವ ಬೀಜ, ಕಸಕಡ್ಡಿ ತೆಗೆದು ನಾದಿನಾದಿ ಹದ ಮಾಡಿ, ಸೇದುವ ಕೊಳವೆಗೆ ತುಂಬಿ, ಅದಕ್ಕೆ ಬೆಂಕಿ ಇಟ್ಟುಕೊಂಡು ಎಳೆದೆಳೆದು ಗಾಂಜಾ ಸೇದುತ್ತಾರೆ. ನಿಶ ಏರಿ ಪರವಶರಾಗುತ್ತಾರೆ. ಇದು ಸಾಮಾನ್ಯರ ಸ್ಥಿತಿ. ಆದರೆ ಅನುಭಾವಿಯ ಪರಿಯೇ ಬೇರೆ. ಗಾಂಜಾ ಸೇದಲು ಅವನಿಗೆ ಲೌಕಿಕದ ವಸ್ತು ಬೇಕಿಲ್ಲ. ಅವನು ಅದರ ಹಂಗು ಮೀರಿದವನು. 'ನಿರಂಜನ' ಎಂಬ ಗಾಂಜಾದಿಂದ 'ಅಂಜನಗವಿ'ಯೊಳಗೆ 'ಮಂಜಿನ ಮನೆಯಲ್ಲಿ ಕುಳಿತು 'ಬೀಜ' ಆಯಬೇಕು ಎಂದಿದ್ದಾನೆ. ಮನುಷ್ಯನಲ್ಲಿರುವ 'ಲೌಕಿಕ' ಎಂಬ ಬೀಜವನ್ನು ಆಯ್ದು ಹೊರ ಚೆಲ್ಲಬೇಕು. ಆಸೆ ಆಮಿಷವೆಂಬ ಕಸಕಡ್ಡಿಯನ್ನು ತೆಗೆದು ಹಾಕಬೇಕು. ನಂತರ ಮನಸ್ಸು ಪಕ್ವವಾಗಲು ನಾದಬೇಕು, ಅದನ್ನು ಹದ ಮಾಡಬೇಕು, ದೇಹ ಕರ್ಪೂರದಂತಾಗಬೇಕು, ಶಿವನ ಬೆಂಕಿ ತಗುಲಿಸಿಕೊಳ್ಳಬೇಕು, ಉರಿದರೂ ಕುರುಹು ಉಳಿಯಬಾರದು. ಇಂಥ ಸ್ಥಿತಿಗೆ ಏರುವ ಗಾಂಜಾ ಸೇದಬೇಕು ಎಂದು ಹೇಳಿದ್ದಾನೆ. 'ಸೇದೋ ಸೇದೋ ಗಾಂಜಿ. ಆದಿ ಅಂತ್ಯ ಭಾಗಿಸಿ, ಸಂಗಾ ಸುಸ್ಸಂಗಾ ನಿಸ್ಸಂಗಾ ಜುಂಜರಿಸಿತ್ತೋ' ಎಂದು ವಡಕಿ ತಾತಪ್ಪಯ್ಯ ಹೇಳಿದ್ದಾನೆ. ಈ ಅನುಭಾವಿಗಳು ಲೌಕಿಕ ಬದುಕಿನ ಚಿತ್ರಗಳನ್ನು ಬಳಸಿ, ತಮ್ಮ ಮೂಲ ಉದ್ದೇಶದ ಕಡೆಗೆ ಸಮಾಜವನ್ನು ಒಯ್ಯಲು ಪ್ರಯತ್ನಿಸಿರುವುದು ಕಂಡುಬರುತ್ತದೆ.

**೫.೪.೫. ಅಲಾವಿ ಆಡುವ ಪರಿ**

ಹೈದರಾಬಾದ್ ಕರ್ನಾಟಕ ಪ್ರದೇಶದ ಅನೇಕ ಭಾಗಗಳಲ್ಲಿ ಬಹು ಸಂಭ್ರಮದಿಂದ ಆಚರಣೆಯಾಗುವ ಹಬ್ಬಗಳಲ್ಲಿ ಮೊಹರಂ ಹಬ್ಬವು ಒಂದು. ಇದು ಮೂಲತಃ ಮುಸ್ಲೀಮರ ಹಬ್ಬ. ಆದರೆ ಅನೇಕ ಹಳ್ಳಿಗಳಲ್ಲಿ ಮುಸ್ಲೀಮೇತರರು ಬಹುಸಂಖ್ಯೆಯಲ್ಲಿ ಈ ಆಚರಣೆಯಲ್ಲಿ ಭಾಗಿಗಳಾಗುತ್ತಾರೆ. ಸುಮಾರು ೧೪ನೇ ಶತಮಾನದಿಂದ ಇದು ಭಾರತದಲ್ಲಿ ಆಚರಣೆಗೊಳ್ಳುತ್ತಿದೆ. 'ಮೊಹರಂ ಹಿಂದೂ-ಮುಸ್ಲೀಂ ಭಾವೈಕ್ಯದ ಪ್ರತೀಕ' ಎಂದು ಗುರುತಿಸಲಾಗಿದೆ. 'ಅಲಾವಿ' ಹಬ್ಬವೆಂತಲೂ ಇದನ್ನು ಹಳ್ಳಿಗಳಲ್ಲಿ ಕರೆಯುತ್ತಾರೆ. ಈ ಹಬ್ಬಕ್ಕೆ ಇಸ್ಲಾಂ ಧರ್ಮದಲ್ಲಿ ಐತಿಹಾಸಿಕ ಹಿನ್ನೆಲೆಯಿದೆ. ಹಜರತ್ ಮಹಮ್ಮದ್ ಪೈಗಂಬರರು ಮಾನವ ಕಲ್ಯಾಣಕ್ಕಾಗಿ ಶ್ರಮಿಸಿ ಇಸ್ಲಾಂ ರೀತಿಯ 'ಪ್ರಜಾಪ್ರಭುತ್ವ'ವನ್ನು ಸ್ಥಾಪಿಸಿದರು. ಅವರ ನಂತರ ಖಲೀಫರಾಗಿ ಹಲವಾರು ಈ ಇಸ್ಲಾಂ ಪ್ರಜಾಪ್ರಭುತ್ವವನ್ನು ನ್ಯಾಯುತವಾಗಿ ಮುನ್ನಡೆಸಿದರು. ಮುಂದೆ ಖಲೀಫರಾಗಲು

ಪೈಪೋಟಿ ನಡೆದು ಹಜರತ್ ಇಮಾಮು ಹುಸೇನರಿಗೂ ಮತ್ತು ಯಜೀದನಿಗೂ ಯುದ್ಧವೇ ನಡೆಯಿತು. ಯಜೀದನ ಗುಂಪು ಇಮಾಮ ಹುಸೇನರನ್ನು ಮೋಸದಿಂದ ಕೊಲೆಗೈಯಿತು. ಮೋಸಕ್ಕೆ ಜಯವಾಯಿತು. ಧರ್ಮಕ್ಕೆ ಸೋಲಾಯಿತು. ಹಜರತ್ ಇಮಾಮ್ ಹುಸೇನರು ವೀರ ಮರಣವನ್ನು ಹೊಂದಿದರು. ಇದಕ್ಕೆ 'ಕರ್ಬಲಾ ದುರಂತ' ಎಂದು ಕರೆಯಲಾಗುತ್ತದೆ. ಹಜರತ್ ಇಮಾಮ್ ಹುಸೇನರ ಆತ್ಮಕ್ಕೆ ಶಾಂತಿ ಸಿಗಲೆಂದು ಮೊಹರಂ ತಿಂಗಳಲ್ಲಿ ಮುಸ್ಲಿಮರು ಉಪವಾಸವ್ರತ, ಪವಿತ್ರ ಕುರಾನ್ ಪಠಣ, ದಾನ, ಧರ್ಮಗಳಂತ ಕಾರ್ಯಗಳಲ್ಲಿ ತೊಡಗಿ 'ಆ ದುಃಖದ ದಿನ'ವನ್ನು ನೆನಪಿಸಿಕೊಂಡು ಮೊಹರಂ ಆಚರಣೆ ಮಾಡುತ್ತಾರೆ.

ಇದು ಕಾಲಕ್ರಮೇಣ ಪರ್ಷಿಯನ್ ಮೂಲದ ರಾಜರ ಪ್ರಭಾವದಿಂದ ಭಾರತಕ್ಕೆ ಕಾಲಿರಿಸಿತು. ತನ್ನ ಮೂಲ ಆಶಯದೊಂದಿಗೆ ಮೊಹರಂ ಭಾರತದಲ್ಲಿ ನಡೆಯಲಾರಂಭಿಸಿತು. ಅದರಲ್ಲಿನ ಕೆಲವು ನೀತಿಭೋಧೆಗಳನ್ನು ನೋಡಿ ಅದರಲ್ಲಿ ಹಿಂದೂಗಳೂ ಸೇರಿಕೊಂಡರು. ಮೊಗಲ್ ಚಕ್ರವರ್ತಿಗಳು ಈ ಹಬ್ಬಕ್ಕೆ ಪ್ರೋತ್ಸಾಹ ನೀಡಿದರು. ಬಹಮನಿ ಆದಿಲ್‌ಶಾಹಿ ಸುಲ್ತಾನರಂತೂ ಅದರ ಭಾಗವಾಗಿಯೇ ನಡೆಸಿದರು. ಕಾಲಾಂತರದಲ್ಲಿ ಈ ಮೊಹರಂ ಹಬ್ಬದ ಸ್ವರೂಪವೇ ಬದಲಾಗುತ್ತ ಬಂದಿತು. ಇದರಲ್ಲಿ ರಾಜಕೀಯವೂ ಸೇರಿ ಮೂಲದ ಸ್ವರೂಪ ಮಸುಕಾಯಿತು. 'ಸಾಮ್ರಾಟ ಅಕ್ಬರ್' (೧೫೪೨-೧೬೦೫) ದೀನ್-ಎ-ಇಲಾಹಿ ಎಂಬ ಧರ್ಮವನ್ನು ಸ್ಥಾಪಿಸಿದ ನಂತರ ಮೊಹರಂ ಹಬ್ಬ ರಾಷ್ಟ್ರೀಯ ಹಬ್ಬವಾಗಿ ಮಾರ್ಪಾಡಾಯಿತು. ಇಂದಿಗೂ ಮಸೀದಿಯೊಳಗೆ ಪೀರಲ ದೇವರನ್ನು ಕೂಡಿಸುತ್ತಾರೆ. ಮಸೀದಿಯ ಮುಂದೆ ಅಲಾಯಿ ಕುಣಿ ತೋಡಿ ಅದರಲ್ಲಿ ಬೆಂಕಿ ಉರಿಸಲಾಗುತ್ತದೆ. ಕುಣಿಯಸುತ್ತ, ತಿರುಗುತ್ತ, ಕುಣಿಯುತ್ತ ಹಾಡುಗಳನ್ನು ಹಾಡುತ್ತಾರೆ. ಪೀರಲು ದೇವರುಗಳು ಸಾಯುವಾಗ ಅವುಗಳನ್ನು ಹಿಡಿದು ಊರಲ್ಲಿ ಸುತ್ತುತ್ತ ಜೈಕಾರ ಹಾಕುವುದು ಕಾಣುತ್ತೇವೆ. ಜನ ಕುಣಿಯ ಸುತ್ತ ಅಲಾಯಿ ಕುಣಿಯಲು ಜಾತಿಬೇಧವಿಲ್ಲದೆ ಸಂಭ್ರಮದಿಂದ ಸೇರುತ್ತಾರೆ. ಅಲಾಯಿ ಕುಣಿಯುವುದೇ ಉತ್ಸಾಹ ಸಡಗರದ ಹಬ್ಬವಾಗಿದೆ. ಹೀಗಾಗಿ ಮೂಲದ ದುಃಖಮಯವಾದ ಸಂಗತಿಯನ್ನು ಮರೆತು ಸಂತಸದಿಂದ ಅಲಾಯಿ ಕುಣಿಯುವುದನ್ನು ಕಂಡ ತತ್ವಪದಕಾರರು ವಿಷಾದಗೊಂಡು 'ಅಲಾಯಿ ಆಡೋಣ ಬನ್ನಿರಿ' ಎಂದು ಮೂಲ ಉದ್ದೇಶವನ್ನು ದೃಷ್ಟಿಯಲ್ಲಿಟ್ಟುಕೊಂಡು ಹಾಡಿದ್ದಾರೆ.

'ಆಲಾಯಿ ಎಂಬುದು ಏನಿದು
ಯಾರ್ಯಾರಿಗೆ ಇದು ತಿಳಿದಿಲ್ಲಾ
ತಿಳಿದ ಮ್ಯಾಲ ಅವರುಳಿದಿಲ್ಲಾ
ಉಳಿದ ಮ್ಯಾಲ ಅವರಳಿದಿಲ್ಲಾ
ಪೀರ್ ಪೈಗಂಬರ ಊಳಿದವರು
ಹಿಂದೂ ಮುಸಲ್ಮಾನ ಆಗಿದರು
ರಾಮ ರಹೀಮ ಅವರಿಬ್ಬರು
ದಿನ ದಯಾಳ ಶರಣರು'[೨೬](ನಿಡುವಂಚಿ ಭದ್ರೇಶ್ವರ)

ಇಲ್ಲಿ ಜನಸಾಮಾನ್ಯರ ನಡುವೆ ಬದುಕಿದ ಈ ತತ್ವಪದಕಾರನ ಗ್ರಹಿಕೆಯಲ್ಲಿ ಮುಗ್ಧತೆಯನ್ನು ಕಾಣಬಹುದು. ಆದರೆ ಹಿಂದೂ ಮುಸ್ಲೀಂ ಅನ್ನುವ ಭಾವೈಕ್ಯದ ಹುಸಿ ಕಲ್ಪನೆಯಿಲ್ಲ. ತನ್ನ ನೆಲೆಯಲ್ಲಿ ಈ ಸಂಬಂಧದ ತಾತ್ವಿಕ ಸಂಘರ್ಷವನ್ನು ಪ್ರಶ್ನಿಸಿದ್ದಾನೆ. ಈ ಆಚರಣೆಯ ಒಳಗಿನ ವೈರುಧ್ಯಗಳನ್ನೂ ವ್ಯಕ್ತಪಡಿಸಿದ್ದಾನೆ. ಇದರ ಸ್ವರೂಪ ಏಕಮುಖವಾಗಿಲ್ಲ. ಸಂಕೀರ್ಣವಾಗಿದೆ. ಈ ಸಂಕೀರ್ಣತೆಯ ತಲ್ಲಣಗಳನ್ನು ಕವಿ ಇಲ್ಲಿ ವ್ಯಕ್ತಪಡಿಸಿರುವುದು ಗಮನಾರ್ಹವಾದುದಾಗಿದೆ. ಒಂದು ಧಾರ್ಮಿಕ ಸಮುದಾಯ ನಂಬಿ ಆಚರಿಸುತ್ತಿರುವ ಆಚರಣೆಯನ್ನು ವಿಮರ್ಶಿಸುವ ದಿಟ್ಟತನ, ಇದು ಕೋಮುವಾದಿ ಪ್ರತಿಕ್ರಿಯೆಯಲ್ಲ. ಒಬ್ಬ ಸಂತ ಎಲ್ಲ ಬಗೆಯ ಸಮುದಾಯದೊಳಗೆ ಆಳವಾಗಿ ಬೇರೂರದೆ ಇದ್ದಲ್ಲಿ ಹೀಗೆ 'ಬೇರೆ' ಮತದವರ ಆಚರಣೆಗಳನ್ನು ವಿಮರ್ಶಿಸಲು ಸಾಧ್ಯವಾಗುವುದಿಲ್ಲ.

ಮೊಹರಂ ಹಬ್ಬದಲ್ಲಿ 'ಅಲಾಯಿ'ಯನ್ನೇ ದೃಷ್ಟಿಯಲ್ಲಿಟ್ಟುಕೊಂಡು ಬೇರೆ ಬೇರೆ ಅರ್ಥಕ್ಕೆ ಅದನ್ನು ಎಳೆದುಕೊಂಡು ಅನೇಕ ತತ್ವಪದಕಾರರು ಹಾಡಿದ್ದಾರೆ. 'ಮುಸ್ಲೀಂ' ತತ್ವಪದಕಾರನಾದ ಜಲಾಲ ಸಾಹೇಬನು,

'ಅಲಾಯಿ ಆಡಿದೇನು ಮೊಹಮ್ಮದ ಚಾಂಸೈ ಆಡಿದೇನ
ಮೊಹರಮ್ಮದ ಅರಿವಿನ ಅಲೈ ಭಾವದ ಚಾಂಸೈ
ಮೂರು ಕೂಡಿದಲ್ಲಿ ಮೊಹರಮ್ಮ ಮಾಡಿದೇನು ಅಲೈ ಆಡಿದೆನು ಎನ್ನುವ ಈ ತತ್ವಪದಕಾರ
ತನುವೆಂಬ ಮಸೂತಿ ಒಳಗೆ ಪಂಚ ತತ್ವದ
ಪಂಜು ಉರಿಸಿ ಜೀತ ಪೀರನ ವಲಿಸಿಕೊಂಡೆನು' ಎಂದಿದ್ದಾನೆ.[೨೭] ಇಲ್ಲ ಮನಶುದ್ಧಿಯಾಗಲು ಈ ತರಹದ ಆಚರಣೆಗಳು ಸಹಾಯಕವಾಗಿವೆ ಎಂಬ ಅರ್ಥದಲ್ಲಿ ಈ ಪದವನ್ನು ಹಾಡಿರುವುದು ಕಂಡುಬರುತ್ತದೆ. ನೀರಲಕೇರಿ ಬಸವಲಿಂಗ ಶರಣ, ವೆಂಕಟಾಪುರ ಖೇಮಣ್ಣ ಮುಂತಾದವರು 'ಅಲಾಯಿ'ಯನ್ನು ರೂಪಕವಾಗಿ ಬಳಸಿಕೊಂಡು ತತ್ವಪದಗಳ ಮೂಲಕ ಅಭಿವ್ಯಕ್ತಪಡಿಸಿದ್ದಾರೆ. ಈ ಆಚರಣೆಯನ್ನು ಹೊರಗಿನಿಂದ ನೋಡಿ ಪ್ರತಿಕ್ರಿಯಿಸಿದ ನೀರಲಕೇರಿ ಬಸವಲಿಂಗ ಶರಣ, ಕೂಡಿ ಕುಣಿಯುತ ಪುನಃ 'ಮುಟ್ಟಿರಿ ತಟ್ಟಿರಿ' ಎಂಬ ಭೇದವನ್ನು ಯಾಕೆ ಉಳಿಸಿಕೊಂಡಿರುವಿರಿ ಎಂದಿದ್ದಾನೆ. ಕೂಡಿ ಕುಣಿಯುತ್ತ 'ಮನಸವಾಲು ಮಾಡೋನು' ಎನ್ನುವ ಖೇಮಣ್ಣ ಸಾಮರಸ್ಯದ ಅರ್ಥದಲ್ಲಿಯೂ ಮತ್ತು ಮನಸ್ಸಿನ ವ್ಯಸನಗಳನ್ನು ಕಳೆದುಕೊಳ್ಳುತ್ತ ಭವದ ದುಃಖವನ್ನು ದೂರಮಾಡಿಕೊಳ್ಳಬೇಕು ಎಂದಿದ್ದಾನೆ.

**೫.೪.೬. ಜಾತಿ ಮೀರುವುದು**

ತತ್ವಪದಕಾರರು ಮೂಲತಃ ಯಾವುದೇ ಒಂದು ಜಾತಿ, ಧರ್ಮ, ಪಂಥಗಳಿಗೆ ಸೀಮಿತವಾದವರಲ್ಲ. ಅವರು ಸಮಾಜದ ಈ ಒಡಕುಗಳನ್ನು ಕಟ್ಟಲು ಪ್ರಯತ್ನಿಸಿದವರು. ಅವರ ಅನೇಕ ತತ್ವಪದಗಳು ಇದನ್ನೇ ಸಾರಿ ಹೇಳುತ್ತವೆ.

'ಕುಲಗೋತ್ರಂಗಳ ಬಿಟ್ಟು ನಿಜ ಜನರ ಸಂಗವ ಸುಟ್ಟು

ನಾರೇಯಣನ ಗುರಿಯಿಟ್ಟು ನಂಬಿದರೆ ಲೇಸುಂಟು'೨೮ (ಕೈವಾರ ನಾರಾಯಣ) ಕುಲ, ಜಾತಿ, ಮೀರಿ ನಿಲ್ಲುವ ತತ್ವವನ್ನು ಹೇಳದ ತತ್ವಪದಕಾರರಿಲ್ಲ. ಅದರಲ್ಲೂ ತತ್ವಪದಕಾರರು, ಸೂಫಿಗಳು, ಜಾತಿ, ಕುಲದ ಕಿಂಚಿತ್ ವಾಸನೆ ಉಳಿಸಿಕೊಂಡವರಲ್ಲ. ಬುದ್ಧ, ಬಸವ, ಕನಕದಾಸ, ಕಬೀರ, ಶರೀಫ್ ಮುಂತಾದ ಸಂತರು ಜಾತಿಯನ್ನು ಅಳಿಸಿ ಹಾಕಲು ತಮ್ಮನ್ನು ಅರ್ಪಿಸಿಕೊಂಡರು. ಇವರೆಲ್ಲ ಶತಮಾನಗಳಿಂದಲೂ ನಿರಂತರವಾಗಿ ಶ್ರಮಿಸಿದರೂ ಜಾತಿಯ ಬೇರುಗಳು ಇನ್ನೂ ಬಲಗೊಳ್ಳುತ್ತಲೇ ಇವೆ. 'ಆಧುನಿಕ ಭಾರತ' ಎಂದು ಕರೆಸಿಕೊಳ್ಳುವ ಈ ಹೊತ್ತಿನ ಸ್ಥಿತಿಯನ್ನು ನೋಡಿದರೆ ಜಾತಿಯ ಬೇರುಗಳು ದಿನೇ ದಿನೇ ಆಳಕ್ಕಿಳಿಯುತ್ತಲಿವೆ. ಇದಕ್ಕೆ ರಾಜಕೀಯವೂ ಕಾರಣವಾಗಿದೆ. ಆದರೂ ಕಾಲಕಾಲಕ್ಕೆ ಹುಟ್ಟಿಬಂದ ಸಂತರಿಂದಾಗಿ, ಅವರ ಉದಾತ್ತ ನಿಲುವಿನಿಂದಾಗಿ, ಅವರ ಲೌಕಿಕ ಶಕ್ತಿಯಿಂದಾಗಿ, ಅವರ ಶ್ರಮದಿಂದಾಗಿ ಜನತೆಯಲ್ಲಿ 'ಚಿಂತನೆ' 'ಅರಿವು' ಮೂಡಿದೆ. ಸಾಮರಸ್ಯಕ್ಕೆ ದಾರಿಯಾಗಿದೆ. ಕಳೆದ ನಾಲ್ಕೈದು ಶತಮಾನಗಳಿಂದ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಹುಟ್ಟಿದ ಸೂಫಿಗಳಿಂದಾಗಿ, ಅನುಭಾವಿಗಳಿಂದಾಗಿ, ಯೋಗಿಗಳಿಂದಾಗಿ 'ಹಿಂದೂ-ಮುಸ್ಲೀಂ' ಸಾಮರಸ್ಯ ಏರ್ಪಟ್ಟಿರುವುದು ನಿಜವಾಗಿಯೂ ಇಂದಿನ ಕೋಮುವಾದಿಗಳಿಗೆ ಒಂದು ಪಾಠವೇ ಆಗಿದೆ. ಎರಡು ದೊಡ್ಡ ಸಂಸ್ಕೃತಿಗಳು ಕೂಡಿ ಬಾಳಿದ ನಿದರ್ಶನಗಳು ಈ ಪ್ರದೇಶದಲ್ಲಿ ಈಗಲೂ ಜೀವಂತವಾಗಿವೆ. ಶಿಲ್ಲಪ್ಪ ಕವಿ ಒಂದು ಪದದಲ್ಲಿ 'ಆರೂಢ ನಮಕುಲ' ಎಂದಿದ್ದಾನೆ. ಆರೂಢ ಎಂದರೆ ಜೀವನ್ಮುಕ್ತರು ಎಂದರ್ಥ. ಮುಕ್ತವಾಗಿರುವ ಸೂಫೀ, ತತ್ವಪದಕಾರರಿಂದಾಗಿ ಜಾತಿ, ಮತವನ್ನು ಮೀರುವ ಜನರು ಇಲ್ಲಿರುವುದರಿಂದ ಸಮಾಜದಲ್ಲಿ ಭಾವೈಕ್ಯತೆಗೆ ಜಾಗವಿದೆ. ಆದರೂ ಜಾತಿ, ಮತಗಳ ಕಾರಣದಿಂದಾಗಿ ಸಂಘರ್ಷಗಳು ನಡೆಯುತ್ತಲೇ ಇವೆ. ಅನೇಕ ಪದಗಳಲ್ಲಿ ತತ್ವಪದಕಾರರು ಜಾತಿವಾದಿಗಳನ್ನು ಕಟುವಾಗಿ ಟೀಕಿಸಿ, ತಿಳುವಳಿಕೆಯನ್ನು ನೀಡಲು ಪ್ರಯತ್ನಿಸಿರುವುದು ಕಾಣಿಸುತ್ತದೆ.

'ಕುಲ ಕುಲ ಕುಲ ಕುಲ ಅಂತೀರಿ
ನಿಮದ್ಯಾವ ಕುಲ ನಮಗ ಹೇಳಿರಿ
ಮರ್ಮಾ ತಿಳಿಯಲಾರದೆ ಕುಂತೀರಿ
ಮರ್ಮವಗೆಟ್ಟು ಸತ್ತೀರಿ
ತಾಯಿ ಉದರದಲ್ಲಿ ಜನಿಸಿದಿರಿ
ಅಲ್ಲಿ ಯಾವ ಕುಲ ಇತ್ತು ಹೇಳಿರಿ
ಹೊರಗೆ ಬಂದು ನೀವು ವೇಷ ಧರಿಸೀರಿ
ಕುಲಛಲಕ ಹೊಡದಾಡುತೀರಿ
ಎಲವಿನ ಪಂಜರ ಮಾಡ್ಯಾನರಿ
ಹೊಲಸು ಮಾಂಸ ಒಳಗೆ ತುಂಬ್ಯಾನರಿ

ಚರ್ಮದ ಮುಚ್ಚಣಕಿ ಮಾಡ್ಯಾನರಿ

ಇದಕ ಯಾವ ಕುಲ ಅನಬೇಕರಿ'[೨೯] ಎಂದು ನಿಡುವಂಚಿ ಭದ್ರೇಶ್ವರ ಪ್ರಶ್ನಿಸಿದ್ದಾನೆ. ದೇಹ, ಆತ್ಮಗಳಿಗೆ ಕುಲದ ಗುರುತಿಲ್ಲ. ಕವಿ ತೊಡುವ ವೇಷಗಳ ಮೇಲೆ ಕುಲವನ್ನು ಗುರುತಿಸುವ ಬಗ್ಗೆ ವಿಷಾದಿಸಿದ್ದಾನೆ. ಕುಲವಿದ್ದಲ್ಲಿ ದೇವರು, ದೇವರಿದ್ದಲ್ಲಿ ಕುಲ ಮಾಡಿಕೊಂಡು ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಎಲ್ಲವನ್ನೂ ಬಳಸಿಕೊಂಡಿದ್ದಾನೆ. ದೇವರು ಬೇರೆ ಇಲ್ಲ. ಕಡಕೋಳು ಮಡಿವಾಳಪ್ಪ 'ಫಕೀರನಾಗಬೇಕು' ಎಂದಿದ್ದಾನೆ. ಎಲ್ಲ ತೊರೆಯುವುದು ಎಂದರೆ ವಿಮುಕ್ತನಾಗುವುದು ಎಂದಲ್ಲ. ಸೂಫಿ, ಅನುಭಾವಿ, ಸಂತರ ಮುಖ್ಯ ತತ್ವವೆಂದರೆ ಇದ್ದೂ ಇಲ್ಲದಂತಿರುವುದು. ಭವದ ಮೋಹಕ್ಕೆ ಬೀಳುವುದಕ್ಕೂ ಭವದ ಮೇಲಿನ ಪ್ರೀತಿಗೂ ವ್ಯತ್ಯಾಸವಿದೆ. ಮೋಹವಿದ್ದಲ್ಲಿ ಮಾತ್ರ ಬಂಧನವಿರುತ್ತದೆ. ಮೋಹ ತೊರೆಯಬೇಕೆಂಬುದು ಸಂತರ ತತ್ವವಾಗಿದೆ. ತನ್ನ ತಾ ತಿಳಿಯುವುದೇ ಈ ಸಂತರ ದಾರಿ. ದೇವರ ಮರ್ಮ ಯಾರಿಗೂ ಅರ್ಥವಾಗಿಲ್ಲವೆಂದು ಚೆನ್ನೂರು ಜಲಾಲ್ ಸಾಹೇಬ,

'ಸಬ್ ಕಹತೆ ಈಶ್ವರ್ ಅಲ್ಲಾ

ಇದರ ಚೇಫ್ ಯಾರಿಗೆ ತಿಳಿಯಲಿಲ್ಲ'[೩೦] ಎಂದಿದ್ದಾನೆ. ಹಿಂದೂ, ಮುಸಲ್ಮಾನರು ಶಾಸ್ತ್ರಗಳನ್ನು ಓದಿದರೂ ದೇವರ ಅರ್ಥ ತಿಳಿದುಕೊಂಡಿಲ್ಲ. ಯಾಕೆಂದರೆ ಒಳಗಿನ 'ಮೈಲಾ ತೊಳೆಯದೆ ಮ್ಯಾಲಿನ ಶೀಲ' ಪ್ರದರ್ಶಿಸಿದರೆ ಅದೇ ಅನುಮಷ್ಯನ ಅಧೋಗತಿ ಎನ್ನುತ್ತಾನೆ. ಮಡಿವಾಳಪ್ಪನು ಮಡಿ, ಮೈಲಿಗೆ, ಕುಲ ಎಂದು ಪ್ರತ್ಯೇಕತೆಯನ್ನು ಮಾಡಿಕೊಂಡ ಜಾತಿವಾದಿಗಳ ಬಗ್ಗೆ ನಿಷ್ಠುರವಾಗಿ ಪ್ರತಿಕ್ರಿಯಿಸಿದ್ದಾನೆ.

'ಉಚ್ಚ ನೀಚ ಅನ್ನತೀದಿ ಹುಚ್ಚನಾಯಿ
ಉಚ್ಚಿಯೊಳು ಬಂದೀದಿ ಹುಚ್ಚು ನಾಯಿ
ಮುಟ್ಟಿ ತಟ್ಟಿ ಅನ್ನತೀದಿ ಮುಂಡ ಖೋಡಿ
ಮುಡಚಿಟ್ಟಿನೊಳಗೆ ಬೆಳದಿ ಮುರವಗೇಡಿ ನೀ
ಕುಲಕುಲ ಅನ್ನತೀದಿ ಕುಲಗೇಡಿ
ಕುಲದ ಖೂನ ಹೇಳು ನಿಜ ನೋಡಿ
ಕೆಳಗೆಂದು ಮೇಲೆ ತಿಂದು ಹಾರಾಡತೀದಿ
ನಾವೆಲ್ಲರೂ ಒಂದರಿ ತಿಳಗೇಡಿ ನೀ

'ನಾವೆಲ್ಲರೂ ಒಂದರಿ'[೩೧] ಎಂಬ ಮಾತನ್ನು ತಿಳಿದವರು ನಿರಂತರವಾಗಿ ಹೇಳುತ್ತಲೇ ಬಂದಿದ್ದಾರೆ. ಮಡಿವಾಳಪ್ಪನ ಈ ಹದಗೊಂಡ ಮಾತು ನಿಷ್ಠುರವಾಗಿಯೂ ಇದೆ. ಬುದ್ಧಿಗೇಡಿಗಳಿಗೆ ತಣ್ಣಗೆ ಹೇಳಿದಂತಲೂ ಇದೆ. ಕೆಳವರ್ಗದವರಲ್ಲಿ ಅಂದರೆ ದುಡಿದುಣ್ಣುವ ಸಾಮಾನ್ಯ ಜನರಲ್ಲಿ ಕುಲದ ಬೇರುಗಳು ಬಲಗೊಳ್ಳುವುದಿಲ್ಲ. ಮೇಲ್ವರ್ಗದವರಲ್ಲಿ, ಬೌದ್ಧಿಕರು ತಮ್ಮ ಬೌದ್ಧಿಕತೆಯನ್ನೇ ಬಂಡವಾಳ ಮಾಡಿಕೊಂಡಿರುವುದರಿಂದ ಕುಲದ ನೆಲೆಗಳು ಬಲಗೊಂಡಿರುವುದನ್ನು ಕೂಡಲೂರು

ಬಸವಲಿಂಗಪ್ಪ, 'ಕುಲಚಲಕ್ಕೆಲ್ಲ ಹೋರಾಡಿ ನೆಲಗತ್ತಲಾಗುವ ಛಲಮಾರಿಗೆಲ್ಲ ಪಂಡಿತರೇ' ಎಂದಿದ್ದಾನೆ. ತತ್ವಪದಕಾರರು ಮಾನವರಾಗಿ ಮನುಷ್ಯನ ಜೊತೆಗಿದ್ದು ಕುಲಛಲಗಳನ್ನು ಮೀರಿ ನಿಂತು ಸಮಾಜದ ಹಿತಕ್ಕಾಗಿ ಯತ್ನಿಸಿದವರಾಗಿದ್ದಾರೆ. ಜಾತಿಭೇದದ ಬೇಗುದಿಯಲ್ಲಿ ಕುದಿಯುತ್ತಿರುವ ಇಂದಿನ ಅನೇಕರಿಗೆ ಅನುಭಾವಿಗಳ ಇಂತಹ ಅನುಭಾವದ ಮಾತುಗಳು ಎಂದಿಗೂ ಅನುಕರಣೀಯವೆ ಆಗಿವೆ.

**೫.೪.೭. ವಿದ್ಯಮಾನಗಳಿಗೆ ಪ್ರತಿಕ್ರಿಯೆ**

ಕಾಲಮಾನದ ವಿದ್ಯಮಾನಗಳಿಗೆ ಸ್ಪಂದಿಸದವನು ಲೋಕದಲ್ಲಿ ಇದ್ದರೂ ಒಂದೇ ಸತ್ತರೂ ಒಂದೆ. ಸಾಹಿತ್ಯವು ಕೂಡ ಇದಕ್ಕೆ ಹೊರತಲ್ಲ. ಕನ್ನಡ ಸಾಹಿತ್ಯವು ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ, ಸಾಮಾಜಿಕ ಕ್ಷೇತ್ರಗಳಿಗೆ ತನ್ನದೇ ಆದ ಪ್ರತಿಕ್ರಿಯೆಯನ್ನು ನೀಡುತ್ತಲೇ ಬಂದಿರುವುದು ಅದರ ಅನನ್ಯತೆಗೆ ಹಿಡಿದ ಸಾಕ್ಷಿಯಾಗಿದೆ. ತತ್ವಪದಕಾರರು ಲೋಕದ ಅನೇಕ ವಿದ್ಯಮಾನಗಳನ್ನು ಕಂಡಂಥವರು. ತಮಗೆ ಸರಿಕಂಡದ್ದನ್ನು ಮೆಚ್ಚಿ, ಸರಿಕಾಣದ್ದನ್ನು ಟೀಕಿಸುತ್ತ, ವಿಡಂಬಿಸುತ್ತಲೇ ಲೋಕದ ಹಿತವನ್ನು ಬಯಸಿದರು. ತತ್ವಪದಗಳು ಅವರ ವ್ಯಕ್ತಿತ್ವದ ಭಾಗವಾಗಿಯೇ ಇವೆ. ಅವರು ವ್ಯಂಗ್ಯ, ವಿಡಂಬನೆಗಳ ಮೂಲಕ ತಮ್ಮ ಕಾಲದ ರಾಜಕೀಯ, ಧಾರ್ಮಿಕ, ಸಾಮಾಜಿಕ ವ್ಯವಸ್ಥೆಗಳ ಜೊತೆ ಮುಖಾಮುಖಿಯಾಗಿದ್ದಾರೆ. ಆಳುವ ವ್ಯವಸ್ಥೆಯೇ ಇರಲಿ, ಪ್ರಬಲವಾದ ಧಾರ್ಮಿಕ ಶಕ್ತಿಗಳೇ ಇರಲಿ, ಬಲಿಷ್ಠವಾದ ಸಾಮಾಜಿಕ ಶಕ್ತಿಯೇ ಇರಲಿ, ಸರಿಕಾಣದ್ದನ್ನು ನಿಷ್ಠೂರವಾಗಿ ಖಂಡಿಸುವುದು ಅವರ ಜಾಯಮಾನವಾಗಿದೆ. ಅವರಿಗಿರುವ ಅನುಭಾವದ ಶಕ್ತಿಯೇ ಅವರನ್ನು ಈ ನಿಲುವುಗಳಿಗೆ ಬದ್ಧವಾಗಿಸಿದೆ. ಕಡಕೋಳ ಮಡಿವಾಳಪ್ಪ ತನ್ನ ಕಾಲದ ಅನಿಷ್ಟ ವ್ಯವಸ್ಥೆಗಳು ಅವು ಯಾವುದೇ ಇರಲಿ ಅವುಗಳನ್ನು ಕಟುವಾಗಿ ಟೀಕಿಗೆ ಗುರಿಮಾಡದೆ ಬಿಡುತ್ತಿರಲಿಲ್ಲ. ಜನತೆಯ ಕವಿಯಾದ ಮಡಿವಾಳಪ್ಪ ಸಮಾಜದ ನ್ಯಾಯಕ್ಕಾಗಿ ಪ್ರತಿಭಟಿಸುವಾಗ ಭಾಷಿಕ ನೆಲೆಯೂ ಶಿಷ್ಟತೆಯನ್ನು ಉಳಿಸಿಕೊಳ್ಳದೆ, ನೆಲಮೂಲ ಭಾಷೆಯಿಂದಲೇ ಟೀಕಿಸಿರುವುದು ಕಂಡು ಬರುತ್ತದೆ. 'ಮಾನಗೇಡಿ ಮಾನವರು' ಎಂಬ ತತ್ವಪದದಲ್ಲಿ,

'ಏನೇನು ಹಗರಣ ಮಾಡುವಿರೀ
ಜನರು ಇದಕಾರಂಜುವರು
ಮಾನ ಅಪಮಾನ ಖೂನ ಅರಿಯದವರು
ಮಾನಗೇಡಿ ಮಾನವರು'[೨೫] ಎಂದು ಹೇಳಿದ್ದಾನೆ. ಇಲ್ಲಿ ಮಡಿವಾಳಪ್ಪ ಕರೆದಿರುವ 'ಮಾನಗೇಡಿ ಮಾನವರು' ಸ್ವಾರ್ಥಿಗಳು, ದುಷ್ಟರು, ಸಮಯಸಾಧಕರು ಆಗಿದ್ದಾರೆ. ಇವರು ಜನಕ್ಕಂಜದೆ, ಮನಕ್ಕಂಜದೆ ಸಮಾಜದ ಎಲ್ಲ ವಲಯದಲ್ಲಿ ಮುಂಚೂಣಿಯಲ್ಲಿದ್ದಾರೆ ಮತ್ತು ಅಧಿಕಾರ ಸ್ಥಾನದಲ್ಲಿದ್ದಾರೆ. 'ಊರೊಳಗ ಹಿಡಿಯಲ್ಹೋದರೋ' ಇಂಥ ಮಂದಿ ಊರು ತುಂಬಿ ಹೆಚ್ಚಾಗಿದ್ದಾರೆ. 'ಪತ್ಯಾಮಾಡೋ ಉತ್ತಮರೆಲ್ಲ' ಎಂದರೆ 'ಪತ್ಯಾ' ಎಂದರೆ ಕೆಟ್ಟದ್ದನ್ನು ನಿರಾಕರಿಸುವ ನ್ಯಾಯವಂತರು ಎಲ್ಲಿ ಹೋದರು ಎಂದು ಮಡಿವಾಳಪ್ಪ ಚಿಂತೆಗೀಡಾಗಿದ್ದಾನೆ. 'ಪುಡಾರಿ'ಗಳು 'ಪುಂಡ'ರು

'ಕಾಮಿಗಳು' ಊರನ್ನು ಲೂಟಿ ಮಾಡುತ್ತಿದ್ದಾರೆ. ಮೇಲಾಗಿ 'ಬಡವನ ಮ್ಯಾಲೆ ಖಟ್ಲಾ ಹೊರಿಸಿ ಕೋರ್ಟಿಗೆಳಿಸ್ಯಾರೊ' ಎಂದಿರುವುದು ಗಮನಿಸುವಂಥದ್ದಾಗಿದೆ. ಅಸಹಾಯಕ ಬಡವರನ್ನು ಶೋಷಣೆಗೆ ಗುರಿಮಾಡಿದ್ದೂ ಅಲ್ಲದೆ ಅವರ ಮೇಲೆಯೇ ಅಪವಾದ ಹೋರಿಸಿ ತಪ್ಪಿತಸ್ಥರನ್ನಾಗಿ ಮಾಡಿದ್ದಾರೆ. ಈ ಮಾನಗೇಡಿ ಜನರು ಎಂದು ಮಡಿವಾಳಪ್ಪ ವ್ಯಥೆ ಪಟ್ಟಿದ್ದಾನೆ.

'ಈಗಿನ ಸಾಹುಕಾರರೆಲ್ಲ ಹ್ಯಾಂಗಾದರೊ
ಬಡವನ ಹೇಣ್ತಿ ಚೆಲುವಿ ಇದ್ದರ ಬಡ್ಡಿ ಕೊಡುವರೋ
ಲೆಕ್ಕಪತ್ರ ಇಲ್ಲದ ಇವರು ಖಾತ್ಯಾ ನಡಿಸ್ಯಾರೋ'[೩೩]

ಮೇಲಿನ ಮೂರು ಸಾಲಿಗಳಲ್ಲಿ ಹೈದರಾಬಾದ್ ಕರ್ನಾಟಕದ ಸಾಮಾಜಿಕ ಇತಿಹಾಸವಿದೆ. ಉಳ್ಳವರ ಕ್ರೌರ್ಯ, ಬಡವರ ದಾರುಣತೆಯ ಚಿತ್ರಣವಿದೆ. ಈ ಪ್ರದೇಶದಲ್ಲಿ ರಾಜಕೀಯವಾಗಿ ಮುಸ್ಲಿಮರು ಆಳುತ್ತಿದ್ದರೂ, ಸಾಮಾಜಿಕ ಸ್ಥಳೀಯ ಶ್ರೀಮಂತರು, ಭೂಮಾಲೀಕರು ಆಳ್ವಿಕೆ ನಡೆಸುತ್ತಿದ್ದರು ಎಂಬುದಕ್ಕೆ ಇದು ಸಾಕ್ಷಿಯಾಗಿದೆ. ಈ ಪ್ರದೇಶದಲ್ಲಿ ಅನ್ಯರ ಆಕ್ರಮಣವಾಗಿದ್ದರೂ ಸಾಮಾಜಿಕವಾಗಿ ಇಲ್ಲಿಯ ಜನಸಮುದಾಯಗಳ ಮೇಲೆ ಆಕ್ರಮಣವಾಗುತ್ತಿದ್ದುದು ಸ್ಥಳೀಕರೆ ಆಗಿರುವ ಭೂಮಾಲೀಕರಿಂದ ಎಂಬುದು ನಿಜ ಸಂಗತಿ. ಮಡಿವಾಳಪ್ಪನ ಈ ತತ್ವಪದ ಇಲ್ಲಿನ ಇತಿಹಾಸಕ್ಕೆ ಹಿಡಿದ ಕನ್ನಡಿಯಾಗಿದೆ. 'ಏನಾಗತದ' ಎನ್ನುವ ಅವರ ಇನ್ನೊಂದು ತತ್ವಪದಲ್ಲಿ ಈ ದೇಶದ ಬೆತ್ತಲೆ ಚಿತ್ರಣವನ್ನು ಹಾಡಿದ್ದಾನೆ. ಈ ಪದದ ಹೆಸರೆ ದಿಗಿಲುಟ್ಟಿಸುವಂತಿದೆ. 'ಏನಾಗತದ ಎಂತಾಗತದೊ ಈ ನಾಡ ನೀನೋಡ ತಮ್ಮಾ' ಎಂದಿದ್ದಾನೆ. ಅನುಭಾವಿಯಾದ ಈ ತತ್ವಪದಕಾರ ಕಾಲಜ್ಞಾನಿದಂತೆ ಮಾತನಾಡುವುದು ಸಹಜವಾಗಿದೆ.

ಈ ದೇಶದ ರೈತರ ಸ್ಥಿತಿ ಏನಾಗಿದೆ ಎಂದು ಇನ್ನೂರು ವರ್ಷದ ಹಿಂದಿನ ಮಡಿವಾಳಪ್ಪ ನುಡಿದಿದ್ದಾನೆ. ಇಪ್ಪತ್ತೊಂದನೆಯ ಶತಮಾನಕ್ಕೆ ಕಾಲಿಡುವ ಈ ಹೊತ್ತಿನಲ್ಲಿಯೂ ರೈತರಿಗೆ ಸಿಗಬೇಕಾದ ಸ್ಥಾನ ಸಿಕ್ಕಿಲ್ಲ. ದೇಶದ ಬೆನ್ನೆಲುಬು ಎಂದು ಹೊಗಳುತ್ತಾರೆ. ಅನ್ನ ಕೊಡುವ ದೇವರು ಎನ್ನುತ್ತಾರೆ. ಆದರೆ ಅವನ ಗತಿ ಅಧೋಗತಿಯಾಗಿದೆ ಎಂಬುದು ಮಾತ್ರ ಕಟು ಸತ್ಯ. ಮೊದಲೇ ಈ ದೇಶ ದಲ್ಲಾಳಿಗಳ ದೇಶ. ರೈತರು ಬೆಳೆದ ಬೆಳೆಗೆ ಸರಿಯಾದ ಬೆಲೆ ಸಿಗದು. ಬೆಳೆದ ಬೆಳೆಯನ್ನು ರಕ್ಷಿಸಿಡಲು, ಕಾಯ್ದಿಡಲು ಸರಿಯಾದ ವ್ಯವಸ್ಥೆಗಳಿಲ್ಲ. ರಕ್ಷಿಸಿಡಲು ರೈತರಿಗೆ ಅವಕಾಶವಿಲ್ಲದಿದ್ದ ಮೇಲೆ ದಲ್ಲಾಳಿಗಳೆಂಬ ಮಧ್ಯವರ್ತಿಗಳಿಗೆ ಅವರು ಕೇಳಿದ ಬೆಲೆಯಲ್ಲಿ ಮಾರಬೇಕು. ಒಂದಕ್ಕೆ ಕೊಂಡು ನಾಲ್ಕಕ್ಕೆ ಮಾರುವ ದಲ್ಲಾಳಿಗಳೆಂಬ, ದುಡಿಯದ 'ಭಂಟ'ರಿಗೇ ಲಾಭವಿದೆ. ಬೆಳೆದ ರೈತರಿಗೆ ಲಾಭವಿಲ್ಲ. ಆಧುನಿಕ ಕಾಲದ ಕವಿ ದ.ರಾ. ಬೇಂದ್ರೆ ಕೂಡ 'ಭೂಮಿ ತಾಯಿಯ ಚೊಚ್ಚಲಮಗ' ಎಂಬ ಪದ್ಯವನ್ನು ಬರೆದಿರುವುದನ್ನು ಇಲ್ಲಿ ನೆನೆಸಿಕೊಳ್ಳಬಹುದು. ದುಡಿಯದೆ, ದುಡಿದವರ 'ಶಕ್ತಿ'ಗೆ ಪ್ರಭುತ್ವವನ್ನು ಪಡೆಯುವ ದಲ್ಲಾಳಿಗಳಿಗೆ ಈ ದೇಶವನ್ನು ಆಳುವ ಬಲ ಬರುತ್ತದೆ ಎಂದಿರುವ ಮಡಿವಾಳಪ್ಪನ ಮಾತು ಸೂಕ್ತವಾಗಿದೆ. 'ಇಂದಿನ ಬಹುರಾಷ್ಟ್ರೀಯ ಕಂಪೆನಿಗಳಿಗೆ ಈ ದೇಶವನ್ನು ಆಳಲು ಬರುತ್ತಿವೆ ಅವಕ್ಕೆ ರತ್ನಗಂಬಳಿ ಹಾಸಿ

ಸರ್ಕಾರಗಳು ಸೌಲಭ್ಯಗಳನ್ನು ಒದಗಿಸುತ್ತಿವೆ. ಅವುಗಳಿಗೆ ರೈತ-ಭೂಮಿಯ ಅವಿನಾಭಾವ ಸಂಬಂಧ ತೀಳಿಯುವದಿಲ್ಲ. ಅಭಿವೃದ್ಧಿ ಹೆಸರಿನಲ್ಲಿ ಫಲವತ್ತಾದ ಭೂಮಿ ಬಂಡವಾಳಶಾಹಿಗಳ ಕೈಸೇರುತ್ತಿರುವುದು ಇಂದಿನ ರೈತರಿಗೆ ಆತ್ಮಹತ್ಯೆ ಮಾಡಿಕೊಳ್ಳುವಂತೆ ಮಾಡಿದೆ. ಈ ಸೂಕ್ಷ್ಮತೆಗಳನ್ನು ಅನುಭಾವಿಗಳು ಆ ಕಾಲದಲ್ಲೇ ನೀಡಿದ್ದರು. ಇಂದಿನ ಬಹುರಾಷ್ಟ್ರೀಯ ಕಂಪೆನಿಗಳ ವ್ಯವಸ್ಥೆಯ ಹಿನ್ನೆಲೆಯಲ್ಲಿ ನೋಡಿದರೆ ಮಡಿವಾಳಪ್ಪನ ಈ ತತ್ವಪದಕ್ಕೆ ಇನ್ನೂ ಅರ್ಥ ಬರುತ್ತದೆ. ದುಡಿಯದ 'ಭಂಟ'ರಾಗಿ ಕಾಣುವ ಬಹುರಾಷ್ಟ್ರೀಯ ಕಂಪೆನಿಗಳ ಮಾಲೀಕರು ನಮ್ಮ ಸಂಪತ್ತನ್ನೂ ನಮ್ಮ ಕಣ್ಣಮುಂದೆ ದೋಚುತ್ತಿದ್ದಾರೆ ಎಂಬ ವ್ಯಥೆ ಈ ತತ್ವಪದದಲ್ಲಿದೆ.

'ದೇಶವನ್ನು ನಿಯಂತ್ರಿಸಿ, ಆಳಾಕ ಬರತಾರ.
ನಲಿದು ದುಡಿವರ ಕೈ ಕಡಿಯುವ ಸರತಿ ಬರತಾದೊ
ಸುಳ್ಳೇಳುವರೆಲ್ಲ ಸತ್ಯವಂತರಾಗಿ ಮೆರಿತಾರೊ
ಕಳ್ಳರೆಲ್ಲ ಕೂಡಿ ನಾಡನಾಳುವ ಸರತಿ ಬರತಾದೊ'[೩೪] ಎಂದು ಹೇಳಿರುವುದು ರಾಜಕೀಯ ಸ್ಥಿತಿಯನ್ನು ಹೇಳಿದಂತಿದೆ. ಅನೇಕ ಅಪರಾಧಗಳನ್ನು ಮಾಡಿದ, ಹಲವಾರು ಆರೋಪಗಳನ್ನು ಹೊತ್ತ, ಜೈಲು ಸೇರಿದ ಜನವೇ ಇಂದಿನ ರಾಜಕೀಯ ಮುಖಂಡರಾಗಿ ದೇಶವನ್ನು ಆಳುತ್ತಿದ್ದಾರೆ. ಇದು ಈ ದೇಶದ ದುರಂತವೇ ಆಗಿದೆ. ಇದರಿಂದಾಗಿ ಮೌಲ್ಯದ ಬಗ್ಗೆ ತತ್ವದ ಬಗ್ಗೆ ಮಾತನಾಡುವುದು ಈ ದೇಶದಲ್ಲಿ ಹಾಸ್ಯಾಸ್ಪದವಾದ ಸಂಗತಿಯಾಗಿದೆ. ಕೇವಲ ರಾಜಕೀಯ ವಲಯದಲ್ಲಿ ಮಾತ್ರವಲ್ಲ. ಸಮಾಜದ ಎಲ್ಲ ವಲಯಗಳಲ್ಲಿ ತತ್ವನಿಷ್ಠೆಯಿಲ್ಲದ, ಕನಿಷ್ಠ ಪ್ರಾಮಾಣಿಕತೆಯಿಲ್ಲದ ಬರೀ ಸ್ವಾರ್ಥಿಗಳೇ ತುಂಬಿಹೋಗಿದ್ದಾರೆ. ಮಡಿವಾಳಪ್ಪ ಮುಂದುವರೆದು, 'ಯೋಗ ಪೀಠದಲ್ಲಿ ಭೋಗ ಪಾಠ ನಡಿತಾದೊ' ಎಂದಿದ್ದಾನೆ. ಇದು ಸಮಾಜಕ್ಕೆ ನೀತಿ ಪಾಠ ಹೇಳಿಕೊಡುವ ಸ್ವಾಮಿಗಳು ಅನೀತಿಯಿಂದ, ಅನೈತಿಕತೆಯಿಂದ ವರ್ತಿಸುವ ಪರಿಯನ್ನು ಹೇಳಿದಂತಿದೆ. ಅದು ಇಂದಿಗೂ ಸತ್ಯವಾಗಿ ಕಾಣುತ್ತಿದೆ. ಕೆಲ ಸ್ವಾಮಿಗಳು ತಮಗೆ ಸರಿ ಕಂಡವರ ಜೊಲೆ ಸ್ವೇಚ್ಛೆಯಿಂದ ತಮ್ಮ ವಿಕೃತರೂಪದ ದರ್ಶನ ಮಾಡುತ್ತಿದ್ದಾರೆ. ಪವಿತ್ರವಾದ ಮಠ, ಗುಡಿಗಳನ್ನೂ ಅಪವಿತ್ರ ಸ್ಥಳಗಳನ್ನಾಗಿ ಮಾಡಿ ಮಲಿನ ಮಾಡಿರುವುದು ಧಾರ್ಮಿಕ ವ್ಯವಸ್ಥೆಯ ಅಧೋಗತಿಯನ್ನು ತಿಳಿಸುತ್ತದೆ.

ಇಂದಿನ ಆಧುನಿಕ ಬದುಕಿನ ಚಿತ್ರಣವೂ ಕಡಕೋಳ ಮಡಿವಾಳಪ್ಪನ ಅನೇಕ ತತ್ವಪದಗಳಲ್ಲಿದೆ. ಈ ದೇಶದ ಚರಿತ್ರೆಯನ್ನೇ ಮಡಿವಾಳಪ್ಪ ದಿಟ್ಟವಾಗಿ ಹಾಡಿದ್ದಾನೆ. ಈ ತತ್ವಪದಕಾರ ಒಂದು ಕಡೆ ಬೇಸತ್ತು, 'ನಾ ಬರಬಾರದಿತ್ತು ಈ ಊರಿಗೆ' ಎಂದಿದ್ದಾನೆ. ಈ ದೇಶದಲ್ಲಿ ಹುಟ್ಟಬಾರದಿತ್ತು ಎನ್ನುವ ನಿಟ್ಟುಸಿರಿನ ಹತಾಶೆಯ ಮಾತುಗಳು ಪ್ರಾಮಾಣಿಕರಿಂದ, ಸಾತ್ವಿಕರಿಂದ ಅನೇಕ ಸಲ ಬಂದಿರುವುದನ್ನು ನಾವು ಕೇಳಿದ್ದೇವೆ. ಸಮಾಜದಲ್ಲಿ ಧಾರ್ಮಿಕವಾಗಿ ಬಲಿಷ್ಠರಾದವರನ್ನು ಮಡಿವಾಳಪ್ಪ ವಿಡಂಬನೆಗೆ ಗುರಿಮಾಡಿದ್ದಾನೆ. ತನ್ನ ಕಾಲದಲ್ಲಿ ವೈದಿಕ, ಲಿಂಗಾಯತ ಹಾಗೂ ಇಸ್ಲಾಂ ಧರ್ಮಗಳನ್ನು ಆ ಧರ್ಮಗಳಲ್ಲಿರುವ ವ್ಯಕ್ತಿಗಳನ್ನು, ಅವರ ನಂಬಿಕೆ, ಆಚರಣೆಗಳನ್ನು

ಟೀಕೆಗೆ ಗುರಿಮಾಡಿದ್ದಾನೆ. ಮುಸ್ಲೀಂ ಆಳ್ವಿಕೆಯಲ್ಲಿಯೂ ಇಸ್ಲಾಂ ಧರ್ಮದ ನಿಯಮಗಳನ್ನು ವಿಡಂಬಿಸಿರುವುದನ್ನು ಗಮನಿಸಿದರೆ ಅದು ಅವನ 'ಅನುಭಾವ'ದ ಶಕ್ತಿಯಿಂದಲೇ ಸಾಧ್ಯವಾದುದು ಅನಿಸುತ್ತದೆ. 'ನೆಟ್ಟನೆ ತಿಳಿ' ಎನ್ನುವ ತತ್ವಪದದಲ್ಲಿ ಬ್ರಾಹ್ಮಣರಿಗೆ, ಕ್ಷತ್ರಿಯರಿಗೆ, ಲಿಂಗಾಯತರಿಗೆ, ಯೋಗಿಗಳಿಗೆ ಟೀಕಿಸಿದ್ದಾನೆ. ಯಾವ ಬಂಧನಗಳಿಗೆ ಸಿಗದ, ಯಾವ ಆಚರಣೆ, ನಂಬಿಕೆ, ವಿಧಿ–ವಿಧಾನಗಳಿಗೆ ಬಲಿಬೀಳುವ ಮತ್ತು ಯಾವ ವ್ಯವಸ್ಥೆಯನ್ನು ಒಪ್ಪದ ಅನುಭಾವಿ ಮಾತ್ರ ಹೇಳುವಂತಹ ಮಾತುಗಳಿವು. ಎಲ್ಲ ಧರ್ಮಗಳಲ್ಲಿರುವ ವಿಧಿ–ವಿಧಾನಗಳ ಆಚರಣೆಗಳನ್ನು ಈ ಪದದಲ್ಲಿ ವಿಡಂಬಿಸಿದ್ದಾನೆ. ಶೂದ್ರರಿಗೂ, 'ಬಹುದೈವಂಗಳನಾದರಿಸಿದರಲಿಲ್ಲ' ಎಂದಿದ್ದಾನೆ. ರಾಜಕೀಯವಾಗಿ ಆಳುವ ವರ್ಗವಾದ ಮುಸ್ಲಿಂ ಆಚರಣೆಗಳನ್ನು ಅಲ್ಲಗಳೆದಿರುವುದು ತುಂಬ ವಿಶಿಷ್ಟವಾಗಿ ಕಾಣುತ್ತದೆ. 'ಆಡುವದೊಂದು ಮಾಡುವದೊಂದು' ಎಂಬ ತತ್ವಪದದಲ್ಲಿ,

'ಮುಸಲ್ಮಾನರಂತೀರಿ ತುರ್ತ ಸುಂತಿ ಮಾಡ್ತೀರಿ
ಉಸಲ ಬಿಟ್ಟು ಫಾತ್ಯಾಕೊಟ್ಟು
ಬಿಸಮಿಲ್ಲಾ ಅಂತಿರಿ'[೩೫] ಎನ್ನುತ್ತಾನೆ. ಯಾವುದೇ ಧರ್ಮದ ಮೂಲ ತಿರುಳು ಇರುವುದು ಮಾನವೀಯತೆ ಮತ್ತು ಸನ್ಮಾರ್ಗದಲ್ಲಿ. ಇದು ಬಿಟ್ಟು ಧರ್ಮದ ಹೆಸರಿನಲ್ಲಿ ಮಡಿ, ಮೈಲಿಗೆ, ಜಾತಿ ಮತ್ತು ಸಂಪ್ರದಾಯಗಳ ಆಚರಣೆಗಳು ಇವುಗಳನ್ನೇ ಮುಂದುಮಾಡಿಕೊಂಡು ಮನುಷ್ಯ ಮನುಷ್ಯನ ನಡುವೆ ಪ್ರತ್ಯೇಕತೆಯ ಗೋಡೆಗಳನ್ನು ಸೃಷ್ಟಿಸುವುದರಿಂದ ಸಮಾಜದಲ್ಲಿ ಅಸಮಾನತೆ ಬೆಳೆಯುತ್ತದೆಯೇ ಹೊರತು ಸಾಮರಸ್ಯವಲ್ಲ ಎಂಬುದು ಇದರಿಂದ ತಿಳಿಯುತ್ತದೆ.

'ಮುಟ್ಟಾದ ಮೂರು ದಿನಕ ಹುಟ್ಟಿ ಬಂದಿರಿ ನೀವು
ಮುಡಿಚಟ್ಟು ಎಲ್ಲ್ಯಾದ್ದೇಳಣ್ಣ
ತೊಗಲೊಳ ತೊಗಲ್ಹೊಕ್ಕು ತಗಲಿ ಬಂದವನೀನು
ತಗಲ ಮಾತಾಡುವದೇನಣ್ಣ'[೩೬] ಎಂದು ಮುಚ್ಚುಮರೆಯಿಲ್ಲದೆ ಕಟುಸತ್ಯದ ಸಂಗತಿಯನ್ನೇ ಹೇಳಿದ್ದಾನೆ. ಜಂಗಮತತ್ವವನ್ನು ಕಳೆದುಕೊಂಡು ಸ್ಥಾವರಕ್ಕೆ ಬಂದಿರುವ ಮಡಿ ಮೈಲಿಗೆ ಮತ್ತು ಎಲ್ಲ ಸ್ಥಾಪಿತ ವ್ಯವಸ್ಥೆಯನ್ನು ಮಡಿವಾಳಪ್ಪ ಇಲ್ಲಿ ನಿಂದನೆಗೆ ಈಡುಮಾಡಿದ್ದಾನೆ. ಕಂಡವರ ಮನೆಯಲ್ಲಿ ಉಂಡು, ಕೈಕಾಲು ಬೀಳಿಸಿಕೊಳ್ಳುವ ಜಂಗಮರನ್ನು, ಸಂತೆಯಲ್ಲಿ ಲಿಂಗ ಕಟ್ಟಿಸಿಕೊಳ್ಳುವವರನ್ನು ನೋವಿನಿಂದ, ವಿಷಾದದಿಂದ ಕಂಡಿದ್ದಾನೆ. ಲಿಖಿತ ರೂಪದ ಶಾಸ್ತ್ರ ಪಾಂಡಿತ್ಯವನ್ನು, ಓದಿನಿಂದ ಪಡೆದ ಬೌದ್ಧಿಕತೆಯನ್ನು ತತ್ವಪದಕಾರರು ವಿರೋಧಿಸುತ್ತಾರೆ. ಮೂಲತಃ ತತ್ವಪದಕಾರರು ಬಯಲು ಬಳಿಕೆಯ ಸಾಧಕರು. ಓದಿನಿಂದ ಪಡೆದ ಪಾಂಡಿತ್ಯವು ತರ್ಕಕ್ಕೆ ದಾರಿ ಮಾಡುತ್ತದೆ. ತರ್ಕದಿಂದ ಏನನ್ನಾದರೂ ಹೇಳಬಹುದು. ಹೇಳಿ ವಾದಿಸಬಹುದು. ಆದರೆ ಇವರು ಸ್ವಹಿತಸಾಧನೆಗೆ ಬೇಕಾದದ್ದನ್ನು ಮಾಡಿಕೊಳ್ಳುತ್ತಾರೆ. ಇಂಥವರನ್ನು ತತ್ವಪದಕಾರರು ಹಲವು ಬಗೆಯಲ್ಲಿ ಪ್ರಶ್ನಿಸಿದ್ದಾರೆ.

'ಕುಲಛಲಕೆ ಹೋರಾಡಿ ನೆಲಗತ್ತಲಾಗುವ
ಛಲಮಾರಿಗಳೆಲ್ಲ ಪಂಡಿತರೆ?

ಹಲವು ದೇಶದ ತಿರುಗಿ ನಾನಾ ಭಾಷೆಯ ಕಲಿತು
ಬಲು ಶ್ಯಾಣೆರಾದವರು ಪಂಡಿತರೆ?
ಸುಲಭಗಿ ಸೂಕ್ಷ್ಮದಿ ನಿಜವಸ್ತು ತಿಳಿಯದ
ಬಲು ಥಾಂಬಿಕರಿವರೆಲ್ಲ ಪಂಡಿತರೆ?'[೩೭] ಎನ್ನುವ ಕೂಡಲೂರು ಬಸವಲಿಂಗಪ್ಪನು, ಇಲ್ಲಿ 'ನಾನಾ ಭಾಷೆಯ ಕಲಿತು' ಎಂದರೆ ವೈದಿಕರನ್ನು ಉದ್ದೇಶಿಸಿ, ಸಂಸ್ಕೃತ ಭಾಷೆಯನ್ನು ಗಮನದಲ್ಲಿರಿಸಿಕೊಂಡು ಹೇಳಿದ ಮಾತಾಗಿ ಕಾಣುತ್ತದೆ. ನೆಲಮೂಲದ ಭಾಷೆಗೆ ಹಂಬಲಿಸಿದ, ಮೇಲಾಗಿ ಲಿಖಿತ ಭಾಷೆಯ ಹಂಗು ತೊರೆದ ತತ್ವಪದಕಾರರು ಸಂಸ್ಕೃತ ಭಾಷೆಯ ಓದು ಮತ್ತು ಅದರ ಜ್ಞಾನವನ್ನು ತಿರಸ್ಕರಿಸಿದವರು. ಇಲ್ಲಿ ಜ್ಞಾನ ಎಂದರೆ ಓದಿನ ಜ್ಞಾನ. 'ಬಾಯಿಲೊಂದು ಆಡ್ತೀರಿ ಮನಸಿನೊಳಗೊಂದು ಮಾಡ್ತೀರಿ ಬರದಿಟ್ಟಿದು ಓದಿಕೊಂಡು ಭ್ರಾಂತಿಗೆಟ್ಟು ಹೋಗತೀರಿ' ಎಂದು ಕಡಕೋಳ ಮಡಿವಾಳಪ್ಪ ಹೇಳಿದ್ದಾನೆ. 'ಬರದಿಟ್ಟಿದು' ಎಂದರೆ ಸ್ವಂತಿಕೆ ಇಲ್ಲದ್ದು, ಎರವಲು ಪಡೆದ ಜ್ಞಾನದಿಂದ 'ನಿಜವಸ್ತು' ಸಿಗುವುದಿಲ್ಲವೆಂದು ದಿಟವಾಗಿ ಹೇಳಿದ್ದಾನೆ. ಅರಿವಿನಿಂದ ತಿಳುವಳಿಕೆಯೇ ಶ್ರೇಷ್ಠವಾದದ್ದು, ಅದೇ ಭವದಿಂದ ದೂರ ಮಾಡುವಂಥದ್ದು ಎಂದು ಮಡಿವಾಳಪ್ಪ, ಹೇಳಿದ್ದಾನೆ.

ವೈದಿಕರು 'ಶಾಸ್ತ್ರಪುರಾಣ ವೇದ ಆಗಮ ಮುಂತಾದ ಲಿಖಿತ ರೂಪದ ಜ್ಞಾನವನ್ನು ಪಡೆದು, ಅದನ್ನೇ ಬಂಡವಾಳ ಮಾಡಿಕೊಂಡು, ಸಾಮಾನ್ಯ ಜನರೆದುರಿಗೆ ತಮ್ಮ 'ಬರೆದಿಟ್ಟ ಓದಿ'ನ ಬಲದಿಂದ ವಂಚಿಸಿದರು. ಅದರಿಂದಲೇ ತರ್ಕ, ಕುತರ್ಕಗಳಿಂದ ಪೂರ್ವಜನ್ಮದ ಕರ್ಮ, ಪಾಪ, ನರಕ ಇತ್ಯಾದಿಗಳನ್ನು ಸೃಷ್ಟಿಸಿ ಶೋಷಣೆ ಮಾಡಿರುವುದನ್ನು ಕಂಡ ತತ್ವಪದಕಾರರು ಇಂಥ ಬರೆದಿಟ್ಟ ಓದನ್ನು, ಅದರ ಪಾಂಡಿತ್ಯವನ್ನು ನಿಷ್ಠೂರವಾಗಿ ಖಂಡಿಸಿದ್ದಾರೆ. ಮೋಟ್ನಹಳ್ಳಿ ಹಸನಸಾಹೇಬನ ಪದ ಹೀಗಿದೆ:

'ವೇದ ಶಾಸ್ತ್ರಗಳ ಓದಿ ಪಠಿಸಿಯದರ
ಭೇದವರಿಯದೆ ಬರೆ ಓದಿದರೇನೋ
ಸಾಧಿಸಿ ಸದ್ಗತಿ ಪಡೆಯದೆ ಭವ
ಬಾಧೆಯಲ್ಲಿ ಭವ ಭವ ತಿರುಗುವ'[೩೮] ತತ್ವಪದಕಾರರ ಇಂಥ ಮಾತುಗಳನ್ನು ಗಮನಿಸಿದರೆ ಅಕ್ಷರದ ಓದು ಬಲ್ಲವರಾದ ಪಂಡಿತರಿಗೂ ಮತ್ತು ಅಕ್ಷರರಹಿತವಾದ ಕೇವಲ ಅನುಭವ ಮತ್ತು ಅರಿವಿನ ಮೂಲಕ ಪಡೆದವರ ನಡುವೆ ಸಂಘರ್ಷ ಸಣ್ಣ ಪ್ರಮಾಣದ್ದಲ್ಲ ಎನಿಸುತ್ತದೆ. ಪಂಡಿತರು ಮತ್ತು ಅನುಭಾವಿಗಳ ನಡುವೆ ನಿರಂತರವಾದ ತಿಕ್ಕಾಟ ನಡದೇ ಇದೆ. ಮೂಲತಃ ಬರೆದಿಟ್ಟ ಓದಿನ ಜ್ಞಾನವು ಶೋಷಣೆಗೆ ದಾರಿಯಾಗಿದೆ. ಅರಿವಿನಿಂದ ಪಡೆದ ಜ್ಞಾನವು ಮಾನವೀಯತೆಗೆ ಕಾರಣವಾಗಿರುವುದೇ ಇಲ್ಲಿಯ ಮುಖಾಮುಖಿಗೆ, ತಿಕ್ಕಾಟಕ್ಕೆ ಎಡೆಯಾಗಿದೆ. ಇದು ಆ ಕಾಲದ ನಿಜರೂಪ ಮಾತ್ರವಲ್ಲ. ಪ್ರಸ್ತುತದ ವಾಸ್ತವವೂ ಆಗಿದೆ. ಬದುಕಿನಿಂದ ಅನುಭವಿಸಿ ಪಡೆದ ಜ್ಞಾನ ಅಪಾರವಾಗಿದ್ದರೂ ಕೂಡ ಅದು ಲೆಕ್ಕಕ್ಕೆ ಬರುವುದಿಲ್ಲ. ಓದಿನಿಂದ ಪಡೆದ ಜ್ಞಾನಕ್ಕೆ

ಮನ್ನಣೆಯಿರುವುದು ಈಗ ಕಾಣುತ್ತೇವೆ. ಪದವಿ ಇದ್ದರೆ ಜ್ಞಾನವಿದೆ ಎಂದು ತಿಳಿಯುವ ಇಂದಿನ ಸ್ಥಿತಿಗೂ, ಶಾಸ್ತ್ರದ ಓದು ಇದ್ದರೆ ಪಂಡಿತರೆಂದು ತಿಳಿಯುವ ಅಂದಿನ ಸ್ಥಿತಿಗೂ ವ್ಯತ್ಯಾಸ ಕಾಣಿಸದು. ಇದು ಅಂದಿನಿಂದ ನಡೆದು ಬಂದಿದೆ. ಓದಿನ ಪಂಡಿತರನ್ನು, ಪಾಂಡಿತ್ಯವನ್ನು, ಬಯಲು ಗಳಿಕೆಯ ಅನುಭಾವಿಗಳು ವಿರೋಧಿಸುತ್ತಾ ಬಂದಿದ್ದಾರೆ. ಅಕ್ಷರಜ್ಞಾನದ ಪಂಡಿತರನ್ನು ಹಸನ ಸಾಹೇಬ 'ಶ್ಯಾಣ್ಯಾ' ಎಂದು ಕರೆದು ಗೇಲಿ ಮಾಡಿದ್ದಾನೆ.

ಶ್ಯಾಣ್ಯಾನಂದರ ಯಾರ ಶ್ಯಾಣ್ಯಾ?
ಮೂರು ಮಲದ ಕಸಮುಸಿರಿ ಇಟಕೊಂಡು ನಾ
ಧೀರನೆಂದರೆ ಯಾತಕ ಶ್ಯಾಣ್ಯಾ
ವಿಚಾರವಿಲ್ಲದ ಯಾತರ ಶ್ಯಾಣ್ಯಾ
ಮಾನವ ಜನ್ಮದ ಖೂನವ ತಿಳಿಯದೆ
ಸ್ನಾನನಾದರ ಯಾತರ ಶ್ಯಾಣ್ಯಾ?
ಜ್ಞಾನಭರತಿ ನಮ್ಮ ಇಟಪೂರೀಶನೊಳು
ತಾನೇ ತಾನಾದವನೇ ಶ್ಯಾಣ್ಯಾ'[೫೫]

'ಜ್ಞಾನಭರತಿ' ಎಂದರೆ ಅನುಭವದ ಜ್ಞಾನ, ಅರಿವಿನ ತಿಳುವಳಿಕೆಯ ಜ್ಞಾನ. ಮನುಷ್ಯತ್ವದ ಜ್ಞಾನವೇ ಹೊರತು ಓದಿನ ಅಹಂಕಾರದ ಜ್ಞಾನವಲ್ಲ ಎಂಬುದು ತತ್ವಪದಕಾರರ ನಿಲುವು. ವಚನಕಾರರ ಪರಂಪರೆಗೆ ಸೇರಿದ ಈ ತತ್ವಪದಕಾರರು ಇಂಥ ವಿಷಯಗಳಲ್ಲಿ ಸಮಾನ ನಿಲುವಿನಲ್ಲಿ ಪ್ರಶ್ನಿಸಿದ್ದಾರೆ.

**೫.೪.೮. ಆಧುನಿಕತೆ ಮತ್ತು ತತ್ವಪದಕಾರರು**

ಆಂಧ್ರ ಮತ್ತು ಮಹಾರಾಷ್ಟ್ರ ಗಡಿ ಪ್ರದೇಶಕ್ಕೆ ಹೈದರಾಬಾದ್ ಕರ್ನಾಟಕವು ಒತ್ತಿಕೊಂಡಿದೆ. ಚರಿತ್ರೆಯಲ್ಲಿ ಕನ್ನಡ ಪ್ರದೇಶವು ಗೋದಾವರಿ ನದಿಯವರೆಗೆ ಹಬ್ಬಿದೆ. ಭಾಷಾವಾರು ಪ್ರಾಂತ್ಯಗಳ ರಚನೆಯಿಂದಾಗಿ ಅನಿವಾರ್ಯವಾಗಿ ಗಡಿರೇಖೆಗಳು ಬಂದವು. ಆದರೆ ಈ ಗಡಿರೇಖೆಗಳು ರಾಜಕೀಯವಾದ ಮತ್ತು ತಾಂತ್ರಿಕವಾದ ಇಬ್ಭಾಗವಾಗಿ ನಿಂತವು. ಕನ್ನಡ ಪ್ರದೇಶಗಳು ಮತ್ತು ಭಾಷೆಯನ್ನಾಡುವ ಜನರು ಆಂಧ್ರಕ್ಕೆ, ಮಹಾರಾಷ್ಟ್ರಕ್ಕೆ ಸೇರಿಕೊಂಡರು. ಇದರಂತೆ ಮರಾಠವಾಡ, ಆಂಧ್ರಪ್ರದೇಶದ ಭಾಗವು ಮತ್ತು ಭಾಷಿಕರು ಕರ್ನಾಟಕದಲ್ಲಿ ಸೇರುವಂತಾಯಿತು. ಇದರಿಂದ ಸಾಂಸ್ಕೃತಿಕವಾಗಿ ಕೊಡುಕೊಳೆ ಮೊದಲಿನಿಂದಲೂ ನಡೆಯುತ್ತ ಬಂದಿದೆ. ಹೀಗಾಗಿ ಹೈದರಾಬಾದ್ ಕರ್ನಾಟಕ ಪ್ರದೇಶದ ಗಡಿಭಾಗದವರಿಗೆ ಕನ್ನಡದ ಜೊತೆಗೆ ತೆಲುಗು, ಮರಾಠಿ ಭಾಷೆಗಳು ಸಹಜವಾಗಿ ಗೊತ್ತಿದ್ದವು. ವ್ಯವಹಾರಿಕವಾಗಿ ಈ ಮೂರು ಭಾಷೆಗಳು ಚಾಲನೆಯಲ್ಲಿದ್ದವು. ೧೮ನೇ ಶತಮಾನದಿಂದ ನಿಜಾಮರ ಆಳ್ವಿಕೆ ಪ್ರಾರಂಭವಾದ ಮೇಲೆ ೧೯ನೇ ಶತಮಾನದ ಮಧ್ಯ ಭಾಗದಿಂದ ಉರ್ದುಭಾಷೆ ಆಡಳಿತದಲ್ಲಿ ಮತ್ತು ಶಿಕ್ಷಣದಲ್ಲಿ ಪ್ರಭುತ್ವದ ವ್ಯವಹಾರದಿಂದಲೂ ಕನ್ನಡ ಹಿನ್ನೆಲೆಗೆ ಸರಿಯುವಂತಾಯಿತು. ಸಂಪರ್ಕ ಸೌಲಭ್ಯಗಳು ಇಲ್ಲದ ಹಳ್ಳಿಗಳಲ್ಲಿ ಮತ್ತು ಮಠ ಮಾನ್ಯಗಳಲ್ಲಿ ಕನ್ನಡ ಜೀವ ಉಳಿಸಿಕೊಂಡಿತ್ತು. ಬಹುಭಾಷೆಗಳು ಈ ಪ್ರದೇಶದಲ್ಲಿ

ಚಲನೆಯಲ್ಲಿದ್ದರಿಂದ ಮತ್ತು ಉರ್ದು ಭಾಷೆಗೆ ರಾಜಕೀಯ ಬೆಂಬಲ ಮತ್ತು ಮಾನ್ಯತೆ ಇದ್ದುದರಿಂದ ಕನ್ನಡ ಭಾಷೆ ಸಹಜವಾಗಿ ಚೈತನ್ಯ ಕಳೆದುಕೊಂಡಿತು. ಬಹುಭಾಷೆಗಳು ಬೆರೆತು ಹೋದುದರಿಂದ ಕನ್ನಡ ಸಾಹಿತ್ಯ ಸೃಷ್ಟಿಗೆ ತೊಡಕಾಯಿತು. ಅದೂ ಲಿಖಿತ ಸಾಹಿತ್ಯಕ್ಕಂತೂ ತೊಂದರೆಯಾಯಿತು. ಆದರೆ ಮೌಖಿಕ ಪರಂಪರೆಯ ಜನಪದ ಸಾಹಿತ್ಯ ನಿರಂತರವಾಗಿ ಬೆಳೆಯುತ್ತಲೇ ಇತ್ತು.

೧೮–೧೯ನೇ ಶತಮಾನದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಲಿಖಿತ ಪರಂಪರೆಯ ಸಾಹಿತ್ಯ ಹೇಳಿಕೊಳ್ಳುವಷ್ಟು ಸೃಷ್ಟಿಯಾಗಲಿಲ್ಲ. ಅದರಿಂದಾಗಿಯೇ ಈ ಪ್ರದೇಶದಲ್ಲಿ ನೂರಾರು ಜನಪದ ಕವಿಗಳು ಅನೇಕ ಪ್ರಕಾರಗಳಲ್ಲಿ ಬರೆದಿದ್ದಾರೆ. ತತ್ವಪದ ಸಾಹಿತ್ಯವು ಸಮೃದ್ಧವಾಗಿ ಬೆಳೆದಿದೆ. ಮೊಹರಂ ಪದಗಳು, ಜನಪದ ಖಂಡಕಾವ್ಯಗಳು, ಕಥೆಗಳು, ದೊಡ್ಡಾಟ, ಸಣ್ಣಾಟ, ಕಾಲಜ್ಞಾನ ಇವೆಲ್ಲ ಮೌಖಿಕ ಪರಂಪರೆಯಲ್ಲೇ ಬೆಳೆದು ನಿಂತಿವೆ. 'ಆಧುನಿಕತೆ' ಭಾರತಕ್ಕೆ ಕಾಲಿಟ್ಟ ನಂತರವೂ, ಇಂಗ್ಲೀಶ್ ಭಾಷೆಯಿಂದ ಪಾಶ್ಚಾತ್ಯ ಜ್ಞಾನವು ಭಾರತಕ್ಕೆ ಬಂದು, ಹೊಸ ಬಗೆಯ ಸಾಹಿತ್ಯ ಮೂಡಲು ತೊಡಗಿ 'ಆಧುನಿಕ ಸಾಹಿತ್ಯ' ಬೆಳೆಯತೊಡಗಿದರೂ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಇನ್ನೂ ಮೌಖಿಕ ಸಾಹಿತ್ಯವೇ ಪ್ರಬಲವಾಗಿತ್ತು. ೧೯ನೇ ಶತಮಾನದ ಅಂತ್ಯದಲ್ಲಿ ಹುಟ್ಟಿ, ೨೦ನೇ ಶತಮಾನದ ಸ್ವಾತಂತ್ರ್ಯಾನಂತರವೂ ಬಾಳಿ ಬದುಕಿರುವವರು ಕೂಡ ಮೌಖಿಕ ಸಾಹಿತ್ಯ ರಚನೆಯಲ್ಲಿ ತೊಡಗಿದ್ದರು. ಇದಕ್ಕೆ ಹಲವು ಕಾರಣಗಳಿವೆ. ೧೯೪೮ರ ತನಕ ಉರ್ದು ರಾಜ್ಯ ಭಾಷೆಯಾಗಿತ್ತು. ಉರ್ದು ಕಲಿತರೆ ಮಾನ್ಯತೆ ಸಿಗುತ್ತಿದ್ದರಿಂದ, ಶಿಕ್ಷಣವೂ ಉರ್ದು ಭಾಷೆಯಲ್ಲಿದ್ದರಿಂದ ವಿದ್ಯೆ ಕಲಿಯಲು ಅವಕಾಶ ಇರುವವರೆಲ್ಲ ಉರ್ದು ಭಾಷೆಯಲ್ಲೇ ಕಲಿತರು. ೧೯೪೮ರ ನಂತರವೂ ಈ ಪೀಳಿಗೆ ಉರ್ದುವಿನಲ್ಲೇ ವ್ಯವಹಾರ ಮಾಡತೊಡಗಿದರು. ಕನ್ನಡ ಭಾಷಾಭಿಮಾನಿಗಳು ಸಾಹಿತ್ಯದಲ್ಲಿ ಆಸಕ್ತಿ ಹೊಂದಿ ಅದನ್ನು ಬೆಳೆಸುವುದಕ್ಕೆ ಸಮಯ ಬೇಕಾಯಿತು. ಇದರಿಂದ ಸಾಹಿತ್ಯದ ಬೆಳವಣಿಗೆ ಸಹಜವಾಗಿಯೇ ಕುಂಠಿತವಾಯಿತು. ಆದರೆ ಕನ್ನಡ ಭಾಷಾಭಿಮಾನಿಗಳೂ, ಸಾಹಿತ್ಯಾಭಿಮಾನಿಗಳೂ ಆದ ಜನಪದರು ಕಾಲಿಡುತ್ತಿದ್ದ ಆಧುನಿಕತೆಯನ್ನು ಕುತೂಹಲದಿಂದಲೂ, ಆತಂಕದಿಂದಲೂ ಗಮನಿಸುತ್ತಲೇ ತಮ್ಮ ತಲ್ಲಣಗಳನ್ನು ಹಾಡತೊಡಗಿದರು.

ಇದರಿಂದಲೇ ೨೦ನೇ ಶತಮಾನದ 'ಸಂವೇದನೆ'ಯೂ ಮೌಖಿಕ ಸಾಹಿತ್ಯದಲ್ಲಿ ಮೂಡಿ ಬಂದಿದೆ. ರಾಷ್ಟ್ರೀಯವಾದ, ನಿರುದ್ಯೋಗ ಸಮಸ್ಯೆ, ವರದಕ್ಷಿಣೆ ಪಿಡುಗು, ಭ್ರಷ್ಟಾಚಾರ, ಹೋಟೆಲ್, ವಕೀಲ, ಕೋರ್ಟ್ ಮುಂತಾದವು ತತ್ವಪದ ಸಾಹಿತ್ಯದಲ್ಲಿ ವ್ಯಕ್ತವಾಗಿವೆ. ಅಷ್ಟೇ ಏಕೆ ನವೋದಯ ಕಾವ್ಯದ ಅನೇಕ ಲಕ್ಷಣಗಳು ಕೂಡಲೂರು ಬಸವಲಿಂಗಪ್ಪನ ತತ್ವಪದಗಳಲ್ಲಿವೆ. ಬಂಡಾಯ ಕಾವ್ಯದ ಆಶಯಗಳು ಕಡಕೋಳ ಮಡಿವಾಳಪ್ಪನ ತತ್ವಪದಗಳಲ್ಲಿವೆ. ಆಧುನಿಕತೆ ಉಂಟುಮಾಡಿದ ಬಿಕ್ಕಟ್ಟುಗಳ ವಡಕಿ ತಾತಪ್ಪಯ್ಯನ ತತ್ವಪದಗಳಲ್ಲಿವೆ. ಆಧುನಿಕರಲ್ಲದ ಆದರೆ ಆಧುನಿಕ ಕಾಲಘಟ್ಟದಲ್ಲಿ ಬದುಕಿ ಬಾಳಿದ ವಡಕಿ ತಾತಪ್ಪಯ್ಯ, ನಿಡುವಂಚಿ ಭದ್ರೇಶ್ವರ, ಶಿಲ್ಲಪ್ಪ ಮುಂತಾದ ತತ್ವಪದಕಾರರ

ಸಾಹಿತ್ಯದಲ್ಲಿ ತಾಂತ್ರಿಕವಾದ ಆಧುನಿಕ ಸಂವೇದನೆಗಳಿವೆ. ಬ್ರಿಟೀಶರ ಆಳ್ವಿಕೆಯಿಂದಾಗಿ ಸಮಾಜದಲ್ಲಿ ಹೋಟೆಲ್, ಕೋರ್ಟ್, ವಕೀಲ ಮುಂತಾದ ಹೊಸ ವ್ಯವಸ್ಥೆಗಳು ಕಾಣಿಸತೊಡಗಿದವು. ಜೊತೆಗೆ ನಿಜಾಮ್ ಆಳ್ವಿಕೆಯಿಂದ ಮೊಘಲಾಯಿ ವ್ಯವಸ್ಥೆಯಲ್ಲಿ ಮುಲಜುಮ್, ಮುನಸುಫ್, ನಾಜುಮ್ ಇಂಥ ಅಧಿಕಾರ ಸ್ಥಾನಗಳೂ ಚಾಲ್ತಿಯಲ್ಲಿದ್ದವು. ಇವು ಸಾಂಪ್ರದಾಯಿಕ ಸಮಾಜದಲ್ಲಿ ಹುಟ್ಟು ಹಾಕುವ ಅನೇಕ ಸಮಸ್ಯೆಗಳನ್ನು, ಅವುಗಳಿಂದಾಗುವ ಪರಿಣಾಮಗಳನ್ನು ಗಮನಿಸುತ್ತಲೇ ತತ್ವಪದಕಾರರು ತಮ್ಮ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸಿದರು. ಇದನ್ನು ಇವರೆಲ್ಲ ತಮ್ಮ ಅನುಭಾವದ ನೆಲೆಯಲ್ಲಿ ಗ್ರಹಿಸಿರುವುದೇ ವಿಶೇಷವಾಗಿದೆ.

ಬ್ರಿಟೀಶರಿಂದ ಚಹಾ, ಕಾಫಿ ಭಾರತಕ್ಕೆ ಕಾಲಿಟ್ಟಿರಬೇಕು. ಪ್ರಾರಂಭದಲ್ಲಿ ಚಹಾ ಕಾಫಿ ನಗರಗಳಲ್ಲಿ 'ಪ್ರತಿಷ್ಠಿತ'ರಲ್ಲಿ ಬಳಕೆಗೆ ಬಂತು. ಅದೊಂದು ಫ್ಯಾಷನ್ ರೀತಿಯಲ್ಲಿಯೇ ಬಳಕೆಯಲ್ಲಿತ್ತು. ನಂತರ ಹಳ್ಳಿಹಳ್ಳಿಗಳಲ್ಲಿ ಹೋಟೆಲ್‌ಗಳ ಮೂಲಕ ಪ್ರವೇಶಿಸಿತು. ಮಡಿವಂತರು ಅದನ್ನು ಮೈಲಿಗೆ ಎಂಬಂತೆ ನೋಡುತ್ತಿದ್ದರು. ಕ್ರಮೇಣ ಅದೊಂದು ಹವ್ಯಾಸವಾಗಿ ಬೆಳೆದು ಕೊನೆಗೆ ಚಟವಾಗಿ ಪರಿಣಮಿಸಿತು, ಇದನ್ನೇ 'ಇಂದ್ರಿಯ ನಷ್ಟ' ಎಂದು ವಡಕಿ ತಾತಪ್ಪಯ್ಯ ಭಾವಿಸಿದ್ದಾನೆ. ಚಹಾ ತಯಾರಿಸುವುದನ್ನೂ ಕೂಡ ಒಂದು ತತ್ವಪದದಲ್ಲಿ ಹೇಳಿದ್ದಾನೆ. ನಾಸ್ಟ ಅಥವಾ ಟಿಫೀನ್ ಸಂಸ್ಕೃತಿ ಹಳ್ಳಿಗಳಲ್ಲಿಯೂ ಪ್ರಾರಂಭವಾದುದ್ದನ್ನು, ಉಪ್ಪಿಟ್ಟು, ದೋಸಿ, ಜೊತೆಗೆ ಚಹಾ ಕಾಫಿ ಸೇವನೆಯ ಬ್ರೇಕ್ ಫಾಸ್ಟ್ ಪದ್ಧತಿಯನ್ನು ವರ್ಣಿಸಿರುವ ಈ ತತ್ವಪದಕಾರ ಆಧುನಿಕ ಸಂಸ್ಕೃತಿಯ ಬೆಳವಣಿಗೆಯನ್ನು 'ಊರಾಳು ಹೇಸಿ' ಎಂದಿದ್ದಾನೆ.

'ಹೋಟೆಲ್‌ಯೆಂದು ಓಡ್ಯಾಡಿ ಹೊಕ್ಕೀ
ಗಳಿಸಿದ ರೊಕ್ಕ ಅದರೊಳಗಿಕ್ಕೀ
ಹೆಂಡರು ಮಕ್ಕಳು ಮಣ್ಣು ಮುಕ್ಕೇ
ಹೊಲಮನೆ ಕಳಕೊಂಡಾಡಿಯೋ ಪಿಕ್ಕೇ'[೪೦]

ಇಲ್ಲಿ 'ಹೋಟಲ್' ಎನ್ನುವುದು ಆಧುನಿಕತೆಯ ಸಂಕೇತವಾಗಿದೆ. ಹಳ್ಳಿಗಳನ್ನು ಹೋಟಲ್‌ಗಳು ಪ್ರವೇಶಿಸುವುದು ಎಂದರೆ ಆಧುನಿಕತೆ ಪ್ರವೇಶಿಸಿದಂತೆ. ಇದರಿಂದ ಉಂಟಾದ ಬಿಕ್ಕಟ್ಟುಗಳು ಹಳ್ಳಿಗಳನ್ನು ಕಲಕಿದವು. ಅಲ್ಲಿ ಅನೇಕ ಸಂಘರ್ಷಗಳು ಏರ್ಪಟ್ಟವು. ಈ ಬೆಳವಣಿಗೆ ಸಂಪ್ರದಾಯದ ಮನಸ್ಸುಗಳಿಗೆ ವ್ಯಸನವನ್ನು ತಂದಿತು. ಮೇಲ್‌ವರ್ಗದವರು, ಕೆಳವರ್ಗದವರು ಕೂಡಿ ಹೋಟಲ್‌ಗಳಲ್ಲಿ ತಿನ್ನುವುದು, ಕುಡಿಯುವುದು ಎಂದರೆ ಸ್ಥಾನಮಾನದ ಪ್ರಶ್ನೆಗಳು ಎದುರಾಗಿ ತೀವ್ರ ಸಂಘರ್ಷಕ್ಕೆ ಕಾರಣವಾಯಿತು. ಇದೊಂದು ವಿಚಿತ್ರ ಸಂಕ್ರಮಣ ಸ್ಥಿತಿ. ಮೇಲು ಕೀಳುಗಳು ಮಸುಕಾಗಿರುವ ಕ್ರಾಂತಿಯನ್ನು ಹೋಟಲ್ ನಿರ್ಮಿಸಿತು ಎನ್ನುವುದು ನಿಜ. ಆದರೆ ದುಡಿದು ತಿನ್ನುವ ಜನ ಸಾಮಾನ್ಯರು ಹೋಟಲ್ ತಿನಿಸುಗಳ ವ್ಯಾಮೋಹಿಗಳಾಗಿ ದುಡಿದದ್ದನ್ನು ಈ ಹೋಟೆಲ್ ತಿನಿಸುಗಳಿಗೆ ಇಟ್ಟು ಸಂಸಾರಕ್ಕೆ ಕುತ್ತು ತಂದಿತು. ಹೆಂಡತಿ ಮಕ್ಕಳಿಗೆ ಅನ್ನವಿಲ್ಲದಂತೆ ಮಾಡಿರುವುದು ಮತ್ತು ಈ ಹೋಟಲ್ ಚಟದಿಂದಾಗಿ ಇದ್ದ ಅಲ್ಪಸ್ವಲ್ಪ ಭೂಮಿಯನ್ನು ಕಳೆದುಕೊಂಡಿರುವವರ ಗತಿಯನ್ನು ನೋಡಿದ ಈ ತತ್ವಪದಕಾರನಿಗೆ 'ಹೋಟಲ್' ವಿನಾಶದಂತೆ ಕಂಡಿದೆ.

ತಿಂಡಿ, ಚಹಾ, ಕಾಫಿ, ಸಿಗರೇಟ್ ಮುಂತಾದ ಚಟಗಳಿಂದ ದೈಹಿಕ, ಮಾನಸಿಕ ಆರೋಗ್ಯ ಹಾಳಾಗುತ್ತವೆ, ಇಂದ್ರಿಯಗಳು ನಾಶವಾಗುತ್ತವೆ ಎಂದ ಈ ಅನುಭಾವಿ ಇವೆಲ್ಲವುಗಳ ಬದಲಾಗಿ 'ವಚನಾಮೃತ ಮಾಡೋ ಪಾನ' ಎಂದಿದ್ದಾನೆ. ತತ್ವಪದಕಾರನ ಸಾಮಾಜಿಕ ಕಾಳಜಿಯನ್ನು, ಮನುಷ್ಯನ ಕಲ್ಯಾಣವನ್ನು ಇದು ತೋರಿಸುತ್ತದೆ. ಒಂದು ಆಧುನಿಕ ಮನಸ್ಸು, ಇನ್ನೊಂದು ಅನುಭಾವಿ ಮನಸ್ಸು ಈ ಎರಡು ಮನಸ್ಸುಗಳು ಸಾಮಾಜಿಕ ಗ್ರಹಿಕೆಯನ್ನೇ ತತ್ವಪದಕಾರರು ಚಿತ್ರಿಸಿದ್ದಾರೆ. ನ್ಯಾಯವನ್ನು ದೊರಕಿಸಿಕೊಡುವ 'ವಕೀಲ'ನ ಮೇಲೆ ವಡಕಿ ತಾತಪ್ಪಯ್ಯ ರಚಿಸಿರುವ ಪದ ಗಮನಾರ್ಹವಾಗಿದೆ.

'ವಕೀಲ ಬಂದನೆ ನೋಡು
ಪರಬ್ರಹ್ಮ ವಕೀಲ ಬಂದನೆ ನೋಡು
ಅಖಿಲ ಬ್ರಹ್ಮಾಂಡ ಕಾಯ್ದುವ ಶೀವ ಮಾಹಿತಿ ತಿಳಿದವ
ಧೀರನಾದ ವಕೀಲ ಬಂದನೆ ನೋಡು
ಕಾಮ ಕ್ರೋಧ ಲೋಭ ಮೋಹ
ಮದ ಮತ್ಸರಗಳ ಖಟ್ಲೆ ಬಗೇರಿಸುವ'[೪೧] (ವಡಕಿ ತಾತಪ್ಪಯ್ಯ) ನ್ಯಾಯ ವದಗಿಸಿಕೊಡುವ 'ವಕೀಲ' ಈ ಅನುಭಾವಿಯ ದೃಷ್ಟಿಯಲ್ಲಿ ದೇವರಾಗಿದ್ದಾನೆ. ಅನುಭಾವಿಯ ಈ ಗ್ರಹಿಕೆಯು ಸಹಜವಾದುದಾಗಿದೆ. ಲೌಕಿಕದ ನೆಲೆಯಿಂದಲೇ ನೋಡಿ ಅನುಭಾವದ ನೆಲೆಯಲ್ಲಿ ಅರ್ಥೈಸಿರುವುದು ಇಲ್ಲಿ ಕುತೂಹಲವಾಗಿ ಕಂಡಿದೆ. ಕವಿ ಮನುಷ್ಯನನ್ನು ಭವದ ದುಃಖದಿಂದ ಬಿಡುಗಡೆ ಮಾಡುವ ವಕೀಲನಾಗಿ ತನ್ನ ಇಷ್ಟದೈವ 'ಭೀಮೇಶ'ನನ್ನು ಕಂಡಿದ್ದಾನೆ. ಲೋಕವನ್ನು ಅನುಭಾವಿ ಇದೇ ನೆಲೆಯಲ್ಲಿ ಗ್ರಹಿಸಿದ್ದಾನೆ.

'ಜಮಾ ಮಾಡಿ ಇಕ್ಕೇರಿ ರೊಕ್ಕಾ
ನಾಳೆ ಸರಕಾರದವರು ಹೇಳುತ್ತಾರೋ ಲೆಕ್ಕ'[೪೨]

ನಿಡುವಂಚಿ ಭದ್ರೇಶ್ವರ ದೇವರನ್ನು ಸರಕಾರಕ್ಕೆ ಹೋಲಿಸಿದ್ದಾನೆ. ಭವದಲ್ಲಿ ಹುಟ್ಟಿದ ಮನುಷ್ಯ ತನ್ನ ಜೀವಿತ ಕಾಲದಲ್ಲಿ ಮಾಡಿದ ಪಾಪ ಪುಣ್ಯಗಳ ಲೆಕ್ಕಾಚಾರವನ್ನು ಮಾಡಿಟ್ಟುಕೊಂಡಿರ ಬೇಕು. ಮಾಡಿದ ಪಾಪ ಪುಣ್ಯಗಳ ಲೆಕ್ಕಾಚಾರ ನಡೆದು ಪುಣ್ಯ ಹೆಚ್ಚಾಗಿತ್ತೆಂದರೆ ಅದೇ ಧನಸಂಪತ್ತು, ಅದು ಅಳಿಯಲಾರದ ಸಂಪತ್ತು. ಇಂಥ ಸಂಪತ್ತಿನ ಗಳಿಕೆಯನ್ನು ಸರಕಾರ (ದೇವರು) ಬಂದು ನೋಡಿ ಮೆಚ್ಚುತ್ತದೆ. ನಿಜಮುಕ್ತಿಯ ಪದವಿಯನ್ನು ನೀಡುತ್ತದೆ ಎಂದು ಈ ಅನುಭಾವಿ ವ್ಯಕ್ತಪಡಿಸಿದ್ದಾನೆ. ಬೀದರ್ ಜಿಲ್ಲೆಯ ಅನುಭಾವಿ ಶಿಲ್ಲಪ್ಪ 'ಭವದ ಬಾಜಾರ' ಎಂಬ ತತ್ವಪದದಲ್ಲಿ ಆಧುನಿಕ ಲೋಕದ ಮೋಹವನ್ನು ಕುರಿತು ಹಾಡಿದ್ದಾನೆ.

'ಬಟ್ಟಿ ತೊಟ್ಟಿನಿ ಚೆಸ್ಟರ್ ಮಲ್ ಮಲ್
ಕೋಟ ಖಮೀಸ ಮೈ ಒಳಗ
ಸೂಟ್ ಬೂಟ್ ಪಟ್ಲೋನ ನೆಕ್ಟಾಯ್

ಬೆಲ್ಟ ಕಟ್ಟಿದೇನ ಟೊಂಕಿನಾಗ
ಉಟ್ಟುಟ್ಟು ಬ್ಯಾಸರ ಆದೇನಲ್ಲ
ಮನಸಿನ ಆಪೇಕ್ಷೆ ತೀರೇ ಇಲ್ಲ
ಹಚ್ಚಿದ ನಾನು ಹೀನಾ ಚಮೇಲಿ
ಗುಲಾಬದೆಣ್ಣಿ ಕೂದಲಿಗ
ಕನ್ನಡಿ ನೋಡಿ ಬೇತಲ ತೀಡಿ
ಬರ ಬರಸಿ ತೊಳದು ಬ್ಯಾಸರ ಆದೇನಲ್ಲ
ಒಳಗಿನ ವಾಸನೆ ಹೋಗಲೇ ಇಲ್ಲ
ಸಾಲಿ ಬರಿದ ನಾ ಕಾಲೇಜದೊಳಗ
ಮೇಲಾಗಿ ಮ್ಯಾಟ್ರಿಕ್ ಬಿ.ಎ.ದೊಳಗ
ಕನ್ನಡ ಮರಾಠಿ ಹಿಂದಿ ಅರಬ್ಬಿ
ಇಂಗ್ಲಿಷ್ ಮಾರ್ವಾಡಿ ತೆಲಗ
ಕಲಕಲ್ತು ಬ್ಯಾಸರಾದೇನಲ್ಲ
ಕಾಲೇಜ ವಿದ್ಯಾವು ಮುಗಿಯಲಿಲ್ಲ'[೬೩]

'ಭವದ ಬಾಜಾರ'ದಲ್ಲಿ 'ಬಿರ್ಯಾನಿ' ಉಂಡರೂ, ಬಗೆ ಬಗೆಯ ಡ್ರೆಸ್ ಹಾಕಿಕೊಂಡರೂ, ಹಲವು ಭಾಷೆಯಲ್ಲಿ ಕಲಿತರೂ ಮನಸ್ಸಿಗೆ ತೃಪ್ತಿ ಇಲ್ಲ. ಅನೇಕ ಸುಗಂಧ ದ್ರವ್ಯಗಳನ್ನು ಹಚ್ಚಿಕೊಂಡರೂ ಒಳಗಿನ ವಾಸನೆ ಮಾತ್ರ ಹೋಗಲಿಲ್ಲ. 'ಮುಲಜುಮ್, ಮುನಸುಫ್, ನಾಜುಮ್ ಎಂಬ ದೊಡ್ಡ ಅಧಿಕಾರ ಸ್ಥಾನವನ್ನು ಪಡೆದರೂ ದಾಹ ಮುಗಿಯಲಿಲ್ಲ. ಮುಂಬೈನಲ್ಲಿ ಬಿಲ್ಡಿಂಗ್ ಕಟ್ಟಿಸಿದರೂ, ಸ್ತ್ರೀಸಂಗ ಮಾಡಿದರೂ ಮನಸಿನ ಆಸೆ ತೀರಲಿಲ್ಲ. ಕೊನೆಗೆ ತೀರ್ಥಯಾತ್ರೆ ಮಾಡಿದರೂ ಶಿವನು ಸಿಕ್ಕೇ ಇಲ್ಲ ಎಂದಿದ್ದಾನೆ. ಭೋಗಸುಖ ಭವಲೋಕದಿಂದ ಪಡೆದು ಅನುಭವಿಸಿದರೂ ತೃಪ್ತಿಯಾಗಲಿಲ್ಲ ಎನ್ನುವ ಈ ಅನುಭಾವಿ ಲೌಕಿಕ ಸುಖ ನಿಜವಾದ ಸುಖವಲ್ಲ, ನಿಜ ಸುಖ ಬೇರೆಯಿದೆ. ಲೌಕಿಕದ ಭೋಗ ಭೋಗವಲ್ಲ, ಪಾರಮಾರ್ಥದ ಸುಖವೇ ಮೇಲು ಎಂಬ ಆಶಯವನ್ನು ತತ್ವಪದಕಾರ ಇಲ್ಲಿ ವ್ಯಕ್ತಪಡಿಸಿದ್ದಾನೆ. ಅಭಿವ್ಯಕ್ತಿಯ ಕ್ರಮದಲ್ಲಿ ಪ್ರಾದೇಶಿಕತೆಯಿದೆ. ತಾಂತ್ರಿಕವಾದ ಆಧುನಿಕ ಸಂವೇದನೆ ಈ ತತ್ವಪದದಲ್ಲಿದೆ. ಮನುಷ್ಯನ ಅಪೇಕ್ಷೆಗಳು, ದಾಹ ಅನೇಕ ಬಗೆಯದು ಎಂಬುದು ಇಲ್ಲಿ ವ್ಯಕ್ತವಾಗುತ್ತದೆ. ಇಂಥ ದಾಹದಿಂದಲೇ ಆಧುನಿಕ ಮನುಷ್ಯನಲ್ಲಿ ಅನೈತಿಕತೆ, ಭ್ರಷ್ಟಾಚಾರ, ಅಧಿಕಾರದ ಮೋಹಗಳು ಹೆಚ್ಚಾಗಿ ದೇಶ ಅಧೋಗತಿಯ ಹಾದಿ ಹಿಡಿದುರುವುದು ಎಂಬ ಸೂಕ್ಷ್ಮ ಭಾವ ಇದರಲ್ಲಿದೆ.

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ದುಡಿಯುವ ಕೆಳವರ್ಗದ ಮಹಿಳೆಯರ ಸ್ಥಿತಿಯನ್ನೂ ಶಿಲ್ಲಪ್ಪ ಎಂಬ ತತ್ವಪದಕಾರ ಸರಿಯಾಗಿ ಗ್ರಹಿಸಿದಂತೆ ಕಾಣುತ್ತದೆ ಈ ಪ್ರದೇಶದಲ್ಲಿ ದುಡಿಯುವ ವರ್ಗಗಳಲ್ಲಿ ಪುರುಷನಿಗಿಂತ ಮಹಿಳೆಯೇ ಶಕ್ತಳು. ಮನೆಯಲ್ಲಿ ದುಡಿಯಬೇಕು. ಮನೆಯ

ಹೊರಗೆ ದುಡಿಯಬೇಕು. ಸಂಸಾರವನ್ನು ನಡೆಸುವವಳೇ ಹೆಣ್ಣು. ಪುರುಷನಿಗಿಂತ ಹೆಚ್ಚು ದುಡಿದು ಸಂಪಾದಿಸಿದರೂ ಅವಳು ಪರಾವಲಂಬಿಯಾಗೇ ಇದ್ದಾಳೆ. ಕೆಳವರ್ಗದಲ್ಲಿ ಮಹಿಳೆ ಮೇಲ್ವರ್ಗದವರ ದಬ್ಬಾಳಿಕೆಗೆ ಒಳಗಾದರೂ ಬದುಕುವ ಛಲ ಹೊಂದಿದವಳು. ಬುದುಕು ಕೆಡಿಸುವ ಶಕ್ತಿಗಳ ಮುಂದೆಯೇ ಬದುಕನ್ನು ಕಟ್ಟಿಕೊಂಡು ನಿಲ್ಲುವ ಎದೆಗಾರಿಕೆ ಈ ಪ್ರದೇಶದ ಮಹಿಳೆಯರಿಗಿದೆ. ಬದುಕಿಗಿಂತ ಶೀಲ ದೊಡ್ಡದಲ್ಲ ಎಂದು ನಂಬಿ ನಿಂತವರು. ಇಂಥ ಮಹಿಳೆಯ ಚಿತ್ರಣವನ್ನು, ಈ ಭಾಗದ ಆಧುನಿಕ ಕತೆಗಾರರು ಚಿತ್ರಿಸಿದ್ದಾರೆ. ಶಾಂತರಸ, ರಾಜಶೇಖರ ನೀರಮಾನ್ವಿ, ಜಯತೀರ್ಥ ರಾಜಪುರೋಹಿತ, ಗೀತಾ ನಾಗಭೂಷಣ ಮುಂತಾದ ಲೇಖಕರ ಕಥೆಗಳಲ್ಲಿಯೂ ಮಹಿಳೆಯರ ಬವಣೆಗಳನ್ನು ಚಿತ್ರಿಸಿದ್ದಾರೆ. ಈಚೆಗೆ ಬರೆಯುವ ಕಥೆಗಾರರಲ್ಲಿ ಈ ಪ್ರದೇಶದ ದುಡಿಯುವ ಮಹಿಳೆಯ ಕಥೆಯನ್ನು ಮುಂದುವರೆಸಿದ್ದಾರೆ. 'ಗಂಡುಜಾತಿ' ಎನ್ನುವ ತತ್ವಪದದಲ್ಲಿ ಮಹಿಳೆಯ ಅಸಹಾಯಕತೆನ್ನು ಚಿತ್ರಿಸಿರುವುದು ಕಾಣುತ್ತದೆ. ಅದು ಇಂತಿದೆ.

'ಎಷ್ಟು ತಂದು ಹಾಕಲೆವ್ವಾ ಕೂಲಿ ಮಾಡಿ
ಕಷ್ಟ ಏನು ಮಾಡೆವಲ್ಲ ಮುಗ್ಗಲಗೇಡಿ
ಇಷ್ಟೇ ಇದ್ದರೆ ಇರಲಿಯೆಂದು ಮನಕ ಜೋಡಿ
ಉಂಡು ಸುಮನೆ ಕೊಡವಲ್ಲ ಕುಲಗೇಡಿ'[೪೪] (ಶಿಲ್ಲಪ್ಪ) ಹೆಂಡತಿಯೇ ದುಡಿದು ತಂದು ಹಾಕಬೇಕು. ತಂದು ಹಾಕಲು ಹೆಂಡತಿ ಸಿದ್ಧಳಿದ್ದಾಳೆ. ಆದರೆ ಈ ಗಂಡ ತಿಂದು ಸುಮ್ಮನಿರುವುದಿಲ್ಲ. ಅನೇಕ ಕಾರಣಗಳಿಗೆ ಕಿರುಕುಳ ಕೊಡುತ್ತಿರುತ್ತಾನೆ. ಇಷ್ಟಿದ್ದರೂ ಈ ಹೆಣ್ಣಿಗೆ ಬೇಕು 'ಮನಕೆ ಜೋಡಿ'ಯಾಗಿ ಇದೇ ಗಂಡು. ಯಾಕೆಂದರೆ ಹೆಣ್ಣಿಗೆ ಜೊತೆಯಾಗಿ 'ಗಂಡ' ಎಂಬುವವನು ಅನಿವಾರ್ಯವಾಗಿ ಬೇಕು. ಇದು ಮಹಿಳೆಯ ಒದಗಿದ ಸ್ಥಿತಿಯಾಗಿದೆ. ಲೋಕಗ್ರಹಿಕೆಯನ್ನು ಶಿಲ್ಲಪ್ಪ ಸರಿಯಾಗಿ ಗ್ರಹಿಸಿದ್ದಾನೆ. ಇಂಥ ಸ್ಥಿತಿಯ ಚಿತ್ರಣವು ಆಧುನಿಕ ಕತೆ ಕಾದಂಬರಿಗಳಲ್ಲಿ ಮುಂದುವರೆದಿದೆ. 'ಬಂಡಿ ಹೊಡೆಯುವವರೆಲ್ಲ ಹುಂಡ್ಯಾ ಬೇಡುವವರಲ್ಲ' ಎಂದು ವರದಕ್ಷಿಣೆಯ ಪಿಡುಗಿನ ಬಗ್ಗೆ ಶಿಲ್ಲಪ್ಪ ಹಾಡಿದ್ದಾನೆ. 'ಮನಿಯ ಹೊಲವ ಮರಾಟ ಮಾಡಿ ಮಗಳಿಗೆ ಕೊಟ್ಟು ಮದವಿಯ ಮಾಡಿ ಇನ್ನೇನು ಉಳಿಯಲಿಲ್ಲ ಭಿಕ್ಷಾ ಬೇಡೋದೆ ಬಂತು' ಎಂದು ಹೆಣ್ಣು ಹೆತ್ತವರ ಬಗ್ಗೆ ವ್ಯಥೆಪಟ್ಟಿದ್ದಾನೆ. 'ಕೊಡುವುದು ತೊಕೊಳ್ಳದು ಖಂಡಿತ ಬಿಡರಿ ವರವಿದ್ದರೆ ಕುಲ ಎಣಿಸಬ್ಯಾಡರಿ' ಎಂದು ಸೂಚಿಸಿದ್ದಾನೆ. ಜನಸಂಖ್ಯೆ, ನಿರುದ್ಯೋಗ, ನಿರುದ್ಯೋಗದಿಂದ ಉಂಟಾಗುವ ಸಾಮಾಜಿಕ ಸಮಸ್ಯೆಗಳು, ಕುಟುಂಬ ಯೋಜನೆ, ಪಟ್ಟಣದ ಮೋಹ ಮುಂತಾದ ಆಧುನಿಕ ಕಾಲದ ಅನೇಕ ಸಮಸ್ಯೆಗಳು ಈ ಅನುಭಾವಿಯನ್ನು ಕಾಡಿವೆ.

ಸ್ವಾತಂತ್ರ್ಯಕ್ಕಾಗಿ ನಡೆದ ಚಳವಳಿಯ ಕಾಲದಲ್ಲಿ ಭಾರತವನ್ನು ಬ್ರಿಟೀಶರ ಆಳ್ವಿಕೆಯಿಂದ ಬಿಡುಗಡೆಗೊಳಿಸುವ ಉದ್ದೇಶವೇ ಪ್ರಧಾನವಾಗಿತ್ತು. 'ಭಾರತೀಯತೆ', 'ರಾಷ್ಟ್ರೀಯತೆಗಳ ಪ್ರಜ್ಞೆ'ಯನ್ನು ಜನರಲ್ಲಿ ಮೂಡಿಸಲಾಯಿತು. ಇದು ಶಿಲ್ಲಪ್ಪ ಎಂಬ ತತ್ವಪದಕಾರನ ಮೇಲೆ ಪ್ರಭಾವ ಬೀರಿದೆ.

ಭಾರತವನ್ನು ಬ್ರಿಟೀಶರ ವಶದಿಂದ ಬಿಡಿಸುವ ಶಕ್ತಿಯನ್ನು 'ಕಾಂಗ್ರೆಸ್' ಹೊಂದಿದೆ. ಅದಕ್ಕೆ ಗಾಂಧಿ, ನೆಹರೂ ಅಂಥವರಿಂದ ಬಲಬಂದಿದೆ. ಅದಕ್ಕಾಗಿಯೆ 'ಖಾದಿ' 'ಚರಕ' ಮುಂತಾದವು ಮೌಲ್ಯಗಳಾಗಿ ನಿಂತಿವೆ. ಇಂತ ಅನೇಕ ವಿಷಯಗಳು ಶಿಲ್ಲಪ್ಪನನ್ನು ಚಿಂತನೆಗೆ ಗುರಿಮಾಡಿವೆ. ಅಷ್ಟೇ ಅಲ್ಲ ಕಾಂಗ್ರೆಸ್ ಹಳ್ಳಿ ಹಳ್ಳಿಗೆ ರಸ್ತೆ, ಶಾಲೆ, ಗಿರಣಿ, ವಾಹನಗಳನ್ನು ತಂದಿದೆ. ನಮ್ಮತನದ ಸಂಕೇತವಾಗಿ ಖಾದಿ ಪರಿಣಮಿಸಿದ್ದರಿಂದ ಶಿಲ್ಲಪ್ಪ 'ಖಾದಿ ಬಂಡಾರಕ ಹೋಗಾನು ಬರ್ರೆ' ಎಂದು ಊರುಕೇರಿಯ ಜನರನ್ನು ಖಾದಿ ಬಂಡಾರಕ್ಕೆ ಕರೆಯುತ್ತಾನೆ. ಪರದೇಶಿ ಉಡುಪು ತೊರೆದು ನಮ್ಮ ಖಾದಿ ಉಡಲು ಸೂಚಿಸುತ್ತಾನೆ. 'ಪಂದ್ರ ಆಗಸ್ಟ್' ಎನ್ನುವ ಪದವನ್ನು ಬರೆದಿದ್ದಾನೆ. ಶಿಲ್ಲಪ್ಪನ ನೆಲೆ ನಿಜಾಂ ಆಳ್ವಿಕೆಗೆ ಸೇರಿದ್ದರೂ, ಈ ಕವಿತೆಯನ್ನು ಬರೆದಿರುವುದು ವಿಚಿತ್ರವೆನಿಸುತ್ತದೆ.

ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿತು ನಿಜ. ಶಿಲ್ಲಪ್ಪ ಬದುಕುವ ನೆಲಕ್ಕೆ ಸ್ವಾತಂತ್ರ್ಯ ಬಂದಿರಲಿಲ್ಲ. 'ಪಂದ್ರ ಆಗಸ್ಟ್' ದಿನ ಧ್ವಜ ಹಾರಿಸಿದರೆ ನಿಜಾಮನ ಶಿಕ್ಷೆ ಅವರಿಗೆ ಕಾದಿತ್ತು. ನಿಜಾಮರ ರಜಾಕಾರರ ಕ್ರೂರ ದೃಷ್ಟಿ ಎಲ್ಲರ ಮೇಲಿತ್ತು. ಇಂಥ ತಲ್ಲಣಗಳನ್ನು ಗ್ರಹಿಸದೆ ಶಿಲ್ಲಪ್ಪ ಭಾರತದ ಸ್ವತಂತ್ರ್ಯೋತ್ಸವದ ಬಗ್ಗೆ ಬರೆದಿರುವುದು ವೈರುಧ್ಯವೇ ಸರಿ. 'ರಾಷ್ಟ್ರೀಯ ಪ್ರಜ್ಞೆ' ಅಥವಾ ರಾಷ್ಟ್ರೀಯವಾದ ಕಲ್ಪನೆಯು ಸ್ಥಳೀಯ ಬಿಕ್ಕಟ್ಟುಗಳನ್ನು, ಆತಂಕಗಳನ್ನು ಮರೆಯುವಂತೆ ಮಾಡಿತು. 'ಕರ್ನಾಟಕದ ಮೂರನೆಯ ಜಗತ್ತು' ಎಂದೇ ಕರೆಸಿಕೊಳ್ಳುವ ಹೈದರಾಬಾದ್ ಕರ್ನಾಟಕ ಪ್ರದೇಶದ ಅದರಲ್ಲೂ ಬೀದರ್ ಜಿಲ್ಲೆಯ ಒಂದು ಹಳ್ಳಿಯಲ್ಲಿ ಜೀವಿಸಿದ ಅನುಭಾವಿ ಶಿಲ್ಲಪ್ಪ, ಸ್ಥಳೀಯ ಸಮಸ್ಯೆಗಳನ್ನು ಬದಿಗಿರಿಸಿ ರಾಷ್ಟ್ರರಾಜಕಾರಣದ ವಿದ್ಯಮಾನಗಳಿಗೆ ಸ್ಪಂದಿಸಿರುವುದು ವಿಶೇಷವೇ ಆಗಿದೆ. ಯಾಕೆಂದರೆ ಪಕ್ಕದಲ್ಲೇ ಇರಲಿ ದೂರದಲ್ಲೇ ಇರಲಿ ಸಾಮಾಜಿಕ, ರಾಜಕೀಯ, ಆರ್ಥಿಕ ಬಿಕ್ಕಟ್ಟುಗಳ ಜತೆ ಮುಖಾಮುಖಿಯಾಗಿದ್ದಾನೆ ಎಂಬುದೇ ಮುಖ್ಯವಾಗುತ್ತದೆ.

ಆದರೆ ತಮ್ಮ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ವಿಷಯಗಳಿಗೆ ಮುಖಾಮುಖಿಯಾಗದ ಅನೇಕ ತತ್ವಪದಕಾರರಿದ್ದಾರೆ. ವೆಂಕಟಾಪುರ ಖೇಮಣ್ಣ, ಆದಿ ಅಮಾತ್ಯಪ್ಪ, ಗಬ್ಬೂರು ಹಂಪಣ್ಣ, ಘನಮಠದಪ್ಪ, ಹೇರೂರು ವಿರೂಪನಗೌಡ, ನೀರಲಕೇರಿ ಬಸವಲಿಂಗ ಶರಣ ಮುಂತಾದವರು ಸಾಮಾಜಿಕ, ರಾಜಕೀಯ, ಧಾರ್ಮಿಕ ವಿದ್ಯಮಾನಗಳ ಬಗ್ಗೆ ಪ್ರತಿಕ್ರಿಯೆ ವ್ಯಕ್ತಪಡಿಸಿಲ್ಲ. ಈ ಪ್ರಶ್ನೆ ಏಳಲು ಕಾರಣವೆಂದರೆ ಇವರ ಸಮಕಾಲೀನರಾದ ಕಡಕೋಳ ಮಡಿವಾಳಪ್ಪ, ಮೋಟ್ನಹಳ್ಳಿ ಹಸನಸಾಹೇಬ, ಚೆನ್ನೂರ ಜಲಾಲಸಾಹೇಬ, ರಾಮಪುರ ಬಕ್ಕಪ್ಪಯ್ಯ ಮುಂತಾದವರು ಸಮಾಜದ ಅನೇಕ ಸಂಗತಿಗಳಿಗೆ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದಾರೆ. ಇದು ಹೇಗೆ ಸಾಧ್ಯವಾಯಿತು? ಖೇಮಣ್ಣ, ಅಮಾತ್ಯಪ್ಪ, ಹಂಪಣ್ಣ, ಘನಮಠದಪ್ಪ, ವಿರುಪನಗೌಡ, ಬಸಲಿಂಗ ಶರಣ, ಚಿದಾನಂದ ಅವಧೂತ ಮುಂತಾದವರ ತತ್ವಪದಗಳಲ್ಲಿ ಗುರುಸ್ಮರಣೆ, ಸತಿಪತಿಭಾವ, ಬೆಡಗು, ಲೋಕನೀತಿ ಅಲ್ಪಸ್ವಲ್ಪ ವಿಡಂಬನೆ ಬಿಟ್ಟರೆ ಸಮಕಾಲೀನ ಸಂಘರ್ಷಗಳ, ಸಾಂಸ್ಕೃತಿ ತಲ್ಲಣಗಳ ಪ್ರತಿಸ್ಪಂದನೆ ಇಲ್ಲ. ಇದಕ್ಕೆ ಕಾರಣ ಅಧ್ಯಾತ್ಮ, ಅನುಭಾವ ಬಿಟ್ಟು ಉಳಿದುದನ್ನು

ಉಪೇಕ್ಷಿಸಿದ್ದಾರೆಯೇ? ಅಥವಾ ಅವರವರ ಪರಿಸರ, ವ್ಯಕ್ತಿತ್ವವು ಕಾರಣವಾಗಿರಬಹುದೇ? ಯಾಕೆಂದರೆ ಸಂಗ್ರಹಕಾರರು ಇವರ ತತ್ವಪದಗಳ ಕೃತಿಗಳಿಗೆ ಕರೆದಿರುವ ಹೆಸರುಗಳನ್ನು ಗಮನಿಸಿದರೆ, ಕೇವಲ ಧಾರ್ಮಿಕ ಭಾವನೆಯಿಂದ ಸಂಗ್ರಹಿಸಿರುವುದು ಸ್ಪಷ್ಟವಾಗುತ್ತದೆ. ಜ್ಞಾನಗೀತೆ (ನೀರಲಕೇರಿ ಬಸವಲಿಂಗ ಶರಣ), 'ಕೈವಲ್ಯ ತತ್ವಪದಗಳು' (ಹೇರೂರು ವಿರುಪನಗೌಡ), 'ಕೈವಲ್ಯ ನವನೀತ' (ಆದಿ ಅಮಾತ್ಯಪ್ಪ), 'ಭಕ್ತಿ ಸುಧಾಸಾರ' (ಘನಮಠೇಶ್ವರ), 'ಕೈವಲ್ಯ ಕಲ್ಪಧೃವ (ರಸ್ತಾಪುರ ಭೀಮಕವಿ) 'ತತ್ವಾನುಬೋಧೆ' (ಗುರುವರೇಣ್ಯ) 'ಶರಣ ಸದ್ಬೋಧಾಮೃತ' (ಸಿದ್ಧರಾಮ ಶಿವಯೋಗಿ) ಮುಂತಾದ ಹೆಸರುಗಳಿಂದ ಇವರ ರಚನೆಗಳನ್ನು ಪ್ರಕಟಿಸಲಾಗಿದೆ. ಕೆಲವರ ಕೃತಿಗಳಿಗೆ ಅವರ ಹೆಸರಿನ ಅನುಭಾವ ಪದಗಳು, ಭಜನೆ ಹಾಡುಗಳು ಮತ್ತು ಮುಕ್ತಿ ಮಂಜರಿ ಇತ್ಯಾದಿಯಾಗಿಯೂ ಕರೆಯಲಾಗಿದೆ. ತತ್ವಪದಗಳು ಈಚೆಗೆ ವಿದ್ವಾಂಸರ ಆಸಕ್ತಿಗೆ ಕಾರಣವಾಗಿ ಸ್ವರವಚನಗಳು ಎಂದು ಸಂಗ್ರಹವಾಗುತ್ತಿವೆ. ಇವನ್ನು ಮುಖ್ಯವಾಗಿ 'ಅನುಭಾವ ಸಾಹಿತ್ಯ', 'ಕೈವಲ್ಯ ಸಾಹಿತ್ಯ' ಎಂದೇ ಗುರುತಿಸಲಾಗಿದೆ. ಮುಕ್ತಿಗೆ ದಾರಿ ಮಾಡಿಕೊಡುವ ಸಾಹಿತ್ಯವಾಗಿ ಈ ತತ್ವಪದಕಾರರನ್ನು 'ಶಿವಯೋಗಿ'ಗಳೆಂದೇ ಕರೆದಿರುವುದು ಇದಕ್ಕೆ ಪೂರಕವಾಗಿದೆ. ನಿಜಗುಣ ಶಿವಯೋಗಿ, ಘನಮಠದ ಶಿವಯೋಗಿ, ಸರ್ಪಭೂಷಣ ಶಿವಯೋಗಿ, ನೀರಲಕೇರಿ ಬಸವಲಿಂಗ ಶರಣ, ಮೈಲಾರ ಬಸವಲಿಂಗ ಶರಣ, ಕೂಡಲೂರು ಬಸವಲಿಂಗ ಶರಣ ಎಂದು ಕರೆದಿರುವುದಕ್ಕೆ ಸಂಗ್ರಹಕಾರರ ಭಕ್ತಿಯೇ ಕಾರಣವಾಗಿದೆ.

ಆದರೆ ತತ್ವಪದಕಾರರ ಧ್ಯೇಯೋದ್ದೇಶಗಳನ್ನು ನೋಡಿದರೆ, ಅವರ ವ್ಯಕ್ತಿತ್ವವನ್ನು ಅರಿತರೆ, ಅವರ ಪರಂಪರೆಯನ್ನು ಗಮನಿಸಿದರೆ ಕೇವಲ ಧಾರ್ಮಿಕ ಮನೋಭಾವದ, ಭಕ್ತಿಯಂಥ ಏಕಮುಖ ವ್ಯಕ್ತಿತ್ವದವರಾಗಿ ಕಾಣುವುದಿಲ್ಲ. ಬದಲಾಗಿ ಬಹುಮುಖಿ ವ್ಯಕ್ತಿತ್ವ ಉಳ್ಳವರಾಗಿ ಕಾಣುತ್ತಾರೆ. ಸಮಾಜ ಸುಧಾರಕರಾಗಿ ಈ ತತ್ವಪದಕಾರರು ಮುಖ್ಯರಾಗಿದ್ದಾರೆ. ಮಡಿವಾಳಪ್ಪ, ಬಕ್ಕಪ್ಪಯ್ಯ, ಬಸವಲಿಂಗಪ್ಪ, ಕೃಷ್ಣಪ್ಪ, ಹಸನಸಾಹೇಬ ಮುಂತಾದವರು ಮಡಿವಂತಿಕೆಯನ್ನು ಮೀರಿ ಪದಪ್ರಯೋಗಗಳನ್ನು ಮಾಡಿದ್ದಾರೆ. ಡಾ. ಎಂ.ಎಸ್. ಲಠ್ಠೆಯವರು ಮಾತ್ರ ದಿಟ್ಟತನದಿಂದ ಕಡಕೋಳ ಮಡಿವಾಳಪ್ಪನ ತತ್ವಪದಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಮಡಿವಾಳಪ್ಪ ಬಳಸದ ಶಬ್ದಗಳಿಲ್ಲ. ಮಡಿವಾಳಪ್ಪನ ಸಾಮಾಜಿಕ ಕಾಳಜಿ ಅಪಾರವಾದದ್ದು. ಈತನ ಶಿಷ್ಯರಾದ ಖೈನೂರು ಕೃಷ್ಣಪ್ಪ, ಕಡ್ಲೆವಾಡದ ಸಿದ್ಧಪ್ಪ, ಗಂವಾರ ಶಾಸ್ತ್ರಿ, ಬಿದನೂರ ಗಂಗಮ್ಮ ಮುಂತಾದವರ ಈಗ ಸಿಕ್ಕಿರುವ ಕೆಲವೇ ಕೆಲವು ತತ್ವಪದಗಳನ್ನು ಗಮನಿಸಿದರೆ ಇವರೆಲ್ಲ ಮಡಿವಾಳಪ್ಪನ ಹಾದಿಯಲ್ಲಿದ್ದಾರೆ ಎನಿಸುತ್ತದೆ. ಇವರ ತತ್ವಪದಗಳ ಸಂಗ್ರಹ ಇನ್ನೂ ನಡೆಯಬೇಕಾಗಿದೆ.

ವಿಶೇಷ ಮತ್ತು ಕುತೂಹಲದ ಸಂಗತಿಯೆಂದರೆ ಈ ಶತಮಾನದಲ್ಲಿಯೂ ಮತ್ತು ಕೆಲವರು ಈ ಹೊತ್ತಿನವರೆಗೂ ಬದುಕಿರುವ ತತ್ವಪದಕಾರರಿದ್ದಾರೆ. ಹೆಸರಿಸಬೇಕೆಂದರೆ ಯರಮಾರೆಪ್ಪ (೧೯೨೫–), ಮಂಜಲರ್ಾ ಖಾದರ್ ಸಾಬ (೧೯೩೦–೧೯೭೫), ಜಹಿರಾಬಾದ ತಿಪ್ಪಣ್ಣತಾತ (೧೯೪೦–), ಹೊಸೂರು ತಿಪ್ಪಣ್ಣ (೧೯೪೩–), ಕಲ್ಮಲದ ತಾಯಣ್ಣ (೧೯೬೩–೧೯೮೦),

ತಳವಾರಗೇರಿ ಬಸವನಗೌಡ (೧೮೬೦-೧೮೬೭) ನಿಂಬೋಳಿ ತಿಪ್ಪಣ್ಣ ಮಾಸ್ತಾರ (೧೯೨೨-೧೯೮೩) ಸಲ್ಗರದ ಲಕ್ಷ್ಮಣ (೧೯೧೩-೧೯೭೩) ಕೋನಾಪುರದ ರಾಮಣ್ಣ (೧೯೧೦-೧೯೭೫) ನರೋಣಾದ ಸಾಯಿಬಣ್ಣ (೧೯೦೫-೧೯೭೦) ದೇಗಾವಿ ಹಜರತ್ ಸಾಹೇಬ (೧೯೦೩-೧೯೯೦) ಮುಂತಾದವರು. ಇವರ ತತ್ವಪದಗಳು ಸಂಗ್ರಹವಾಗಿಲ್ಲ. ಕೆಲವರ ಅಲ್ಪಸ್ವಲ್ಪ ಪದಗಳು ಸಂಗ್ರಹವಾಗಿವೆ. ಆದರೆ ಈ ಭಾಗದಲ್ಲಿ ಇವರ ತತ್ವಪದಗಳು ಸ್ಥಳೀಯ ಭಜನಾ ಮೇಳಗಳಲ್ಲಿ ಹಾಡಲಾಗುತ್ತಿದೆ. ಭಜನಾ ಮೇಳಗಳಲ್ಲಿ ಇವರು ಚಲನೆಯಲ್ಲಿದ್ದಾರೆ.

ಆದರೆ ಈ ಶತಮಾನದ ಮಧ್ಯಭಾಗದಲ್ಲಿ (೧೯೪೭-೧೯೪೮) ಘಟಿಸಿದ ರಜಾಕಾರರ ದಾಳಿಯನ್ನು ಕುರಿತು ಈ ತತ್ವಪದಕಾರರು ಯಾರೂ ಪ್ರತಿಕ್ರಿಯೆ ವ್ಯಕ್ತಪಡಿಸಿಲ್ಲ. ಇದು ಸೋಜಿಗದ ಸಂಗತಿ ಎನಿಸುತ್ತದೆ. ರಜಾಕಾರರ ದಾಳಿಗೆ ಜನಸಮುದಾಯಗಳೇ ತಲ್ಲಣಗೊಂಡಿವೆ. ಹಿಂಸೆ, ದರೋಡೆ, ಅತ್ಯಾಚಾರ ಮತ್ತು ಅಸಂಖ್ಯಾತ ಕೊಲೆಗಳು ನಡೆದಿವೆ. ಹೈದರಾಬಾದ್ ಕರ್ನಾಟಕದಲ್ಲಿ ರಜಾಕಾರರ ದಾಳಿಗೆ ಬೇಸತ್ತು ಲಕ್ಷಾಂತರ ಜನ ಬೇರೆ ಕಡೆಗೆ ವಲಸೆ ಹೋಗಿದ್ದಾರೆ. ರಜಾಕಾರರನ್ನು ಎದುರಿಸಲು ಇಲ್ಲಿಯ ಜನ ಯುದ್ಧವನ್ನೇ ಮಾಡಿದ್ದಾರೆ. ಇಷ್ಟಾದರೂ ಇದರ ಬಗ್ಗೆ ಯಾವ ತತ್ವಪದಕಾರ ಪದಕಟ್ಟಿ ಹಾಡಿಲ್ಲ. ಆಶ್ಚರ್ಯವೆಂದರೆ ನಿಡವಂಚಿ ಭದ್ರೇಶ್ವರ ತನ್ನ ಜೀವಿತ ಕಾಲದಲ್ಲಿ ರಜಾಕಾರರ ದಾಳಿಗೆ ಸಿಕ್ಕು ಕೊಲೆಯಾಗುವ ಒಬ್ಬ ವ್ಯಕ್ತಿಯನ್ನು ಅಡಗಿಸಿಟ್ಟು ರಕ್ಷಿಸಿದ ಘಟನೆ ನಡೆದಿದ್ದರೂ ಹಾಡಿನ ಮೂಲಕ ಪ್ರತಿಕ್ರಿಯಿಸಿಲ್ಲ. ಈ ತತ್ವಪದಕಾರನೂ ಜೆ.ಪಿ.ಚಳುವಳಿ, ತುರ್ತುಪರಿಸ್ಥಿತಿ, ಭೂ ಸುಧಾರಣೆ ಹಾಗೂ ರಾಜಕೀಯ ಏರುಪೇರುಗಳನ್ನು ಕಂಡವರಿದ್ದಾರೆ. ಆದರೆ ಇವರಾರೂ ಸಾಮಾಜಿಕ, ರಾಜಕೀಯ, ಧಾರ್ಮಿಕ ವಿದ್ಯಮಾನಗಳ ಕಡೆ ಗಮನಹರಿಸಿಲ್ಲ. ಕೇವಲ ಆಧ್ಯಾತ್ಮದ ಕಡೆ ಒಲವಿರಿಸಿಕೊಂಡು ಉಳಿದದ್ದನ್ನು ಉಪೇಕ್ಷಿಸಿರಬೇಕು.

**೫.೪.೯. ಮುಸ್ಲಿಂ ತತ್ವಪದಕಾರರು**

ಹೈದರಾಬಾದ್ ಕರ್ನಾಟಕದಲ್ಲಿ ದೀರ್ಘಾವಧಿ ಕಾಲದಿಂದ ಹಿಂದು-ಮುಸ್ಲಿಂ ಎರಡೂ ಸಮುದಾಯಗಳು ಕೂಡಿ ಬಾಳುತ್ತ ಬಂದಿವೆ. ಎರಡೂ ಸಂಸ್ಕೃತಿಗಳ ನಡುವೆ ಸಂಘರ್ಷಗಳು ಸಾಮರಸ್ಯಗಳು ಏರ್ಪಟ್ಟಿವೆ. ಸೂಫಿಗಳು, ತತ್ವಪದಕಾರರು ಈ ಭಾಗದ ಜನ ಸಮುದಾಯಗಳಿಗೆ ಬದುಕುವ ದಾರಿಯನ್ನು ತೋರಿಸುತ್ತಲೇ ಬಂದಿದ್ದಾರೆ. ಅನ್ಯರ ಪ್ರಭಾವಗಳಿಂದ, ಅನೇಕ ಭಾಷೆಗಳಿಂದ ಹೈದರಾಬಾದ್ ಕರ್ನಾಟಕದ ಸಂಸ್ಕೃತಿ ಒಂದು ಸಂಕರ ಸಂಸ್ಕೃತಿಯಾಗಿ ರೂಪಗೊಂಡಿದೆ. ಈ ಭಾಗದಲ್ಲಿ ಅನೇಕ ಮುಸ್ಲಿಂ ತತ್ವಪದಕಾರರಿದ್ದಾರೆ. ಚೆನ್ನೂರ ಜಲಾಲಾ ಸಾಹೇಬ (೧೭೮೦-೧೮೫೦), ಮೋಟ್ನಹಳ್ಳಿ ಹಸನಸಾಹೇಬ (೧೮೫೫-೧೯೧೫), ಕೋಹಿನೂರ ಹಸನ (೧೮೭೪-೧೯೬೪), ದೇಗಾವಿ ಹಜರತ್ ಸಾಹೇಬ (೧೮೯೭-೧೯೮೦), ಸಯ್ಯದ ಶಾಹಾ ಲಾಡ್ಲೆ ಹುಸೇನಿ, ಮಹಾಗಾಂವದ ಮೀರಾಸಾಹೇಬ (ಜ.೧೯೧೭), ಮಂಜರ್ಲಾ ಖಾದರಸಾಬ (೧೯೩೦-೧೯೭೫), ಅರವಲಿ ಬಿಜಲಿ ವಸ್ತಾದಿ (೧೯೩೦- ಸಾವಳಗಿ ಮಹಮ್ಮದ ಹುಸೇನರು (೧೯೧೭-೧೯೮೭) ಮುಂತಾದವರು. ಈ ಎಲ್ಲ ತತ್ವಪದಕಾರರ ತತ್ವಪದಗಳನ್ನು

ಅವರವರು ನೆಲೆಗೊಂಡ ಊರುಗಳಲ್ಲಿ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಆಸಕ್ತರು ಮತ್ತು ಭಜನೆಗಳಲ್ಲಿ ಹಾಡುತ್ತಾರೆ. ಮಂಜಲರ್ಗಾ ಖಾದರ ಸಾಬನಿಗೆ 'ಸಿದ್ಧರಾಮಸ್ವಾಮಿ' ಗುರುವಾಗಿದ್ದ. ಚನ್ನೂರು ಜಲಾಲ ಸಾಹೇಬನಿಗೆ, ಮೋಟ್ನಹಳ್ಳಿ ಹಸನಸಾಹೇಬನಿಗೆ, 'ಮಡಿವಾಳಪ್ಪ'ನೇ ಗುರುವಾಗಿದ್ದ. ಇವರು 'ಗುರುಮಡಿವಾಳ', 'ಇಟಪೂರೀಶ' ಅಂಕಿತ ಉಳ್ಳವರು. ಸಾವಳಗಿ ಮಹಮ್ಮದ ಹುಸೇನನಿಗೆ ಸಿದ್ಧಲಿಂಗ', ಮಹಾಂಗವ ಮೀರಾ ಸಾಹೇಬನಿಗೆ 'ಪಂಚಾಕ್ಷರಿ' ಗುರುವಾಗಿದ್ದ. ಇವರಿಗೆ ಅದೇ ಅಂಕಿತವೂ ಆಗಿದೆ. ದೇಗಾವಿ ಹಜರತ್ ಸಾಹೇಬನಿಗೆ 'ಗುಂಡಪ್ಪ' ಗುರುವಾಗಿದ್ದ. ಇವರೆಲ್ಲರೂ ತತ್ವಪದ ಮತ್ತು ನಾಟಕಗಳನ್ನು ರಚಿಸಿದ್ದಾರೆ. ಕೆಲವರು ಲಾವಣಿ, ರಿವಾಯತ್ ಹಾಡುಗಳನ್ನು ಬರೆದಿದ್ದಾರೆ. ದೇಗಾವಿ ಹಜರತ್ ಸಾಹೇಬ ಮಾತ್ರ 'ಹಜರತ್' ಎಂಬ ಅಂಕಿತ ಉಳ್ಳವನು. ಉಳಿದಂತೆ ಎಲ್ಲರೂ ತಮ್ಮದಲ್ಲದ ಅನ್ಯಮತದ ಪ್ರಭಾವಕ್ಕೆ ಒಳಗಾಗಿದ್ದಾರೆ. ಈ ಬೆಳವಣಿಗೆಯನ್ನು ಹಿಂದೂ ಮುಸ್ಲಿಂ ಸಾಮರಸ್ಯವೆಂದೂ, ಎರಡು ಸಂಸ್ಕೃತಿಗಳ ಬಾಂಧವ್ಯವೆಂದೂ ಗ್ರಹಿಸಲಾಗಿದೆ.

ಮುಸ್ಲೀಮರು ತಮ್ಮದಲ್ಲದ ಅನ್ಯಮತದ ಪ್ರಭಾವಕ್ಕೆ ಒಳಗಾಗಿ ತತ್ವಪದಗಳನ್ನು ಬರೆದಿರುವಂತೆ, ಮುಸ್ಲೀಮೇತರರು (ಮುಸ್ಲಿಂ) ಮತದ ಪ್ರಭಾವಕ್ಕೆ ಒಳಗಾಗಿ ತಮ್ಮದಲ್ಲದ ಅನ್ಯಮತ ಇಸ್ಲಾಂದ ತತ್ವಗಳ ಮೇಲೆ ತತ್ವಪದಗಳನ್ನು ರಚಿಸಿದ್ದಾರೆಯೇ? ಎಂದು ಹುಡುಕಿದರೆ ಫಲಿತಾಂಶ ಅಷ್ಟಾಗಿ ಗೋಚರವಾಗದು. ಬಹುಶಃ ಯಾರೂ ಇಲ್ಲವೆಂದೆ ಕಾಣುತ್ತದೆ. ಸಾವಳಗಿ ಶಿವಲಿಂಗನು (ಲಿಂಗಾಯತ) ಖ್ವಾಜಾ ಬಂದೇನವಾಜ ವಂಶಜರಲ್ಲಿ ಒಬ್ಬನನ್ನು ಗುರುವನ್ನಾಗಿ ಸ್ವೀಕರಿಸಿದ್ದಾನೆ. ಇವರಿಬ್ಬರು ಸಂತರು, ಶಿವಯೋಗಿಗಳು, ಸೂಫಿಗಳೂ ಆಗಿದ್ದಾರೆ. ಇವರಿಬ್ಬರು ಸಾಹಿತ್ಯ ರಚಿಸಿಲ್ಲ. ಸಾಹಿತ್ಯದ ದೃಷ್ಟಿಯಿಂದ ನೋಡಿದರೆ ಮುಸ್ಲೀಮರು ಲಿಂಗಾಯತ ಮತದ ಪ್ರಭಾವಕ್ಕೆ ಒಳಗಾಗಿ, ಲಿಂಗಾಯತ ಗುರುವನ್ನು, ಲಿಂಗಾಯತ ತತ್ವಗಳನ್ನು ಕುರಿತು ತತ್ವಪದ ರಚಿಸಿದ್ದಾರೆ. ಮುಸ್ಲೀಮೇತರರು (ಹೆಚ್ಚಾಗಿ ಲಿಂಗಾಯಿತರು) ಮುಸ್ಲಿಂ ಪ್ರಭಾವಕ್ಕೆ ಒಳಗಾಗಿ ಇಸ್ಲಾಂಗೆ ಅನುಗುಣವಾಗಿ ತತ್ವಪದಗಳನ್ನು ರಚಿಸಿಲ್ಲ. ಕೊಡುಕೊಳ್ಳುವಿಕೆ ಏಕಮುಖವಾಗಿದೆಯೇ ಹೊರತು ಬಹುಮುಖಿಯಾಗಿಲ್ಲ. ಕನ್ನಡದ ಅನುಭಾವಿಗಳು (ತತ್ವಪದಕಾರರು) ಈ ಮುಸ್ಲೀಂ ತತ್ವಪದಕಾರರ ಮೇಲೆ ಪ್ರಭಾವ ಬೀರಿದ್ದಾರೆ. ಕುತೂಹಲದ ಸಂಗತಿಯೆಂದರೆ ಈ ಭಾಗದಲ್ಲಿ ಸೂಫಿಗಳೂ ಒಂದು ಪರಂಪರೆಯನ್ನೇ ನಿರ್ಮಿಸಿದ್ದಾರೆ. ಈ ಸೂಫಿಗಳ ಪ್ರಭಾವವು ಕನ್ನಡ ತತ್ವಪದಕಾರರ ಮೇಲೆ ವಿಶೇಷವಾಗಿ ಆಗಿದೆ. ಮಡಿವಾಳಪ್ಪ 'ಫಕೀರನಾಗಬೇಕಾದರೆ' ಎಂಬ ಪದ ಬರೆದಿದ್ದಾನೆ. ಚಿದಾನಂದ ಆವಧೂತ, ವಡಕಿ ತಾತಪ್ಪಯ್ಯ, ಕೂಡಲೂರು ಬಸವಲಿಂಗಪ್ಪ, ನಿಡವಂಚಿ ಭದ್ರೇಶ್ವರ, ಶಿಲ್ಲಪ್ಪ ಮುಂತಾದವರ ಮೇಲೆ ಸೂಫಿ ಸಂತರು ಗಾಢ ಪ್ರಭಾವ ಬೀರಿರುವಾಗ, ಈ ಮುಸ್ಲೀಂ ತತ್ವಪದಕಾರರಿಗೆ ಯಾಕೆ ಈ ಸೂಫಿಗಳು 'ಗುರು'ವಾಗಲಿಲ್ಲ, ಪ್ರಭಾವ ಯಾಕೆ ಬೀರಲಿಲ್ಲ? ಅದರಲ್ಲೂ ಮುಸ್ಲಿಂ ಆಳ್ವಿಕೆ ಇತ್ತು. ಉರ್ದು ಆಡಳಿತದ ಭಾಷೆಯಾಗಿ ಮಾನ್ಯತೆ ಪಡೆದಿತ್ತು. ಇದು ಯಾಕೆ ಸಹಾಯಕ್ಕೆ ಬರಲಿಲ್ಲ? ಇಂಥ ಪ್ರಶ್ನೆಗಳು ಸಹಜವಾಗಿಯೇ ಏಳುತ್ತವೆ. ಈ ಸಮಸ್ಯೆಗಳಿಗೆ ಪರಿಹಾರ ಸರಳವಾಗಿಲ್ಲ.

ಶರಣರಿಂದ ಲಿಂಗಾಯತ ಧರ್ಮವು ಬೆಳೆದು ಬಹುದೀರ್ಘಕಾಲದಿಂದ ಈ ಭಾಗದಲ್ಲಿ ಬೇರುಬಿಟ್ಟಿದೆ. ಬಸವಣ್ಣನ ಉದಾರ ಮಾನವೀಯತೆಯೇ ಒಂದು ಪರಂಪರೆಯಾಗಿದೆ. ಸಿದ್ಧರಾಮ, ಚೆನ್ನಬಸವಣ್ಣನಂಥವರ ತಾಂತ್ರಿಕವಾದ ಲಿಂಗಾಯತ ಧರ್ಮದ ಪ್ರಣಾಳಿಕೆಯನ್ನೇ ಅನುಸರಿಸುವ ಇನ್ನೊಂದು ಪರಂಪರೆಯೂ ಇದೆ. ಇದರ ಜತೆಗೆ ಸ್ಥಾಪಿತ ವ್ಯವಸ್ಥೆಯನ್ನು ಮೀರುವ ಅಲ್ಲಮಪ್ರಭುವಿನ ಪರಂಪರೆಯ ಕೊಂಡಿಗಳಾಗಿದ್ದಾರೆ. ಸೂಫಿಗಳೂ ಇದೇ ಮನೋಭಾವದವರು ಆಗಿರುವುದರಿಂದ ಪ್ರಭಾವ ಬೀರಿರುವುದು ಸಹಜವಾಗಿದೆ. ಬಸವಣ್ಣನ ಅನುಯಾಯಿಗಳೂ ಇದ್ದಾರೆ. ಮಠಾಧೀಶರು, ಮಠಮಾನ್ಯಗಳು ಶರಣರ ಹೆಸರಿನಲ್ಲಿ ತಮ್ಮದೇ ಆದ ಒಂದು ವ್ಯವಸ್ಥೆಯನ್ನು ಮಾಡಿಕೊಂಡು ಜನಸಾಮಾನ್ಯರನ್ನು ತಮ್ಮ ಸ್ಥಾಪಿತ ವ್ಯವಸ್ಥೆಗೆ ಒಳಗು ಮಾಡಿರುವುದು ಸ್ಪಷ್ಟವಾಗಿದೆ. ಈ ವ್ಯವಸ್ಥೆ ಬಲಿಷ್ಠವಾಗಿಯೂ ಇದೆ. ಈ 'ಲಿಂಗಾಯತ ಧರ್ಮ'ಕ್ಕೆ ಶರಣರ ಬೆಂಬಲವಿರುವುದನ್ನು ಮಠಮಾನ್ಯಗಳು ಸಾರುತ್ತ ಬಂದಿವೆ. ಹೀಗಾಗಿ ಈ ಭಾಗದ ಅನೇಕ ಮುಸ್ಲೀಂ ತತ್ವಪದಕಾರರು ಲಿಂಗಾಯತ ಧರ್ಮದ ಪ್ರಭಾವಕ್ಕೆ ಒಳಗಾಗಿರುವುದು ಸಹಜವಾಗಿದೆ. ಇನ್ನೊಂದು ಆಕರ್ಷಣೆ ಎಂದರೆ ಮಠಗಳಲ್ಲಿ, ಲಿಂಗಾಯತರ ಮನೆಗಳಲ್ಲಿ ಕನ್ನಡ ಭಾಷೆ ಜೀವ ಹಿಡಿದು ಉಳಿದಿತ್ತು. ಈ ಕನ್ನಡ ಭಾಷೆಯ ಮೇಲಿರುವ ಪ್ರೇಮವೂ ಕಾರಣವಾಗಿರಬೇಕು. ಅನ್ಯರ ಆಳ್ವಿಕೆಯ ಕಾಲದಲ್ಲಿ ಒತ್ತಡಕ್ಕೋ, ಆಮಿಷಗಳಿಗೋ ಬಲಿಯಾಗಿ ಮತಾಂತರಗೊಂಡ ಕೆಳವರ್ಗದವರು ಮುಸ್ಲೀಮರಾದರೂ ಮೂಲ ಇಸ್ಲಾಂ ಸಂಸ್ಕಾರವನ್ನು ಬೆಳೆಸಿಕೊಳ್ಳಲು ಸಾಧ್ಯವಾಗಲಿಲ್ಲ. ತಾಂತ್ರಿಕವಾಗಿ 'ಇಸ್ಲಾಂ' ಅನ್ನು ಅನುಸರಿಸಿರಬಹುದು. ಅದರಲ್ಲೂ ಇವರು ಯಾರೂ ಮೂಲ ಇಸ್ಲಾಂ ಧರ್ಮಕ್ಕೆ ಸೇರಿರಲಿಲ್ಲವೆಂದು ಕಾಣುತ್ತದೆ. ಈ ನೆಲದವರು ಇಸ್ಲಾಂಗೆ ಮತಾಂತರಗೊಂಡರೆ ಹೊರತು ಅದರ ಸಂಸ್ಕಾರವನ್ನು ಪಡೆಯಲಿಲ್ಲ. ಇಂಥವರು ಸ್ಥಳೀಯವಾಗಿ ಬಲಿಷ್ಠವಾಗಿದ್ದ ಲಿಂಗಾಯತ ಧರ್ಮದ ಪ್ರಭಾವಕ್ಕೆ ಒಳಗಾದರು ಮತ್ತು ಈ ಧರ್ಮದವರೇ ಆದ ವ್ಯಕ್ತಿಗಳನ್ನು 'ಗುರು'ವಾಗಿ ಸ್ವೀಕರಿಸಿದರು. ಇದು ಚಾರಿತ್ರಿಕವಾಗಿ ಸೂಕ್ಷ್ಮವಾಗಿ ಗ್ರಹಿಸಬೇಕಾದ ಸಂಗತಿಯಾಗಿದೆ. ಇಂಥವರಿಂದಲೇ 'ಕೊಡು–ಕೊಳೆ' ನಡೆದಿದೆ; ಸಾಮರಸ್ಯವೇರ್ಪಟ್ಟಿದೆ. ಇಂಥವರ ಮೂಲ ಸಂಸ್ಕಾರದ ಪರಿಣಾಮವಾಗಿ (ಮತಾಂತರಗೊಂಡಿದ್ದರೂ) ಮುಸ್ಲೀಮೇತರರ ಆಚರಣೆಗಳಲ್ಲಿ ಭಾಗಿಯಾಗಲು ಕಾರಣವಾಗಿದೆ. ಮುಸ್ಲೀಮರಲ್ಲಿ ಸಂಭ್ರಮದ ಹಬ್ಬಗಳು ಇರಲಿಕ್ಕಿಲ್ಲ. 'ರಂಜಾನ್', 'ಬಕ್ರೀದ್'ಗಳು ಉಪವಾಸ, ವ್ರತ, ಬಲಿದಾನ, ಕಡ್ಡಾಯ ಪ್ರಾರ್ಥನೆಗಳಿಂದ ಕೂಡಿದ್ದು ಮೂಲತಃ ಸಂಭ್ರಮ ಇದ್ದರೂ ಅದು ಮುಸ್ಲೀಮೇತರ ಸಮುದಾಯಗಳನ್ನು ಒಳಗೊಳ್ಳುವುದಿಲ್ಲ. ಅದಕ್ಕಾಗಿಯೇ ದುಃಖ ಮೂಲವಾದ ಮೊಹರಂ ಅನ್ನು ಮತಾತರಗೊಂಡ ಮುಸ್ಲೀಮರು ಅದನ್ನು ಕುಣಿಯುವ ಸಂಭ್ರಮದ ಹಬ್ಬವನ್ನಾಗಿ ಮಾಡಿಕೊಂಡಿರಬೇಕು. ಇವರನ್ನು ಮುಸ್ಲೀಮೇತರರಾದ ಕೆಳವರ್ಗದವರೂ ಅನುಸರಿಸಿರಬೇಕು. ಕೆಳವರ್ಗದವರ ಮೂಲಭೂತ ಗುಣವೆಂದರೆ ಸ್ಥಳೀಯ ದೈವಗಳನ್ನು ಆರಾಧಿಸುವುದು. ಹಳ್ಳಿ ದೇವತೆಗಳ ಜೊತೆಗೆ ಸಂತರ ಸಮಾಧಿಗಳಿಗೂ ನಡೆದುಕೊಳ್ಳುವುದು

ಅವರ ಸ್ವಭಾವದಲ್ಲೇ ಇದೆ. ಇದರಿಂದ 'ಹಿಂದೂ-ಮುಸ್ಲೀಂ' ಸಂತರ ಸಮಾಧಿಗಳಿಗೆ, ಅವರ ಜಾತ್ರೆಗಳಿಗೆ ಸಮಾನಭಾವದಿಂದಲೇ ಭಾಗಿಯಾಗುತ್ತಾರೆ.

ರಾಮದಾಸನಾಗಲಿ, ಮೀರಾಸಾಹೇಬನಾಗಲಿ, ಹಸನ ಸಾಹೇಬನಾಗಲಿ ಅರಬ್ಬೀ ಮೂಲದ 'ಇಸ್ಲಾಂ' ಧರ್ಮಕ್ಕೆ ಸೇರಿದವರಲ್ಲ. ಅವರ ವಂಶಜರು ಯಾವುದೋ ಕಾಲದಲ್ಲಿ ಮತಾಂತರಗೊಂಡಿರಬೇಕು. ಅದರಿಂದಾಗಿಯೇ ಇವರು 'ಪಿಂಜಾರ' 'ಜಾತಿಗಾರ' ಪಂಗಡಕ್ಕೆ ಸೇರಿದವರಾಗಿದ್ದಾರೆ. ಲಿಂಗಾಯತ ಧರ್ಮದ ಪ್ರಭಾವದಿಂದಲೂ, ಮೂಲ ಸಂಸ್ಕಾರದಿಂದಲೂ ಮತ್ತು ಇದಕ್ಕಿಂತ ಮಿಗಿಲಾದ ತತ್ವಪದಕಾರರ ಮುಕ್ತ ಮನಸ್ಸಿನ ಪ್ರಭಾವದಿಂದಲೂ ಪ್ರೇರಣೆ ಪಡೆದ ಮುಸ್ಲಿಂ ತತ್ವಪದಕಾರರು 'ಲಿಂಗಾಯತ ಧರ್ಮ'ದ ನೆಲೆಯಲ್ಲಿ ತತ್ವಪದ ರಚಿಸಿದ್ದಾರೆ. ಮೋಟ್ನಹಳ್ಳಿ ಹಸನಸಾಹೇಬನು ಲಿಂಗಾಯತ ತತ್ವಗಳನ್ನೇ ತನ್ನ ತತ್ವಪದಗಳಲ್ಲಿ ಹಾಡಿದ್ದಾನೆ. ಸಾವಳಗಿ ಮಹಮ್ಮದಸಾಹೇಬ, 'ಕಲಿಧರ್ಮ', 'ಬಸವೇಶ್ವರ' ಎಂಬ ನಾಟಕಗಳನ್ನೂ, ದೇಗಾಂವಿಯ ಹಜರತ್ ಸಾಹೇಬನು 'ಜಗಜ್ಯೋತಿ ಬಸವೇಶ್ವರ', 'ಹಾರಕೊಡುಮುತ್ಯಾ' ಮುಂದಾತದವರ ಮೇಲೆ ಹಾಡು ಬರೆದಿರುವುದನ್ನು ನೋಡಿದರೆ, ಮೀರಾ ಸಾಹೇಬನ ತತ್ವಪದಗಳ ಸಾರ ಗಮನಿಸಿದರೆ 'ತಮ್ಮದಲ್ಲದ' ಆದರೆ ಪ್ರಭಾವಕ್ಕೊಳಗಾದ 'ಶಕ್ತಿಯ' ಮೇಲೆ ಬರೆದಿರುವುದು ಕಂಡುಬರುತ್ತದೆ. ಇದರಿಂದ ಹೆಸರಿಗೆ ಮುಸ್ಲಿಂ ತತ್ವಪದಕಾರರಾಗಿರುವುದು ಸ್ಪಷ್ಟವಾಗಿದೆ. ಅವರ ತತ್ವಪದ ಸಾಹಿತ್ಯದ 'ತಿರುಳು' ಬೇರೆಯದು. ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಇಂಥ ಪ್ರಕ್ರಿಯೆ ನಡೆಯುವುದು ಸಹಜ ಎನ್ನಿಸುತ್ತದೆ. ಆದರೂ ಇಂಥ ಸಾಂಸ್ಕೃತಿಕ ಒತ್ತಡಗಳ ನಡುವೆಯೂ ಈ ಮುಸ್ಲಿಂ ತತ್ವಪದಕಾರರು ತಮ್ಮ ಅನನ್ಯತೆಯನ್ನು ಉಳಿಸಿಕೊಂಡಿದ್ದಾರೆಯೇ ಎಂಬ ಪ್ರಶ್ನೆಗೆ ಉತ್ತರ ಹುಡುಕುವುದು ಕಷ್ಟ. ಯಾಕೆಂದರೆ ಈ ಎಲ್ಲ ಮುಸ್ಲಿಂ ತತ್ವಪದಕಾರರ ತತ್ವಪದ ಸಾಹಿತ್ಯ ಸಂಗ್ರಹವಾಗಿಲ್ಲ. ಸಂಗ್ರಹವಾದ ಅಲ್ಪಸ್ವಲ್ಪ ಸಾಹಿತ್ಯದ ಮೇಲೆ ಯಾವುದೇ ನಿರ್ಧಾರ ಉಚಿತವಲ್ಲ. ದೇಗಾವಿ ಹಜರತ್ ಸಾಹೇಬ ಮಾತ್ರ ಹಜರತ್ ಎಂಬ ಅಂಕಿತವಿಟ್ಟುಕೊಂಡಿದ್ದಾನೆ. ಚೆನ್ನೂರ ಜಲಾಲಸಾಹೇಬನ ಅಭಿವ್ಯಕ್ತಿ ಕ್ರಮದಲ್ಲಿ (ಭಾಷೆಯ ಬಳಕೆಯಲ್ಲಾದರೂ) ಭಿನ್ನತೆಯಿದೆ. ಅದನ್ನು ಗಮನಿಸುವುದಾದರೆ.

ಹಿಂದೂ ಮುಸ್ಲೀಂ ಶಾಸ್ತ್ರಪಡೆತೆ ಹೈ
ಗುರುಮನಿ ಕೀಲ ಸಿಗಲಿಲ್ಲ
ಲಾಯಕ್ ಗುರುಕೊ ಜಬ್ ಡೊಂಡ್ ಲಾಕೆ
ಏನು ಬೇಡಿದ್ದು ಕೊಡಬೇಕಲ್ಲಾ
ತನುಮನಧನ ಲೋಭ ಛೋಡಕರ್
ಆಗಬೇಕು ಗುರುವಿನ ಚೇಲಾ
ಹಮ್ ಭೀ ಕಹತೆ ತುಮ್ ಭಿ ಕಹತೆ
ಮಾಡಬ್ಯಾಡ ರೀ ಮ್ಯಾಲಿನ ಶೀಲಾ

ಗುರು ಮಡಿವಾಳನ ಹೋಕರೆ

ಬೂಲೆ ತೊಳೆಯಬೇಕರಿ ಒಳಗಿನ ಮೈಲಾ’[೪೫] ಈ ತತ್ವಪದದಲ್ಲಿ ಅನುಭಾವದ ಮನಸ್ಸಿದೆ. ಭಾಷೆಯ ಬಳಕೆಯಲ್ಲಿ ಉರ್ದು ಪದಗಳಿವೆ. ಇಷ್ಟರಿಂದಲೇ ‘ಸ್ವಂತಿಕೆ’ಯನ್ನು ಗುರುತಿಸುವುದು ಕಷ್ಟ. ಮುಸ್ಲೀಂ ಆಳ್ವಿಕೆ, ಉರ್ದು ಪ್ರಭಾವದಿಂದ ಕನ್ನಡ ಸಾಹಿತ್ಯ ರಚನೆಗೆ ತೊಂದರೆಯಾಯಿತು ಎಂಬ ಆಧುನಿಕ ಕಾಲದವರ ಹೇಳಿಕೆಗೆ ಅನುವು ಸಿಗದಂತೆ ಈ ಮುಸ್ಲೀಂ ತತ್ವಪದಕಾರರು ಕನ್ನಡದಲ್ಲಿ ಬರೆದಿರುವುದು ವಿಶೇಷ. ಈ ಶತಮಾನದ ಪ್ರಾರಂಭದಿಂದ ಕನ್ನಡಿಗರು ತಮ್ಮ ಹಿತಕ್ಕಾಗಿ ಉರ್ದುವನ್ನು ಕಲಿತಿದ್ದಾರೆ ಎಂಬುದು ಮೆಚ್ಚುವ ಸಂಗತಿ. ಆಡಳಿತದಲ್ಲಿ ಸೇರಿಕೊಳ್ಳಲು, ನೌಕರಿಗಾಗಿ ಉರ್ದು ಭಾಷೆಯ ಕಲಿಕೆಗೆ ಮೊರೆ ಹೋಗುವುದಕ್ಕೆ ಒಂದು ಒತ್ತಡವೂ ಇತ್ತು. ಆದರೆ ಕನ್ನಡ ಕಲಿಕೆಗೆ, ಸಾಹಿತ್ಯ ರಚನೆಗೆ ಅಡ್ಡಿಯಾಗುವ ಒತ್ತಡಗಳು ವ್ಯಕ್ತಿಗತವಾಗಿದ್ದವೇ ಹೊರತು, ರಾಜಕೀಯ ಅಡ್ಡಿ ಹಾಗೂ ಸಾಂಸ್ಕೃತಿಕ ತೊಡಕುಗಳು ಇದ್ದವು ಎಂಬುದು ಸರಿಯಾದ ವಾದವಲ್ಲ ಎನಿಸುತ್ತದೆ.

**೫.೪.೧೦. ಮುಕ್ತ ಪದ ಪ್ರಯೋಗಗಳು**

ವಚನಕಾರರಂತೆ ತತ್ವಪದಕಾರರು ಸಮಾಜ ಸುಧಾರಕರು. ಅನುಭಾವಿಗಳು, ಸಾಧಕರು, ಯೋಗಿಗಳು ಆದ ಇವರನ್ನು ವಿರಕ್ತಿಗಳು ಎಂದು ಕರೆಯಲಾಗುತ್ತದೆ. ಮೋಹ, ವ್ಯಸನಗಳಿಂದ ಮುಕ್ತವಾಗಿ ಬದುಕಿನ ಬಗೆಗೆ, ಲೋಕದ ಕುರಿತು ಪ್ರೀತಿ ಉಳ್ಳವರಾಗಿದ್ದಾರೆ. ಇವರು ಭವದ ಸಂಸಾರದಲ್ಲಿದ್ದು ಇಲ್ಲದಂತಿರುತ್ತಾರೆ, ಕಮಲದ ಮೇಲಿನ ನೀರ ಹನಿಯಂತೆ. ಈ ಗುಣದಿಂದಾಗಿ ಯಾಜಮಾನ್ಯತೆ ಅವರಿಗೆ ಪ್ರಾಪ್ತವಾಗಿ, ಲೋಕದ ಯಜಮಾನರಾಗಿದ್ದಾರೆ. ಅವರಿಗೆ ಜನರ, ಲೋಕದ ಹಿತವೇ ಮುಖ್ಯವಾಗಿರುವುದರಿಂದ ಅವರಲ್ಲಿರುವ ಅಲೌಕಿಕ ಶಕ್ತಿಯಿಂದಾಗಿ ಜನತೆಯನ್ನು ತೆಗಳುತ್ತಾರೆ. ಆಗ ಲೋಕ ತಲೆಬಾಗುತ್ತದೆ. ಇದರಿಂದಾಗಿ ಅನೇಕ ತತ್ವಪದಕಾರರು ನಿಷ್ಠೂರವಾಗಿ ಕಂಡದ್ದನ್ನು ಕಂಡಂತೆ ಹೇಳುವಾಗ ‘ಮಡಿವಂತಿಕೆ’ಯನ್ನು ಮೀರಿದ ಶಬ್ದಗಳನ್ನು ಬಳಸಿಬಿಡುತ್ತಾರೆ. ಅದರಲ್ಲಿ ಹೊರನೋಟಕ್ಕೆ ಸಿಟ್ಟು ಕಂಡರೂ ಒಳಗೆ ಜನರ, ಸಮಾಜದ ಹಿತಕಾಯುವ ಗುಣವಿರುತ್ತದೆ.

‘ಎಲ್ಲಿ ಭಕ್ತಿಯದೆಲ್ಲ ಮುಕ್ತಿಯದೋ ಈ ಸೂಳೆಮಕ್ಕಳಿ

ಗೆಲ್ಲ ಭಕ್ತಿಯದೆಲ್ಲಿ ಮುಕ್ತಿಯದೊ’[೪೬] (ಘನಮಠದ ಶಿವಯೋಗಿ) ಎಂದಿದ್ದಾನೆ. ಇಲ್ಲಿ ಆಕ್ರೋಶವಿದೆ. ಅಜ್ಞಾನವನ್ನು ಕಂಡು ಸಹಿಸದೆ ಆಡಿರುವ ಮಾತುಗಳು ಎಂದು ಅನಿಸಿದರೂ ಅದರಲ್ಲಿ ಒಂದು ಸಾಮಾಜಿಕ ಕಾಳಜಿ ವ್ಯಕ್ತವಾಗಿರುವುದು ಕಂಡುಬರುತ್ತದೆ.

‘ಸಂತಿ ಸಂಸಾರ ನೋಡಣ್ಣ ನೀ

ಹೊತ್ತು ಮಾರಿಕೊಂಡ್ಹೋಗಣ್ಣ

ಸಂತೆಗೆ ಬಂದಿದಿ ಚಿಂತೆ ಯಾಕೋ

ಶಿವಗ್ಯಾಕ ಬೈತೀದಿ ಶೆಂಟ್ಹರಿಲಾಕೋ’[೪೭] (ಮೊಟ್ನಳ್ಳಿ ಹಸನಸಾಹೇಬ) ಲೋಕವೆಂಬ, ಸಂಸಾರವೆಂಬ ಸಂತೆಗೆ ಬಂದ ಮೇಲೆ ಇದ್ದು ಬಂದದ್ದನ್ನು ಸಹಿಸಿ ಗೆಲ್ಲಬೇಕು. ಸಂಸಾರ

ಸಾಕಾಗಿ, ಅದನ್ನು ನಿಭಾಯಿಸಿ ನಿಲ್ಲಲಾಗದೆ ಸಂಸಾರಿಗಳು ಶಿವನನ್ನು 'ಯಾಕೆ ಮಾಡಾದೀ ಸಂಸಾರ ಸಾಕಪೊ ಈ ಸಂಸಾರ' ಎಂದು ಬಯ್ಯುವ, ಬದುಕಲಾರದ ಜನರನ್ನು ಕಂಡು ಮೋಟ್ನಹಳ್ಳಿ ಹಸನಸಾಹೇಬ ಆಡಿದ ಮಾತುಗಳಿವು. ಕೂಡಲೂರು ಬಸವಲಿಂಗಪ್ಪನ ಲೋಕ ನೀತಿ ಹೇಳುವ ಒಂದು ತತ್ವಪದದಲ್ಲಿ 'ಮಿಂಡಲಾಡಿ' ಎಂದು ಸಂಭೋಧಿಸಿದ್ದಾನೆ.

'ಕುಲಕುಲ ಅಂತಿದ್ದಿ ಮಿಂಡಲಾಡಿ
ಕುಲದಾದಿ ಹೇಳಬೇಕು ಮಿಂಡಲಾಡಿ
ಕುಲದ ವರ್ತಮಾನ ಮಿಂಡಲಾಡಿ
ಕುಲದೊಳಗೆ ಹೇಳಬೇಕು ಮಿಂಡಲಾಡಿ'[೪೮] (ಕೂಡಲೂರು ಬಸಲಿಂಗಪ್ಪ) ಇಲ್ಲಿ ಜಾತಿವಾದಿಗಳಿಗೆ 'ಮಿಂಡಲಾಡಿ' ಎಂದು ಕರೆದಿದ್ದರೂ ಇದರಲ್ಲಿ ನೀಡಿದ ತಿಳುವಳಿಕೆ ದೊಡ್ಡದು. ತತ್ವಪದಕಾರರಲ್ಲಿ ಹೀನ ಮನುಜಾ, ಬುದ್ಧಿಗೇಡಿ, ಇಂಥ ಪ್ರಯೋಗಗಳು ಸಾಮಾನ್ಯವಾಗಿ ಕಂಡುಬರುತ್ತದೆ. ಕಡಕೋಳ ಮಡಿವಾಳಪ್ಪ ಅಪ್ಪಟ ದೇಶಿ ನುಡಿಗಳಲ್ಲಿ ತನ್ನ ತತ್ವಪದಗಳನ್ನು ಕಟ್ಟಿರುವುದು ಕಾಣುತ್ತೇವೆ. ಸಮಾಜ ವಿರೋಧಿಗುಣಗಳುಳ್ಳ ಮನುಜರನ್ನು ಮಡಿವಾಳಪ್ಪ ಶಿಷ್ಯರು ಬಳಸಬಾರದ ಶಬ್ದಗಳನ್ನು ಬಳಸಿ ನಿಂದಿಸಿದ್ದಾರೆ. ಕ್ಷಮೆಗೂ ಅರ್ಹರಲ್ಲದವರನ್ನು ವಿರೋಧಿಸಲು ಹಿಂದು ಮುಂದು ನೋಡದೆ ಅಶ್ಲೀಲವೆನಿಸುವ ಶಬ್ದಪ್ರಯೋಗಿಸಿರುವುದು ಕಂಡುಬರುತ್ತದೆ.

'ಮಂಡಲದೊಳಗೆ ಈ ಮಂದಿ ಮಾಡುದು ಕಂಡು
ಅದಕ್ಕೆ ಬಂದಾವಪ್ಪ ಇಂಥ ದಿನ
ಮಂಡ ಮೂಳರು ಕೂಡಿ ಕುಂಡಿ ಚಿವುಟ್ಕರು ಕೂಡಿ
ಕುಂಡಿ ನೋಡಿ ಮಣಿ ಹಾಕುವರಣ್ಣ'[೪೯]

ಡಾಂಭಿಕರನ್ನು ಕರೆದು ಪುರಸ್ಕರಿಸುವುದನ್ನು ಈ ಪದದಲ್ಲಿ ವ್ಯಂಗ್ಯ ಮಾಡಿದ್ದಾನೆ. ಸಮಾಜಘಾತಕರನ್ನು ಮಡಿವಾಳಪ್ಪ 'ಕೆರ ಹರಿಯುವತನಕ' ಹೊಡೆಯಬೇಕೆನ್ನುತ್ತಾನೆ. ಕೆಟ್ಟದ್ದನ್ನು ಬೆಂಬಲಿಸುವವರನ್ನು 'ಕುಂಡಿ ಹಡಿಸುವ ಜನರು' ಎಂದಿದ್ದಾನೆ. ತನಗೆ ಸರಿಕಾಣದ, ಅದು ಸಮಾಜಕ್ಕೆ ಕೇಡು ಮಾಡುವ ಗುಣ ಹೊಂದಿದ್ದರೆ ಅಂಥದ್ದನ್ನು ನಿಂದಿಸಲು ಮುಜುಗರಪಡದೆ ಹೀಗಳೆದಿರುವುದು ಇಲ್ಲಿ ಗಮನಿಸಬೇಕಾದ ಸಂಗತಿ. ಇಲ್ಲಿನ ನೇರವಾದ ಮಾತುಗಳು ಮಡಿವಾಳಪ್ಪನ ವ್ಯಕ್ತಿತ್ವವನ್ನು ತೋರಿಸುತ್ತವೆ. ಅಪ್ಪಟ ಹಳ್ಳಿಗನಾದ ಈತನ ಸಿಟ್ಟಿನಲ್ಲಿ ವ್ಯಕ್ತವಾಗುವ ಲೋಕದ ಬಗೆಗಿನ ಕಾಳಜಿ ಅಪಾರವಾದದ್ದು. ತತ್ವಪದಕಾರರು ಜನತೆಯ ನಡುವೆ ಮುಕ್ತವಾಗಿ ಬೆರೆತವರು. ಅವರ ಮಾತು, ನಡೆ-ನುಡಿಗಳೆಲ್ಲವೂ ನೆಲಮೂಲದಿಂದ ಬಂದಿರುವುದರಿಂದ ಅವು ಅಪ್ಪಟ ದೇಸಿಯವಾಗಿ ಇರುವುದು ಕಾಣುತ್ತದೆ. ಹೈದರಾಬಾದ್ ಕರ್ನಾಟಕ ಪ್ರದೇಶದ ಜಿಲ್ಲೆಗಳ ಭಾಷೆ ಭಿನ್ನವಾಗಿದೆ. ಶಿಲ್ಲಪ್ಪ, ನಿಡವಂಚಿ ಭದ್ರೇಶ್ವರರದು ಬೀದರ್ ಜಿಲ್ಲೆಯ ಭಾಷೆ. ಮಡಿವಾಳಪ್ಪ ಮತ್ತು ಆತನ ಶಿಷ್ಯರದು ಗುಲಬರ್ಗಾ ಜಿಲ್ಲೆಯ ಭಾಷೆ. ವಡಕಿ ತಾತಪ್ಪಯ್ಯ, ಗೂಗಲ್ ಪರಪಯ್ಯ, ಕೂಡಲೂರು ಬಸವಲಿಂಗಪ್ಪನವರದು ರಾಯಚೂರು ಕೊಪ್ಪಳ ಜಿಲ್ಲೆಗಳ ಭಾಷೆ.

ಇದು ಅವರವರ ತತ್ವಪದಗಳಿಂದ ಗೊತ್ತಾಗುತ್ತದೆ. ಲೋಕದ ಯಜಮಾನರಾಗಿ ಇರುವುದರಿಂದ, ಅವರ ವ್ಯಕ್ತಿತ್ವದಲ್ಲಿ ನಿಷ್ಠೂರತೆ ಇರುವುದರಿಂದಲೂ ಮುಕ್ತಪದಗಳು ಅವು ನುಡಿಗಟ್ಟುಗಳಾಗಿ ಹೊರಹೊಮ್ಮಿವೆ. ಅವುಗಳ ಪ್ರಯೋಗಗಳ ಹಿನ್ನೆಲೆಯಲ್ಲಿ ಅರಿತರೆ ಅವು ಅಶ್ಲೀಲ ಎನಿಸುವುದಿಲ್ಲ.

**೫.೬. ಮೊಹರಂ ಪದ**

ಭಾರತ ಒಂದು 'ಜಾತ್ಯತೀತ' ದೇಶ. ಇಲ್ಲಿ ಅನೇಕ ಧರ್ಮಗಳು, ಜಾತಿಗಳು ಕೋಡಿಕೊಂಡು ಬಾಳುತ್ತ ಬಂದಿವೆ. ಅವುಗಳು ತಮ್ಮದೇ ಆದ ಸಂಸ್ಕೃತಿ, ಆಚರಣೆ, ಜೀವನವಿಧಾನ ಸಂಸ್ಕಾರಗಳನ್ನು ಹೊಂದಿ, ಅವುಗಳನ್ನು ಪಾಲಿಸುತ್ತ ಬಂದಿರುವುದನ್ನು ಪರಂಪರೆಯಿಂದ ನಾವು ಗಮನಿಸಬಹುದು. ಇಲ್ಲಿನ ಜನರು 'ಜಾತ್ಯತೀತ' ನೆಲೆಯಲ್ಲಿ ಬದುಕನ್ನು ಕಟ್ಟಿಕೊಂಡು, ಇಲ್ಲಿ ಆಚರಿಸಲ್ಪಡುವ ಅನೇಕ ಹಬ್ಬಗಳಲ್ಲಿ ಸೌಹಾರ್ದತೆಯಿಂದ ಬೆರೆಯುವುದನ್ನು ಇಂದಿಗೂ ನಾವು ಕಾಣಬಹುದಾಗಿದೆ. ಅಂತಹ ಹಬ್ಬಗಳಲ್ಲಿ ಮೊಹರಂ ಹಬ್ಬವೂ ಒಂದು. ಮಹಮ್ಮದ್ ಪೈಗಂಬರರು ಗತಿಸಿದ ಕೆಲವೇ ವರ್ಷಗಳಲ್ಲಿ ನಡೆದ ಒಂದು ಘಟನೆಯೇ ಮೊಹರಂ ಹಬ್ಬವಾಗಿ ಆಚರಿಸಲ್ಪಡುತ್ತ ಬಂದಿದೆ. ಈ ಹಬ್ಬ ಆಚರಣೆಗೆ ಬಂದ ಬಗೆಯನ್ನು ವಿದ್ವಾಂಸರೊಬ್ಬರು ಈ ರೀತಿಯಾಗಿ ಹೇಳುತ್ತಾರೆ. 'ಅಧರ್ಮ ಮತ್ತು ಧರ್ಮ, ಅಸತ್ಯ ಮತ್ತು ಸತ್ಯಗಳ ಜೀವಂತ ಸಂಕೇತಗಳಾದ ಯಜೀದ ಮತ್ತು ಇಮಾಮ ಹುಸೇನರ ನಡುವೆ ನಡೆದ ಘೋರ ಸಂಗ್ರಾಮ ಪ್ರಜಾಪ್ರಭುತ್ವ ತತ್ವದ 'ಖಿಲಾಫತ್' ಶಾಂತಿತತ್ವ ರಕ್ಷಣೆಗಾಗಿ ನಡೆದ ಧರ್ಮಯುದ್ಧವಾಗಿದೆ. ಮೋಸ, ವಂಚನೆ, ದೌರ್ಜನ್ಯದ ಮೂರ್ತಿಯಾದ ರಾಕ್ಷಸರೂಪಿ ಯಜೀದನಿಗೆ ಲೌಕಿಕ ಜಯ ಪ್ರಾಪ್ತವಾದರೂ ಮಹಾ ತತ್ವಕ್ಕಾಗಿ ಬಲಿಯಾದ ಪವಿತ್ರಜೀವ ಇಮಾಮ ಹುಸೇನರ ಕುಟುಂಬದವರ ಕಣ್ಣೀರಿನ ಕಥೆಯೆ ಕರ್ಬುಲಾ ಕಾಳಗ. ಹಿಜರೀ ಶಕೆ ೬೧ರ ಮೊಹರಂ ಮಾಸದ ೧೦ನೇ ದಿನ ನಡೆದ ಈ ಕಾಳಗ ಇಸ್ಲಾಂ ಜಗತ್ತಿಗೊಂದು ದಿವ್ಯ ಸಂದರ್ಭ. ನ್ಯಾಯ, ನೀತಿ, ದಾನ, ಧರ್ಮ, ಪ್ರಾಮಾಣಿಕ ಬದುಕಿನಿಂದ ಕೂಡಿದವನೇ ಖಲೀಫ(ನಾಯಕ)ನಾಗಬೇಕಾದ ಸ್ಥಾನದಲ್ಲಿ ಅಸುರ ವೃತ್ತಿಯ ಕುಡುಕ, ವ್ಯಭಿಚಾರಿ, ದುರಹಂಕಾರಿ ಗುಣದ ಯಜೀದನ ಆಡಳಿತದಿಂದ ಜನತೆಯನ್ನು ಪಾರುಮಾಡಿ ಇಸ್ಲಾಂ ಧರ್ಮದ ನಾಶವನ್ನು ತಡೆಗಟ್ಟಿದ, ಸತ್ಯಕ್ಕಾಗಿ ಸತ್ತವರ ಕಥೆಯಾದ ಕಾರಣದಿಂದಲೇ ಮೊಹರಂ ಹಬ್ಬ ರೂಪದ ಈ ಕರ್ಬಲಾ ಕಾಳಗ ನಮ್ಮಲ್ಲಿ ಎಲ್ಲರಿಗೂ ಪ್ರೀಯವಾಯಿತು.'[೫೦] ಲೇಖಕರ ಈ ಮಾತುಗಳು ಮೊಹರಂ ಹಬ್ಬದ ಆಚರಣೆಯಲ್ಲಿನ ತಾತ್ವಕತೆಯನ್ನು ತಿಳಿಸುತ್ತವೆ. ಅಲ್ಲದೆ ಮೊಹರಂ ಹಬ್ಬ ಒಳಗೊಂಡಿರುವ ತತ್ವಗಳಾದ ನ್ಯಾಯ, ನೀತಿ, ದಾನ, ಧರ್ಮ, ಪ್ರಾಮಾಣಿಕ ಬದುಕನ್ನು ಮೆಚ್ಚಿ ಪ್ರತಿಯೊಬ್ಬರೂ ಅವುಗಳಿಗೆ ಆಕರ್ಷಿತರಾಗಿರುವುದು ಮೆಲ್ನೋಟಕ್ಕೆ ಕಾಣುತ್ತದೆ. ಅದು ಎಂದಿನಿಂದ ಆಚರಣೆಗೆ ಬಂತು ಎನ್ನುವುದರ ಬಗೆಗೆ ಖಚಿತತೆ ಇದುವರೆಗೆ ತಿಳಿಯಲು ಆಗಿಲ್ಲ.

ಉತ್ತರ ಕರ್ನಾಟಕದಲ್ಲಿ ಮೊಹರಂ ಹಾಡುಗಳನ್ನು 'ಕರ್ಬುಲ' ಪದ, 'ರಿವಾಯತ್' ಪದ 'ಅಲಾವಿ' ಪದಗಳೆಂದು ಕರೆಯುವ ವಾಡಿಕೆ ಇದೆ. ಹಿಂದೂ-ಮುಸ್ಲಿಂ ಸಮುದಾಯದವರು

ಹಾಡು ಈ ಪದಗಳು ಮರ್ಸಿಯಾ (ಶೋಕದಿಂದ)ಧಾಟಿಯಲ್ಲಿ ಹಾಡುವುದು ಬಹುತೇಕ ಕಡೆ ಕಂಡುಬರುತ್ತದೆ. ಮಾನವೀಯ ಮೌಲ್ಯಗಳನ್ನು ಒಳಗೊಂಡ ಈ ಮೊಹರಂ ಹಾಡುಗಳು ವಿಶ್ವದ ಯಾವುದೇ ಮೂಲೆಗೂ ಅನ್ವಯಿಸಿ ಹೇಳುವಂತವುಗಳಾಗಿವೆ. ಸೌಹಾರ್ದತೆ, ಭಾವೈಕ್ಯತೆಯನ್ನು ಸಾರುವ ಈ ಮೊಹರಂ ಪದಗಳು ಜನಸಾಮಾನ್ಯರ ನಾಡಿಮಿಡಿತದ ಭಾಗಗಳೇ ಆಗಿವೆ. ಹಾಡಿನ ಧಾಟಿಯಲ್ಲಿ ರಚಿತವಾದ ಇವುಗಳನ್ನು ಲಾವಣಿ ರೂಪದಲ್ಲೂ ಹಾಡುವರು. ಅಲಿಲ್ಲಿ ಪಲ್ಲವಿ, ಅನುಪಲ್ಲವಿ, ಪ್ರಾಸ, ಪಲ್ಲಗಳನ್ನು ಒಳಗೊಂಡ ಮೊಹರಂ ಪದಗಳು ಸಮಾಜದ ಅನೇಕ ವಿದ್ಯಮಾನಗಳನ್ನು ಸುತ್ತುವರಿದು ರಚಿತವಾಗಿವೆ. ಮಹಮ್ಮದ್ ಪೈಗಂಬರರು ಮೊಮ್ಮಕ್ಕಳನ್ನು ಹೊತ್ತು ನಮಾಜು ಮಾಡಿದ ಒಂದು ಪದ ಹೀಗಿದೆ.

'ಕೈ ಜೋಡಿಸಿ ದಯವಕೆ ಬೇಡಿಕೊಂಬುವೆ
ಇಟ್ಟ ತಮ್ಮ ಪ್ರೇಮಾ ಕುಂತ ಕೇಳರಿ ಸುಮ್ಮಾ
ಏರು ತಿಳಿಸುವೆ ಸೊಲ್ಪಾ ಅಲ್ಪಾ ಕಂದಾ
ತಪ್ಪ ಆದರ ನಂದಾ ಕ್ಷಮಿಸಬೇಕರಿ ಇಂದಾ
ಚಂದದಿಂದ ಪ್ರೀತಿಲಿಂದಾ ನಾನು ಓದುವೆ ಕಲ್ಮಾ
ಕುಂತ ಕೇಳಿರಿ ಸುಮ್ಮಾ.'[೫೧] ಈ ಪದದಲ್ಲಿ ಜನರನ್ನು ಬೇಡುವ ಆರ್ದತೆ ಇದೆ. ಇದರಲ್ಲಿನ ಸರಳವಾದ ಭಾಷಾ ಶೈಲಿಯು ಜನಪದರನ್ನು ಆಕರ್ಷಿಸುತ್ತದೆ. ಹಾಡುಗಾರನು ತನ್ನ ತಪ್ಪಿನ ಅರಿವನ್ನು ಮೌಲ್ಯಮಾಪನ ಮಾಡದೇ ಮನ್ನಿಸಬೇಕೆನ್ನುವ ಬೇಡಿಕೆಯು ಇಲ್ಲಿ ಇಲ್ಲಿದೆ.

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ನಡೆಯುವ ಮೊಹರಂಗಳು ಅನನ್ಯವಾಗಿವೆ. ಮುಸ್ಲೀಂ ಹಬ್ಬವಾದರೂ ಪಾಲ್ಗೊಳ್ಳುವವರಲ್ಲಿ ಮೂಕ್ಕಾಲು ಭಾಗ ಮುಸ್ಲೀಮೇತರರೆ ಹೆಚ್ಚು. ಹರಕೆ ಹೊತ್ತ ಹಿಂದೂ-ಮುಸ್ಲೀಮರು ಹುಲಿವೇಶ, ಅಳ್ಳಿಬುವ್ವಾ ವೇಶ ಹಾಕಿ ಕುಣಿದು ಸಂಭ್ರಮಿಸುತ್ತಾರೆ. ದೀರ್ಘದಂಡ ನಮಸ್ಕಾರ ಹಾಕುವುದರ ಮೂಲಕ, ಕಂದೂರಿ ಮಾಡಿ ಎಡೆನೀಡುವ ಮೂಲಕ ಜನ ತಮ್ಮ ಹರಕೆಯನ್ನು ತೀರಿಸಿ ನೆಮ್ಮದಿ ಹೊಂದುತ್ತಾರೆ. ಅನೇಕ ಹಳ್ಳಿಗಳಲ್ಲಿ ಮುಸ್ಲಿಮ್ ಕುಟುಂಬಗಳು ಇರುವುದಿಲ್ಲ. ಆದರೂ ಮೊಹರಂ ಹಬ್ಬವು ಸಂಭ್ರಮದಿಂದ ನಡೆಯುತ್ತವೆ. ಕೊಪ್ಪಳದ ಕುದುರೆಮೋತಿ, ರಾಯಚೂರಿನ ಮುದಗಲ್ಲು, ಬೀದರ್, ಗುಲಬರ್ಗಾ, ಈ ಎಲ್ಲ ಜಿಲ್ಲೆಗಳಲ್ಲಿ ಈ ಹಬ್ಬಗಳು ಮುಸ್ಲಿಮೇತರರು ಪಾಲ್ಗೊಳ್ಳುವುದರಿಂದಲೇ ಬೃಹತ್ ಪ್ರಮಾಣದಲ್ಲಿ ನಡೆಯುತ್ತವೆ. ಕುದುರೆಮೋತಿ ಊರಿನಲ್ಲಿ ಮೊಹರಂ ನಡೆಯುವ ಸಂದರ್ಭದಲ್ಲಿ ಊರಿನ ಯಾರ ಮನೆಯಲ್ಲಿ ಯಾವ ಊರಿನ ಅತಿಥಿಗಳೂ ಹೋಗಿ ಆಶ್ರಯ ಪಡೆದು ಮೊಹರಂನಲ್ಲಿ ಪಾಲ್ಗೊಳ್ಳಬಹುದೆಂಬ ಸಂಪ್ರದಾಯವಿದೆ. ಅನೇಕ ಬುಡಕಟ್ಟಿನ ಜನ ಈ ಊರಿನ ಮೊಹರಂಗೆ ತಪ್ಪದೇ ಬರುತ್ತಾರೆ. ಮೊಹರಂ ಮುಗಿಸಿಕೊಂಡು ಈ ಬುಡಕಟ್ಟಿನವರೆಲ್ಲ ಒಂದೆಡೆ ಸೇರಿ ತಮ್ಮ ನಡುವಿನ ಜಗಳಗಳನ್ನು 'ನ್ಯಾಯಕಟ್ಟೆ'ಯಲ್ಲಿ ಬಗೆ ಹರಿಸಿಕೊಂಡು, ವಧೂವರರನ್ನು ಹುಡುಕಿ ಹೊಸ ಸಂಬಂಧಗಳನ್ನು ಹುಡುಕಿಕೊಂಡು ಹೋಗುತ್ತಾರೆ. ಈ

ಸಂಸ್ಕೃತಿ ಇನ್ನೂ ಜೀವಂತವಾಗಿದೆ. ಹೀಗೆ ಹಿಂದೂ-ಮುಸ್ಲೀಮರಲ್ಲಿ ಭಾವೈಕ್ಯತೆಯ ಕೊಂಡಿಯಾಗಿ ಕಾಣುವ ಈ ಮೊಹರಂ ಪದಗಳು ಧಾರ್ಮಿಕ, ನೀತಿಪರ ತತ್ವಗಳನ್ನು ನಿರೂಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತ ಬಂದಿವೆ.

ಒಟ್ಟಾರೆಯಾಗಿ ಮೌಖಿಕ ಸಾಹಿತ್ಯದ ಪ್ರಕಾರಗಳಾದ ಸಣ್ಣಾಟ, ಬುಲಾಯಿಹಾಡು, ಲಾವಣಿ, ತತ್ವಪದ, ಮೊಹರಂ ಪದಗಳು ಜನಪದರ ಸಮಸ್ಯೆಗಳಿಗೆ ಸ್ಪಂದಿಸುತ್ತ ಬಂದಿವೆ. ಅವು ಜನರಿಗೆ ನೌತಿಕವಾಗಿ ಬದುಕುವ ದಾರಿಯನ್ನು ತೋರಿಸಿವೆ. ಅನುಭಾವ ಪರಂಪರೆಯಿಂದ ಬಂದ ತತ್ವಪದಕಾರರು ಈ ಪ್ರದೇಶದಲ್ಲಿ ಹುಟ್ಟಿ ಮೌಖಿಕ ಪರಂಪರೆಯನ್ನು ಶ್ರೀಮಂತಗೊಳಿಸಿದ್ದಾರೆ. ಅಂದಿನ ಕಾಲಘಟ್ಟದ ಪ್ರಭುತ್ವದ ದಾಹ, ಪುರೋಹಿತಶಾಹಿಗಳ ನಡವಳಿಕೆ, ಮೂಲಭೂತವಾದ ಮತ್ತು ಸಾಮಾಜಿಕ ನಡವಳಿಕೆಗಳನ್ನು ರೂಪಕಗಳ ಮೂಲಕ ಹಿಡಿದಿಡಲು ಪ್ರಯತ್ನಿಸಿದ್ದಾರೆ. ಆ ಮೂಲಕ ಸಮಾಜವನ್ನು ನೈತಿಕವಾಗಿ ಶುದ್ಧವಾಗಿರುವಂತೆ ಮಾಡಿದ್ದಾರೆ. ಸಮಾಜದಲ್ಲಿನ ಅನೇಕ ಘಟನೆಗಳನ್ನು, ವಸ್ತುವನ್ನಾಗಿಸಿಕೊಂಡು ಅವುಗಳಲ್ಲಿನ ಲೋಪದೋಶಗಳನ್ನು ಸರಿಪಡಿಸಲು ತತ್ವಪದಕಾರರು ಪ್ರಯತ್ನಿಸಿದ್ದಾರೆ. ಸಮಾಜದ ಸ್ವಾಸ್ತ್ಯವನ್ನು ಕಾಪಾಡುವ ಅವರ ಅನುಭಾವದ ನುಡಿಗಳು ಎಂದಿಗೂ ಸ್ಮರಣೀಯವಾಗಿ ಕಾಣುತ್ತವೆ.

**ಕೊನೆ ಟಿಪ್ಪಣಿಗಳು**

೧. ಚೆನ್ನಣ್ಣ ವಾಲೀಕಾರ (ಸಂ), ಸಣ್ಣಾಟಗಳು, ಪು-೭-೮.
೨. ಅದೇ, ಪು-೧೧.
೩. ಅದೇ, ಪು-೫೧.
೪. ಜಗನ್ನಾಥ ಹೆಬ್ಬಾಳೆ (ಸಂ), ಬುಲಾಯಿ ಹಾಡುಗಳು, ಪು-೮.
೫. ಜಗನ್ನಾಥ ಹೆಬ್ಬಾಳೆ, ಬೀದರ್ ಜಿಲ್ಲೆಯ ಬುಲಾಯಿ ಹಾಡುಗಳು, ಪು-೫೯-೬೦.
೬. ಅದೇ, ಪು.೧೧೩
೭. ಹರಿಶ್ಚಂದ್ರ ದಿಗ್ಸಂಗಿಕರ್, ಲಾವಣಿ ಸವಾಲ್-ಜವಾಬ್ ಪದಗಳು, ಪು-೩.
೮. ಅದೇ, ಪು-೨.
೯. ಅಲ್ಲಮಪ್ರಭು ಬೆಟ್ಟದೂರು, ಎಚ್.ಎಸ್ ಪಾಟೀಲ್ (ಸಂ), ವಿಮೋಚನೆ-೭.
೧೦. ಶ್ರೀಕಂಠ ಕೂಡಿಗೆ, ಕನ್ನಡ ಲಾವಣಿಗಳು, ಪು-೨೯೩.
೧೧. ಅಲ್ಲಮಪ್ರಭು ಬೆಟ್ಟದೂರು, ಎಚ್.ಎಸ್ ಪಾಟೀಲ್(ಸಂ), ವಿಮೋಚನೆ-೨೭.
೧೨. ನಲವಡಿ ಕೃಷ್ಣಶಾಸ್ತ್ರಿ, ಹೈದರಾಬಾದ ರಜಾಕಾರ ಲಾವಣಿ, ಪು-೫ ಮತ್ತು ೧೧.
೧೩. ವಿವಿಧ ಲೇಖಕರು, (ಬರಗೂರು ರಾಮಚಂದ್ರಪ್ಪ, ಪ್ರ, ಸಂ), ಕನ್ನಡ ತತ್ವಪದಕಾರರು, ಪು-೩.
೧೪. ರಾಮಸ್ವಾಮಿ ನುಲಿ(ಸಂ), ಗಬ್ಬೂರು ಹಂಪಣ್ಣ, ಪು-೪೭.
೧೫. ವ್ಹಿ.ಜಿ. ಪೂಜಾರ (ಸಂ), ರಾಮಪುರ ಬಕ್ಕಪ್ಪನ ಸ್ವರವಚನ ತ್ರಿವಿಧಿ, ಪು-೯
೧೬. ಬಸವರಾಜ ಸಬರದ (ಸಂ), ಹೈದರಾಬಾದ ಕರ್ನಾಟಕ ತತ್ವಪದಗಳು, ಪು-೭೦-೭೧.
೧೭. ಗೀತಾ ನಾಗಭೂಷಣ (ಸಂ), ಖೇಮಣ್ಣ, ಪು-೧೭.
೧೮. ವ್ಹಿ.ಜಿ. ಪೂಜಾರ (ಸಂ), ರಾಮಪುರ ಬಕ್ಕಪ್ಪನ ಸ್ವರವಚನ ತ್ರಿವಿಧಿ, ಪು-೧೧.
೧೯. ಗೀತಾ ನಾಗಭೂಷಣ (ಸಂ), ಖೇಮಣ್ಣ, ಪು-೨೭-೨೮.

೨೦. ಎಸ್.ಜಿ. ಸ್ವಾಮಿ (ಸಂ), ಕಡಲೂರು ಬಸವಲಿಂಗಪ್ಪ, ಪು-೧೨.
೨೧. ಮೀನಾಕ್ಷಿ ಬಾಳಿ (ಸಂ), ಖೈನೂರು ಕೃಷ್ಣಪ್ಪ, ಪು-೩೩.
೨೨. ಗುರುಬಸವಯ್ಯ ಅಮ್ಮಾಪುರ (ಸಂ), ನೀರಲಕೇರಿ ಬಸವಲಿಂಗ, ಪು-೧೧.
೨೩. ಎಸ್.ಜಿ. ಸ್ವಾಮಿ (ಸಂ), ಕಡಲೂರು ಬಸವಲಿಂಗಪ್ಪ, ಪು-೨೧.
೨೪. ಬಸವರಾಜ ಸಬರದ (ಸಂ), ಹೈದರಾಬಾದ ಕರ್ನಾಟಕ ತತ್ವಪದಗಳು, ಪು-೯.
೨೫. ಗೀತಾ ನಾಗಭೂಷಣ (ಸಂ), ಖೇಮಣ್ಣ, ಪು ೨೫-೨೬.
೨೬. ಅಮರೇಶ ನುಗಡೋಣಿ ನುಡಿವ ಬೆಡಗು, ಪು-೪೫.
೨೭ ಬಸವರಾಜ ಸಬರದ (ಸಂ), ಹೈದರಾಬಾದ ಕರ್ನಾಟಕ ತತ್ವಪದಗಳು, ಪು-೧೯.
೨೮. ಸ. ರಘುನಾಥ (ಸಂ), ಕೈವಾರ ನಾರಾಯಣ, ಪು-೧೩.
೨೯. ಬಸವರಾಜ ಸಬರದ (ಸಂ), ಹೈದರಾಬಾದ ಕರ್ನಾಟಕ ತತ್ವಪದಗಳು, ಪು-೧೯೫.
೩೦. ಅದೇ, ಪು-೧೯.
೩೧. ಅಮರೇಶ ನುಗಡೋಣಿ, ನುಡಿವ ಬೆಡಗು, ಪು-೪೮.
೩೨. ಭಾಸ್ಕರ್ ಟಿ.ಎಂ, ಆಯ್ದ ತತ್ವಪದಗಳು, ಪು-೧೦೧.
೩೩. ಶಾಂತರಸ (ಪ್ರ ಸಂ) ಓ.ಎಲ್ ನಾಗಭೂಷಣಸ್ವಾಮಿ (ಸಂ), ತತ್ವಪ್ರತಿಗಳು, ಪು-೩೩೬.
೩೪. ಅಮರೇಶ ನುಗಡೋಣಿ, ನುಡಿವ ಬೆಡಗು, ಪು-೫೫.
೩೫. ಕಾಳೇಗೌಡ ನಾಗವಾರ, ಆನಂದಮೂರ್ತಿ ಜಿ.ವಿ. (ಸಂ), ಹಲವು ತೋಟದ ಹೂಗಳು, ಪು-೧೫೫.
೩೬. ಮಲ್ಲಿಕಾರ್ಜುನ ಶಿ. ಲಠ್ಠೆ (ಸಂ), ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು, ಪು-೧೦೨-೧೦೩.
೩೭. ಎಸ್.ಜಿ. ಸ್ವಾಮಿ (ಸಂ), ಕಡಲೂರು ಬಸವಲಿಂಗಪ್ಪ, ಪು-೫೮.
೩೮. ಬಿ. ಮಹಾದೇವಪ್ಪ (ಸಂ), ಮೋಟ್ನಳ್ಳಿ ಹಸನಸಾಹೇಬ, ಪು-೩೬.
೩೯. ಅದೇ, ಪು-೨೭-೨೮.
೪೦. ಅಮರೇಶ ನುಗಡೋಣಿ, ನುಡಿವ ಬೆಡಗು, ಪು-೬೨.
೪೧. ಬಸವರಾಜ ಸಬರದ (ಸಂ), ಹೈದರಾಬಾದ ಕರ್ನಾಟಕ ತತ್ವಪದಗಳು, ಪು-೨೨೩
೪೨. ಅಮರೇಶ ನುಗಡೋಣಿ, ನುಡಿವ ಬೆಡಗು, ಪು-೬೪.
೪೩. ಅದೇ ಪು-೬೩.
೪೪. ಬಸವರಾಜ ಸಬರದ (ಸಂ), ಹೈದರಾಬಾದ ಕರ್ನಾಟಕ ತತ್ವಪದಗಳು, ಪು-೨೦೬.
೪೫. ಮೀನಾಕ್ಷಿ ಬಾಳಿ, ಕಡಕೋಳ ಮಡಿವಾಳಪ್ಪನ ಶಿಷ್ಯರ ತತ್ವಪದಗಳು, ಪು ೯೨.
೪೬ ಚನ್ನಬಸವಪ್ಪ ಬೆಟ್ಟದೂರು (ಸಂ), ಘನಮಠದ ನಾಗಭೂಷಣ ಶಿವಯೋಗಿ, ಪು-೧.
೪೭. ಬಿ. ಮಹಾದೇವಪ್ಪ (ಸಂ), ಮೋಟ್ನಳ್ಳಿ ಹಸನಸಾಹೇಬ, ಪು-೩೭.
೪೮. ಎಸ್.ಜಿ. ಸ್ವಾಮಿ (ಸಂ), ಕಡಲೂರು ಬಸವಲಿಂಗಪ್ಪ, ಪು-೫೭.
೪೯. ಮಲ್ಲಿಕಾರ್ಜುನ ಶಿ. ಲಠ್ಠೆ (ಸಂ), ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು, ಪು-೭೧.
೫೦. ಚೆನ್ನಣ್ಣ ವಾಲೀಕಾರ, ಜಾನಪದ ಲೋಕ, ಪು-೭೧.
೫೧. ದಸ್ತಗಿರಿ ಅಲ್ಲೀಭಾಯಿ, ಮೊಹರಂ ಪದಗಳು, ಪು-೭೧.

ಅಧ್ಯಾಯ ೬

# ಆಧುನಿಕ ಕಾವ್ಯ : ವಸ್ತು, ಭಾಷೆ, ಪ್ರಭಾವ ಮತ್ತು ಪ್ರೇರಣೆ

೬.೧. ಪುರೋಹಿತ, ಬಂಡವಾಳಶಾಹಿ ವಿರುದ್ಧ

೬.೨. ಸ್ತ್ರೀ ಸ್ವಾತಂತ್ರ್ಯ

೬.೩. ಕಾವ್ಯದಲ್ಲಿ ಮಹಾಪುರುಷರ ನೆನಪು

## ಅಧ್ಯಾಯ ೬

# ಆಧುನಿಕ ಕಾವ್ಯ : ವಸ್ತು, ಭಾಷೆ, ಪ್ರಭಾವ ಮತ್ತು ಪ್ರೇರಣೆ

ಹೈದರಾಬಾದ್ ಕರ್ನಾಟಕ ಪ್ರದೇಶದ ಕನ್ನಡ ಭಾಷೆ ಮತ್ತು ಸಾಹಿತ್ಯಾಭಿಮಾನಿಗಳಿಗೆ ಎರಡು ಕಾರಣಗಳಿಂದ ಬಿ.ಎಂ.ಶ್ರೀ ಮುಖ್ಯರಾಗಿದ್ದಾರೆ. ಒಂದು ಕನ್ನಡ ಸಂಸ್ಕೃತಿಯ ಬಗ್ಗೆ ಸ್ವಾಭಿಮಾನದಿಂದ ಮಾತಾಡುವ ಮತ್ತು ಅದನ್ನು ಕಟ್ಟುವ ಕಾರಣಕ್ಕೆ. ಇನ್ನೊಂದು ನವೋದಯ ಕಾವ್ಯದ ಹರಿಕಾರರು ಆದುದಕ್ಕೆ. ಸ್ವಾತಂತ್ರ್ಯಪೂರ್ವದ ಈ ಪ್ರಾಂತ್ಯದಲ್ಲಿ ಗದ್ಯ ಬರವಣಿಗೆ ಅಷ್ಟಾಗಿ ಇರಲಿಲ್ಲ. ಹೇರಳವಾಗಿ ತತ್ವಪದ ಸಾಹಿತ್ಯ ಬಾಯಿ ಮಾತಿನಲ್ಲಿ, ತಕ್ಕಮಟ್ಟಿಗೆ ಕಾವ್ಯ ರೂಪವೂ ಇತ್ತು. ಕಾವ್ಯ ಪ್ರಕಾರ ಎಷ್ಟು ಜನಪ್ರಿಯವಾಗಿತ್ತೆಂದರೆ 'ಮೊಗ್ಗಿನ ಮಾಲೆ' ಕವನ ಸಂಕಲನದ 'ಓಂ' (ಪ್ರಸ್ತಾವನೆ) ಭಾಗ ಕಾವ್ಯ ರೂಪದಲ್ಲಿದೆ. 'ಅರ್ಪಣೆ' ಕಾವ್ಯ ರೂಪದಲ್ಲಿದೆ. ಬಿ.ಎಂ.ಶ್ರೀ. ಅವರು ಈ ಕೃತಿಗೆ ಮುನ್ನುಡಿಯನ್ನು ಕಾವ್ಯದಲ್ಲಿ ಬರೆದಿದ್ದಾರೆ. 'ಸ್ವಾಗತ' ಕೂಡ ಕಾವ್ಯದಲ್ಲಿದೆ. ಕಾವ್ಯ ಹಲವು ಕ್ರಿಯೆಗಳಲ್ಲಿ ಕಾಣಿಸಿರುವುದನ್ನು ನೋಡಿದರೆ ಸಾಹಿತಿಗಳಿಗೆ ಕನ್ನಡ ಭಾಷೆ ಮತ್ತು ಕಾವ್ಯ ಬದುಕಿನ ಭಾಗವಾಗಿತ್ತು ಎಂಬುದು ತಿಳಿಯುತ್ತದೆ. ೧೯೨೧ರಲ್ಲಿ ಬಿ.ಎಂ.ಶ್ರೀ ಅವರು 'ಇಂಗ್ಲೀಶ್ ಗೀತಗಳು' ಪ್ರಕಟಿಸುವುದರ ಮೂಲಕ ಕನ್ನಡ ಸಾಹಿತ್ಯದಲ್ಲಿ ಹೊಸಗನ್ನಡ ಸಾಹಿತ್ಯಕ್ಕೆ ಅದರಲ್ಲೂ ನವೋದಯ ಕಾವ್ಯಕ್ಕೆ ದಾರಿ ತೆರೆದರು. ಉರ್ದು ಪರಿಸರದ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ತಡವಾಗಿಯಾದರೂ 'ಇಂಗ್ಲೀಶ್ ಗೀತಗಳು' ಕೃತಿಯಿಂದ ಸ್ಫೂರ್ತಿ ಪಡೆದು ಕಾವ್ಯ ರಚನೆಯಾಗತೊಡಗಿತು. 'ಮೊಗ್ಗಿನ ಮಾಲೆ' ಎಂಬ ಕವನ ಸಂಕಲನ ೧೯೩೭ರಲ್ಲಿ ಹೊರ ಬಂದಿತು. ಹೈದರಾಬಾದಿನ ತರುಣರ ತಂಡ ಈ ಸಂಕಲನವನ್ನು ಪ್ರಕಟಿಸಿದೆ. 'ಹೈದರಾಬಾದ್ ಕರ್ನಾಟಕ' ಪ್ರದೇಶದ ವಿದ್ಯಾರ್ಥಿಗಳೆಲ್ಲ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಹೈದರಾಬಾದ್ ನಗರಕ್ಕೆ ಹೋಗಬೇಕಾಗಿತ್ತು. ಅಲ್ಲಿ ಉರ್ದು, ಇಂಗ್ಲೀಶ್‌ನಲ್ಲಿ

ವಿದ್ಯಾಭ್ಯಾಸ ಮಾಡಿದರೂ ಸಹ ಕನ್ನಡದಲ್ಲಿ ಕಲಿಸುವ ಅದರ ಬಗೆಗೆ ಜಾಗೃತಿ ಮೂಡಿಸುವ ಸಾಹಿತ್ಯ ಚಟುವಟಿಕೆಗಳನ್ನು ನಡೆಸುವ ಕೆಲಸವನ್ನು ಕೆಲ ಸ್ವಾಭಿಮಾನಿ ಕನ್ನಡಿಗರು ಮಾಡುತ್ತಿದ್ದರು. ಉರ್ದು ಪರಿಸರದಲ್ಲಿ ಕನ್ನಡ ಸಾಹಿತ್ಯ ಚಟುವಟಿಕೆಗಳನ್ನು ಉತ್ಸಾಹದಿಂದ ಸ್ವಾಭಿಮಾನದಿಂದ ಮಾಡಲು ಹೋರಾಟ ನಡೆಸಬೇಕಾಗಿತ್ತು. ಹಾಗೆಯೇ ಹೈದರಾಬಾದ್ ಕರ್ನಾಟಕವನ್ನು ನಿಜಾಮನ ಆಳ್ವಿಕೆಯಿಂದ ಮುಕ್ತಿಗೊಳಿಸಿ, ಸ್ವತಂತ್ರ ಭಾರತದಲ್ಲಿ ವಿಲೀನಗೊಳಿಸಲು ಹೋರಾಟ ನಡೆಸಬೇಕಾಗಿತ್ತು. ಈ ಎರಡು ಚಟುವಟಿಕೆಗಳನ್ನು ಈ ಪ್ರದೇಶದ ಕನ್ನಡ ವಿದ್ಯಾರ್ಥಿಗಳು ಮಾಡುವುದು ಅನಿವಾರ್ಯವಾಗಿತ್ತು.

೧೯ನೇ ಶತಮಾನದ ಪ್ರಾರಂಭದ ದಶಕದಲ್ಲಿ ಈ ಪ್ರದೇಶದ ವಿದ್ಯಾರ್ಥಿಗಳು ತಮ್ಮ ಸಾಹಿತ್ಯ ಚಟುವಟಿಕೆಗಳನ್ನು ಪ್ರಾರಂಭಿಸಿದ್ದು ಹೈದರಾಬಾದ್ ನಗರದಲ್ಲಿಯೇ. ಕನ್ನಡ ಸಾಂಸ್ಕೃತಿಕ ಕೇಂದ್ರವಾಗಿ ಹೈದರಾಬಾದ್ ನಗರ ಪರಿಣಮಿಸಿತ್ತು. ಹೈದರಾಬಾದಿನಲ್ಲಿದ್ದ ತರುಣ ತಂಡದವರೆಲ್ಲ ಈ ಪ್ರದೇಶದ ವಿದ್ಯಾರ್ಥಿಗಳೇ. ಹೆಚ್ಚಾಗಿ ಬ್ರಾಹ್ಮಣರು ಇದ್ದರು. 'ಮೊಗ್ಗಿನ ಮಾಲೆ' ಸಂಕಲನದಲ್ಲಿನ ಕವನಗಳ ಮೇಲೆ 'ಇಂಗ್ಲೀಶ್ ಗೀತಗಳು' ಪ್ರಭಾವವಿದೆ. ಅದರಲ್ಲಿ ನವೋದಯ ಕಾವ್ಯದ ಆಶಯಗಳಾದ ಆದರ್ಶ, ಕನಸು, ಆತ್ಮನಿವೇದನೆ, ಉದಾರವಾದಿ ನಿಲುವು, ಪ್ರಕೃತಿಯ ಆರಾಧನೆ ಎಲ್ಲ ಅಂಶಗಳಿವೆ. 'ಮೊಗ್ಗಿನ ಮಾಲೆ' ಎಂಬ ಶೀರ್ಷಿಕೆಯೇ ಸೂಚಿಸುವಂತೆ ಈ ಕವನಗಳು ಈ ಕವಿಗಳ ಪ್ರಾರಂಭದ ಪ್ರಯತ್ನಗಳಾಗಿವೆ. ಜೆ.ಕೆ.ಪಿ., ರಾಘವೇಂದ್ರಾಚಾರ್ಯ, ಮಲಕ ಸಮುದ್ರಸ್ವಾಮಿ, ವೆಂಕಟೇಶ, ಶಿ.ಭಾ., ಅ.ಕೃ.ಕಟ್ಟಿ, ಹ.ಕೃ. ಕಮತಗಿ, ಮಾನ್ವಿ ನರಸಿಂಗರಾಯ, ಜಾಗೀರದಾರ, ನಾಡಿಗ ಇವರ ಕವಿತೆಗಳಿವೆ. ಇವರಲ್ಲಿ ಯಾರೂ ಈ ಭಾಗದಿಂದ ಹೆಚ್ಚಿನ ಕಾವ್ಯಕೃಷಿ ಮಾಡಿದ್ದು ಕಾಣುವುದಿಲ್ಲ. ಸ್ವತಂತ್ರ ಕೃತಿಗಳೂ ಹೊರ ಬಂದದ್ದು ತೀರಾ ಕಡಿಮೆ. ಆದರೆ ಇವರೆಲ್ಲ ಮುಂದಿನ ಕವಿಗಳಿಗೆ ಸ್ಫೂರ್ತಿ, ಮಾರ್ಗದರ್ಶನ ಮಾಡಿರುವುದು ಕಂಡುಬರುತ್ತದೆ.

ಮುತ್ತುಗಾರ ರಂಗಸ್ವಾಮಿ ಮಾತ್ರ ಮುತ್ತುಗಾರ(೧೯೩೭) ಎಂಬ ಕವಿ ಸ್ವತಂತ್ರ ಸಂಕಲನವನ್ನು ತಂದಿದ್ದಾರೆ. ಅದು ಹೆಚ್ಚಾಗಿ ಮಕ್ಕಳ ಸಾಹಿತ್ಯದ ಕವಿತೆಗಳನ್ನು ಒಳಗೊಂಡಿದೆ. ತಮ್ಮ ವಿದ್ಯಾರ್ಥಿ ಜೀವನದಲ್ಲಿ ಕವನಗಳನ್ನು ಬರೆದಂತೆ ಕಾಣುವ ಸ್ವಾಮಿ ಅವರು ಸ್ವಸಂತೋಷಕ್ಕಾಗಿ ಬರೆದಂತೆ ಕಾಣುತ್ತದೆ. ಚಿಕ್ಕಮಕ್ಕಳ ಮನಸ್ಸಿಗೆ ಹಿತವೆನಿಸುವ ಇವರ ಕವಿತೆಗಳು ನಯವಾದ ಹಾಸ್ಯವನ್ನು ಒಳಗೊಂಡಿವೆ. ಶಾಲೆ, ತಾಯಿಯ ಮಮತೆ, ಆಟದ ಬಯಲು, ಬೀದಿ ಬೀದಿಗಳಲ್ಲಿ ಅಲೆಯುವಿಕೆ, ಊಟ, ಪಕ್ಷಿಗಳ ಜೊತೆ ಆಟವಾಡಲು ಬಯಸುವುದು ಇತ್ಯಾದಿ ನೆಲೆಗಳಲ್ಲಿ ಅಲ್ಲಿನ ಕವಿತೆಗಳು ವಿವಿಧ ಆಯಾಮಗಳನ್ನು ಪಡೆದಿವೆ. ಮಗು ತಾಯಿಯನ್ನು ಪ್ರಶ್ನಿಸುವ ಕವನವೊಂದು ಇಂತಿದೆ.

'ಹುಚ್ಚನೇಕೆ ನಾ ಪೇಳಮ್ಮ
ಪೇಳದೆ ಮುತ್ತಿಡಬೇಕಮ್ಮ
ಅಪ್ಪನು ಸೇದುವ ಬತ್ತಿಗಳೆಲ್ಲವ

ಮರಿದು ಹಾಕಿದರೆ ಹೊಡೆಯುವನು.
ಅದರ ಹೊಗೆಯು ನಿನ ಮೊಗದಲಿ ತೂರುತ
ನಸುನಗೆಯಿಂದಲಿ ನಿಲ್ಲುವನು
ಬತ್ತಿಯ ಸೇದುವ ದೊಳ್ಳೆಯದೆ
ಮುರಿದೊಗೆವುದೆ ಪೇಳೊಳ್ಳೆಯದೆ.'[೧] (ರಂಗಸ್ವಾಮಿ : ಹುಚ್ಚು ಹುಡುಗ) ಈ ಕವಿತೆಯಲ್ಲಿ ಮಕ್ಕಳ ಮುಗ್ಧತೆಯು ಹಿರಿಯರನ್ನು ಚಿಂತಿಸಲು ಹಚ್ಚಿದೆ. ಅನೇಕ ಪ್ರಶ್ನೆಗಳನ್ನು ಕೇಳುವ ಮಕ್ಕಳನ್ನು ಸಮಾಜ ಅವರಿಗೆ ಸರಿಯಾಗಿ ಉತ್ತರಿಸದೇ ಹುಚ್ಚ ಎಂದು ಬಿಂಬಿಸುತ್ತದೆ. ಇಲ್ಲಿಯೂ ಅದೇ ರೀತಿಯಾಗಿದೆ. ಮಕ್ಕಳ ಅನೇಕ ಕಾರ್ಯ ಕ್ಷೇತ್ರಗಳನ್ನು ಆವರಿಸಿದ ಕವಿತೆಗಳಿಂದ ಕನ್ನಡಪ ಪ್ರಸಾರ ಪ್ರಚಾರ ಸಾಧ್ಯ ಎಂದು ರಂಗಸ್ವಾಮಿ ಅವರು ನಂಬಿದ್ದಾರೆ. ಪ್ರಸ್ತಾವನೆ ಭಾಗದಲ್ಲಿ ಅವರು 'ಕನ್ನಡ ಭಾಷಾ ಪ್ರಚಾರವು ಹೆಚ್ಚಾಗಬೇಕಾದರೆ ಬಾಲಕರ ಮನಸ್ಸನ್ನಾಕರ್ಷಿಸುವ ಕವನಗಳನ್ನು ರಚಿಸುವುದು ಅವಶ್ಯ.'[೨] ಎಂದು ಹೇಳುತ್ತಾರೆ. ಇಲ್ಲಿ ಕವಿ ನವೋದಯ ಸಂದರ್ಭದ ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಕನ್ನಡದ ಅವಸ್ಥೆಯನ್ನು ಸುಧಾರಿಸಲು ಮಕ್ಕಳನ್ನು ಕೇಂದ್ರೀಕರಿಸಿದಂತಿದೆ. ಬೆಳೆಯುವ ಮಕ್ಕಳು ಒಂದೇ ಅವಧಿಯಲ್ಲಿ ಹಲವಾರು ಭಾಷೆಗಳನ್ನು ಕಲಿಯಬಲ್ಲರು. ಅವುಗಳ ಕಲಿಕೆಯಲ್ಲಿ ಮಕ್ಕಳಿಗೆ ಆನಂದ ಹಾಸ್ಯ ಬರುವಂತೆ ಅವರ ಮನಸ್ಸನ್ನು ಆಕರ್ಷಿಸುವ ಅನಿವಾರ್ಯತೆ ಇದೆ ಎಂದು ಕವಿ ಮಕ್ಕಳ ಕವಿತೆಗಳನ್ನು ಬರೆದಿರುವುದಕ್ಕೆ ಕಾರಣವನ್ನು ನೀಡುತ್ತಾರೆ.

ಮೂವ್ವತ್ತರ ದಶಕದಲ್ಲಿ ಈ ಪ್ರದೇಶವನ್ನು ಸಾಹಿತ್ಯಾಭಿಮಾನಿ ವಿದ್ಯಾರ್ಥಿಗಳು ಹೈದರಾಬಾದ್ ನಗರವನ್ನು ಸಾಂಸ್ಕೃತಿಕ ಕೇಂದ್ರವನ್ನಾಗಿ ಮಾಡಿಕೊಂಡು ಹಲವು ರೀತಿಯಲ್ಲಿ ಸಾಹಿತ್ಯ ಚಟುವಟಿಕೆಗಳನ್ನು ನಡೆಸುತ್ತಿದ್ದರು. ನಲವತ್ತರ ದಶಕದಲ್ಲಿ ಲಿಂಗಾಯತರೇ ಹೆಚ್ಚಾಗಿದ್ದ 'ಸಂಗಡಿಗರ ಸಮಿತಿ' (ರಾಯಚೂರು) 'ಮುಸುಕು ತೆರೆ' (೧೯೪೭) ಎಂಬ ಸಂಕೀರ್ಣ ಕೃತಿಯನ್ನು ಹೊರ ತರುವುದರ ಮೂಲಕ ರಾಯಚೂರು ನಗರವನ್ನು ಸಾಂಸ್ಕೃತಿಕ ಕೇಂದ್ರವನ್ನಾಗಿ ರೂಪಿಸಿತು. ಸ್ವಾತಂತ್ರ್ಯಪೂರ್ವದಲ್ಲಿಯೇ ಶಾಂತರಸರ ಸಂಪಾದಕತ್ವದಲ್ಲಿ 'ಮುಸುಕು ತೆರೆ' ಹೊರಬಂದಿತು. ಕಾವ್ಯಾನಂದ, ಕಲಾನಂದ, ಅಮರಾನಂದ, ಶಾಂತರಸ, ಶಿವಲೆಂಕ, ಎಂ.ಶಿವಯ್ಯ, ವಿ.ಎಂ.ಗುಂಡಾರಾಧ್ಯ, ಮಲ್ಲಿಕಾರ್ಜುನ ಮಸ್ಕಿ ಇವರ ಕವಿತೆಗಳು ಈ ಕೃತಿಯಲ್ಲಿವೆ. ಕವನ, ಕಥೆ, ಅನುವಾದ, ಹರಟೆ ಬೇರೆ ಬೇರೆ ಪ್ರಕಾರಗಳು ಇದರಲ್ಲಿವೆ. ಇವರೆಲ್ಲರೂ ಕೂಡ ಹೈದರಾಬಾದ್ ನಗರದಲ್ಲಿ ನಡೆಯುತ್ತಿದ್ದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಿದವರು. ಅದರ ಸ್ವರೂಪವನ್ನು ಬಲ್ಲವರಾಗಿದ್ದವರು. 'ಮೊಗ್ಗಿನ ಮಾಲೆ' ಕೃತಿಯ ಕವಿತೆಗಳನ್ನು ಗಮನಿಸಿದಾಗ, ಅವು ಕೇವಲ ನವೋದಯ ಸಾಹಿತ್ಯದ ಆಶಯಗಳಿಗೆ ಮಾತ್ರ ಸೀಮಿತವಾಗಿರುವುದು ಕಂಡು ಬರುತ್ತದೆ. ಅಂದರೆ ಆದರ್ಶ, ರಾಷ್ಟ್ರಪ್ರೇಮ, ಕನಸು, ಪ್ರಕೃತಿ ಆರಾಧನೆ ಮುಂತಾದ ಭಾವನೆಗಳ ಅಭಿವ್ಯಕ್ತಿ ಆ ಕವಿತೆಗಳಲ್ಲಿ ಇತ್ತು. ಹೈದರಾಬಾದ್ ಕರ್ನಾಟಕ ಪ್ರದೇಶದ ತಲ್ಲಣಗಳಿಗೆ ಕಾವ್ಯದಲ್ಲಿ

ಸ್ಥಾನವಿರಲಿಲ್ಲ. ಆದರೆ 'ಮುಸುಕು ತೆರೆ' ಕೃತಿಯ ಕವನಗಳಲ್ಲಿ ನವೋದಯ ಕಾವ್ಯದ ರೂಪ, ಶೈಲಿಯ ಒಡಲೊಳಗೆ ಈ ಪ್ರದೇಶದ ಬಿಕ್ಕಟ್ಟುಗಳ ಬಗ್ಗೆ ಆತಂಕಗಳಿವೆ. ಕಲಾನಂದರ 'ಸ್ವರ್ಗ', 'ಪರಮಾಣು ಬಾಂಬ್' ಶಿವಲೆಂಕರ 'ಮುಸುಕು ತೆಗೆ', ವಿ.ಎಂ.ಗುಂಡಾರಾಧ್ಯರ 'ಲೋಕಶಾಂತಿ', ಶಾಂತರಸರ 'ಬೇಗಂ ಪಾಕಿಸ್ತಾನ', ಕಾವ್ಯಾನಂದ 'ಸಲಾಮ್ ಸಾಬ್' ಎಂಬ ಕವಿತೆಗಳು ವೈಶಿಷ್ಟ್ಯತೆಯಿಂದ ಕೂಡಿವೆ.

೧೯೩೭ರಲ್ಲಿ ಪ್ರಕಟವಾದ 'ಮೊಗ್ಗಿನ ಮಾಲೆ' ಎಂಬ ಚಿಕ್ಕ ಸಂಕಲನದಲ್ಲಿ 'ಸ್ವಾಗತ' ಎಂಬ ಈ ಕವಿತೆಯನ್ನು ಜಿ.ಕೆ.ಪ್ರಾಣೇಶಾಚಾರ್ಯ ಬರೆದಿದ್ದಾರೆ. ಹೈದರಾಬಾದ್ ತರುಣ ಕನ್ನಡಿಗರ ತಂಡವು ಈ ಕೃತಿಯನ್ನು ಪ್ರಕಟಿಸಿದೆ. ಈ ತರುಣರ ತಂಡ ತಾವು ಆಚರಿಸಿದ ನಾಡಹಬ್ಬಕ್ಕೆ ಬಿ.ಎಂ.ಶ್ರೀ. ಅವರನ್ನು ಹೈದರಾಬಾದಿಗೆ ಆಹ್ವಾನಿಸಿ ಆ ಸಂದರ್ಭದಲ್ಲಿ 'ಮೊಗ್ಗಿನ ಮಾಲೆ'ಯನ್ನು ಪ್ರಕಟಿಸಿ 'ಶ್ರೀ' ಅವರಿಗೆ ಅರ್ಪಿಸಿತು. 'ಸ್ವಾಗತ' ಎಂಬ ಗೀತೆಯಲ್ಲಿ ಹೈದರಾಬಾದ್ ಕರ್ನಾಟಕದ ಸಾಂಸ್ಕೃತಿಕ ಕಥೆಯೇ ಅಡಗಿದಂತಿದೆ.

ಹೈದರಾಬಾದ ಕರ್ನಾಟಕವು ಆಂಧ್ರ ಮತ್ತು ಮಹಾರಾಷ್ಟ್ರದ ಗಡಿ ಭಾಗದಲ್ಲಿ ಇರುವುದರಿಂದ ತೆಲುಗು, ಮರಾಠಿ ಭಾಷೆಗಳು ಇಲ್ಲಿನ ಜನಸಾಮಾನ್ಯರ ವ್ಯವಹಾರದಲ್ಲಿ ತುಂಬಿಕೊಂಡಿದ್ದವು. ಇದರಿಂದ ಉರ್ದು ಮತ್ತು ಗಡಿ ಭಾಗದ ತೆಲುಗು, ಮರಾಠಿ ಭಾಷೆಗಳ ನಡುವೆ ಕನ್ನಡ ಸೊರಗಿದಂತಾಗಿ ಹೋಗಿತ್ತು. ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಕಳೆದ ಎರಡು ಶತಮಾನಗಳಿಂದ ಲಿಖಿತ ರೂಪದ ಸಾಹಿತ್ಯ ಸೃಷ್ಟಿಗೆ ವಾತಾವರಣವೇ ಇರಲಿಲ್ಲ. ಮೌಖಿಕ ಸಾಹಿತ್ಯ ಮಾತ್ರ ಜೀವಂತವಾಗಿತ್ತು. ೨೦ನೇ ಶತಮಾನದ ನಂತರ ಕಾಲು ಭಾಗ ಕಳೆಯುತ್ತಿದ್ದಂತೆ ಬೇರೆ ಪ್ರದೇಶಗಳಲ್ಲಿ ನವೋದಯ ಕಾವ್ಯ ಉತ್ಸಾಹದಿಂದ ಸೃಷ್ಟಿಯಾಗುತ್ತಿದ್ದುದನ್ನು ಗಮನಿಸುತ್ತಿದ್ದ ಈ ಭಾಗದ ಕನ್ನಡ ಭಾಷೆ, ಸಾಹಿತ್ಯಾಭಿಮಾನಿಗಳಲ್ಲಿ ಸ್ಫೂರ್ತಿ ಉಕ್ಕುತ್ತಿತ್ತು. ಆದರೆ ಸಾಂಸ್ಕೃತಿಕ ವಾತಾವರಣವೇ ಇಲ್ಲದಂಥ ಈ ಪ್ರದೇಶದಲ್ಲಿ, ಸಾಹಿತ್ಯಾಭಿಮಾನಿಗಳ ತಲ್ಲಣ ಶುರುವಾಗಿತ್ತು. ಇಂಥ ಸಂದರ್ಭದಲ್ಲಿ ಕನ್ನಡದ ಬಗ್ಗೆ ಸ್ವಾಭಿಮಾನದಿಂದ ಮಾತಾಡುವ ಮತ್ತು ತಮ್ಮ 'ಇಂಗ್ಲೀಶ್ ಗೀತಗಳು' ಕೃತಿಯ ಮೂಲಕ ನವೋದಯ ಕಾವ್ಯಕ್ಕೆ ಆದಿಯಾಗಿ ಬಿ.ಎಂ.ಶ್ರೀ ಅವರು ಈ ಭಾಗದ ಕನ್ನಡ ಭಾಷಾಭಿಮಾನಿಯೊಬ್ಬನ ಉತ್ಕಟ ಪ್ರೇಮದಿಂದ ಕವಿತೆ ರೂಪದಲ್ಲಿ ಚಿತ್ರಿತರಾದರು.

'ನಮ್ಮ ನಾಡಿಂಗೆ ಓಡಿ ಬನ್ನಿ,
ನಿಮ್ಮವರ ನೋಡ ಬನ್ನಿ.
ಕಕ್ಕುಲತೆಯಿಂದ ಮಾತಾಡ ಬನ್ನಿ,
ಎಮ್ಮೊಡನೆ ಕೂಡ ಬನ್ನಿ.

'ತುಂಗ' ನಾಳಿದ ತಿರುಳುಗನ್ನಡದ ನಾಡು,
ದಾಸರಿಂ ಪಾವನತೆಯೊಂದಿದೀ ನಾಡು,

ಇಕ್ಕೆಲದ ಸೆಳೆತಕ್ಕೆ ಶೀಳಾಗಿ ನಾಡು
ವಿಂಗಡಿಸಿ ಹೇಗಾಗಿ ಹೋಗಿಹುದು ನೋಡು.

ಕಳೆದುದಕೆ ಅಳುತಳುತ ಕುಳಿತು ಫಲವೇನು?
ಮೊಳೆತಿರಲು ತನ್ನರಿಹು ಸಾಲದೇನು?
ಮೊಳಕೆ ಕಮರದ ತೆರದಿ ಮಳೆಗರೆದು ನೀನು,
ಪಾಲಿಸೈ, ಲಾಲಿಸೈ, ಕೇಳಲಿನ್ನೇನು?

ಬಿಸಿಲ ಬೇಗೆಗೆ ಬೆಂದು ಬಾಡುತಿದೆ ನಾಡು
'ಆಚಾರ್ಯ' ನಿನಗೆ ಮೊರೆಹೋಗುತಲಿದೆ ಕಾಡು.
ಬೇಗ ಬಾ, ಬೇಗ ಬಾ, ಬಂದು ಕಾಪಾಡು.
ಶುಷ್ಕ ಹೃದಯಕ್ಕೆ ತಂಪ-ಕಂಪ-ನೀಡು.

ಮಂದ ಮಾರುತವಾಗಿ ತೇಲಿ ಬಾರೈ
ಹರಿವ ಹೊಳೆಯಾಗಿ ನೀ ಸಾಗಿ ಬಾರೈ
ಭೋರ್ಗರೆವ ಮಳೆಯಾಗಿ ಮೊರೆದು ಬಾರೈ
ಸುಸ್ವಾಗತವು ನಿನಗೆ 'ಶ್ರೀ'ಯೆ ಬಾರೈ'[೩]

ಅದು ಈ ಭಾಗದ ಕನ್ನಡಿಗರ ಪ್ರೇಮವೇ ಆಗಿತ್ತು ಎನ್ನಿಸುತ್ತದೆ. ಮೊದಲು ನಾಲ್ಕು ಸಾಲುಗಳಲ್ಲಿ 'ಶ್ರೀ' ಅವರನ್ನು ಕರೆಯುವ ದನಿಯಲ್ಲಿ ಆರ್ತತೆ ಇದೆ. ನಮ್ಮ ನಾಡಿಗೆ ಓಡಿ ಬನ್ನಿರಿ 'ನಿಮ್ಮವರ' ನೋಡಲು ಬನ್ನಿರಿ ಎಂದು ಕರೆದಿರುವಲ್ಲಿ ಒಂದು ಪ್ರೀತಿಯ ಕೊರತೆ ಇದೆ 'ಕಕ್ಕುಲತೆ' ಎಂಬ ಪದವು ಎಲ್ಲವನ್ನೂ ಕಳೆದುಕೊಂಡು ಬರ್ಬರ ಬದುಕಿನ ಸ್ಥಿತಿ ತಲುಪಿದ ವ್ಯಕ್ತಿಗೆ ಉಂಟಾದ ಅನಾಥ ಅವಸ್ಥೆಯನ್ನು ಹೇಳುತ್ತದೆ. ಇಂಥ ಅನಾಥ ವ್ಯಕ್ತಿ 'ಕಕ್ಕುಲತೆಯಿಂದ ಮಾತಾಡಿ ಬನ್ನಿ' ಎಂದು ಮೊರೆಯಿಡುವುದರ ಹಿಂದೆ ಈ ಭಾಗಕ್ಕೆ ಶತಮಾನಗಳ ಪ್ರೀತಿಯ ಕೊರತೆ ಕಾಣಿಸುತ್ತದೆ.

'ಕವಿರಾಜಮಾರ್ಗಕಾರ'ನ ನಂತರ ಹುಟ್ಟಿದ ಶರಣರು, ದಾಸರು, ಸೂಫಿಗಳು, ತತ್ವಪದಕಾರರು ಬಾಳಿ ಬದುಕಿದ ನಾಡಿನಲ್ಲಿ ಸಾಹಿತ್ಯದ 'ಸುವರ್ಣಯುಗ'ವೇ ಇತ್ತು. ಇಂಥ ನಾಡಿನಲ್ಲಿ ಭಾಷೆ ಮತ್ತು ಸಾಹಿತ್ಯ ಎಂಬ ಸಂಪತ್ತು ದರೋಡೆಕೋರರ ಪಾಲಾದಂತೆ ಕಾಣತೊಡಗಿತ್ತು. ತಿರುಳ್ಗನ್ನಡದ ನಾಡು 'ಇಕ್ಕೆಲದ ಸೆಳೆತಕ್ಕೆ ಶೀಳಾಗಿ' ಹೋಗಿದೆ. ಆದರೆ ಈ ಕವಿಗೆ ಹಿಂದೆ ಆಗಿ ಹೋದದ್ದರ 'ಅರಿವು' ಇರುವುದರಿಂದಲೇ ಆಶಾವಾದಿಯಾಗಿದ್ದಾನೆ. ಈ ಅರಿವಿನಿಂದಲೇ ಪುನಃ ಸಂಪದ್ಭರಿತ ನಾಡನ್ನು ಕಟ್ಟಬಹುದೆಂಬ ಅದಮ್ಯ ಬಯಕೆಯಿದೆ. ಅದಕ್ಕೆ ಕನ್ನಡದ ಕಟ್ಟಾಳು 'ಶ್ರೀ' ಅವರನ್ನು 'ಮೊಳಕೆ ಕಮರದ ತೆರದಿ ಮಳೆಗರೆದು' ನೀನು ಬಾ ಎಂದು ಹಂಬಲಿಸುತ್ತಾನೆ. ವೈಭವದ ನಾಡು ಬಿಸಿಲಿಗೆ ಒಣಗಿದ ಕಾಡಾಗಿದೆ. ಈ ಕಾಡಿಗೆ ಮಂದ ಮಾರುತವಾಗಿ, ಹರಿವ

ಹೊಳೆಯಾಗಿ, ಭೋರ್ಗರೆಯುವ ಮಳೆಯಾಗಿ ಬಾ ಎಂದು ಈ ಕವಿ ಆಹ್ವಾನಿಸಿದ್ದಾನೆ. ಅವರ ಆಹ್ವಾನವನ್ನು ಮನ್ನಿಸಿ ಅದಕ್ಕೆ ಪ್ರತಿಯಾಗಿ ಬಿ.ಎಂ.ಶ್ರೀ ಅವರು ಮುನ್ನುಡಿ ಯೊಂದರಲ್ಲಿ ಈ ರೀತಿ ಪ್ರತಿಕ್ರಿಯೆ ರೂಪದ ಪದ್ಯ ಒಂದನ್ನು ಬರೆದಿದ್ದಾರೆ.

'ನಿಮ್ಮ ಈ ಇನ್ನುಡಿಗೆ ಕೇಳುವಿರ ನನ್ನ
ಮುನ್ನುಡಿಯ, ಕೆಳೆಯರೇ, ನುಡಿವೆನೇನನ್ನ?
ನಿಮ್ಮೊಲುಮೆ ಸವಿನೆನಪನಲ್ಲದೇನನ್ನ?
ನಲವಿನಲಿ ನಾಡಹಬ್ಬಕೆ ಕರೆದಿರೆನ್ನ,
ಒಲವಿನಲಿ ಕನ್ನಡದ ಕರುಳೆಂದಿರೆನ್ನ,

ಮೆಚ್ಚಿತ್ತು ಗೆಲವೆರೆದು ಕಳುಹಿದಿರಿ ಮುನ್ನ.
ನಾ ನಿಮ್ಮ ನಂಟನಾದೆನು, ನಮ್ಮ ಒಂಟ–
ತಾಯ ಮೆರಸುತ ಬಹೆವು, ಬನ್ನಿ, ದೆಸೆಯೆಂಟ,
ಬಂಟನಾಗೊಬ್ಬ ಬರೆ ಮತ್ತೊಬ್ಬ ನಂಟ.

ಹಿರಿಯ ಪರಿಸೆಯ ಕೂಡಿ, ಕನ್ನಡದ ನುಡಿಯ,
ಕನ್ನಡಿಗತನವೆಂಬ ಬಾವುಟದ ಕುಡಿಯ,
ಕಟ್ಟಿದಿರಿ, ತಾಯಿಗಿಟ್ಟಿರಿ ಹೊನ್ನ ಮುಡಿಯ.

ಮನಸು ನಿಲಲಾರದೆ ನಾನೂಡಿ ಬಂದೆ:
ಮೊಗ್ಗು ಮಾಲೆಯನಲ್ಲಿ ನಾ ನೋಡಿ ಬಂದೆ,
ಪರಿಸೆಗದ ಬೇಳಗಿದಿರಿ, ಕಂಡು ನಾನೆಂದೆ–

ಈ ನಾಡು ಕನ್ನಡದ ಹೊಳೆಗೆ ತಲೆ ಮೂಡು,
ಕಾಶಿ ಕನ್ನಡಿಗನಿಗೆ, ಹಿರಿಯರಾ ಬೀಡು;
ಅವರ ಬೀಜವ ನೆಲದಿ ಮರಸಿತ್ತು ಸೂಡು–

ಮಳೆಯಾಯ್ತು– ಅವರ ತೇಜವೆ, ಮತ್ತೇ, ನೋಡು,
ನೆಲವ ಬಿರಿಯುತ ಮೊಳೆತು ಮೊಗ್ಗೆ ಹೋ ಬೀಡು!
ಅರಳಿದರು, ಎಚ್ಚತ್ತರದೊ ಬೆಳ್ಳಿ ಮೂಡು!

ಮುನ್ನುಡಿಯ ಕೇಳುವಿರಿ, ಕೆಳೆಯರೆ, ನನ್ನ;
ಇನ್ನುಡಿಯ ಹಾಡಿಹಿರಿ, ಕೂಡಿಹಿರಿ, ಮುನ್ನ,
ಸವಿನೆನಪನಲ್ಲದೇ ನುಡಿವೆನೇನನ್ನ?''

ಹೈದರಾಬಾದಿನಲ್ಲಿ ನಡೆದ ನಾಡಹಬ್ಬದಲ್ಲಿ ಅತಿಥಿಯಾಗಿ ಹೋಗಿ, ಅಲ್ಲಿನ ಮೊಗ್ಗಿನಂತೆ ಚಿಗುರೊಡೆಯುತ್ತಿರುವ ಕವಿಗಳನ್ನು, ಕನ್ನಡದ ಹೊಸ ಬೆಳೆಯನ್ನು ಶ್ರೀ ಅವರು ನೋಡಿ

ಸಾಂತ್ವನದ ಮಾತುಗಳನ್ನು ಕಾವ್ಯಾತ್ಮಕವಾಗಿ ಆಡಿದ್ದಾರೆ. ಕನ್ನಡವನ್ನು ಉಳಿಸಿ ಬೆಳೆಸುವ ಜವಾಬ್ದಾರಿಯನ್ನು ಹೊತ್ತಿದ್ದ ಅವರು ಹೈದರಾಬಾದಿನ ಕನ್ನಡಿಗರಿಗೆ ಮಾರ್ಗದರ್ಶಿಗಳಾಗಿದ್ದಾರೆ. ಅವರ ಆತಿಥ್ಯ ಸ್ವೀಕರಿಸಿ ಮೆಚ್ಚುಗೆಯ ಮಾತುಗಳನ್ನು ಆಡಿದ್ದಾರೆ. ಈ ನಾಡು ಕನ್ನಡ ಸಾಹಿತ್ಯದ ಹೊಳೆಗೆ ತಲೆ ಮೂಡು, ಕಾಶಿ ಕನ್ನಡಿಗನಿಗೆ ಹಿರಿಯರಾ ಬೀಡು; ಎಂದು ಹೇಳಿರುವಲ್ಲಿ ಅವರು ಚರಿತ್ರೆಯಲ್ಲಿ ಈ ಪ್ರಾಂತ್ಯದ ಕನ್ನಡದ ಸ್ಥಿತಿಯನ್ನು ಮೆಲುಕು ಹಾಕಿದಂತಿದೆ. ಬಿ.ಎಂ.ಶ್ರೀ ಅವರಿಗೆ ಆಹ್ವಾನಿಸಿ ಅವರಿಂದ ಮಾರ್ಗದರ್ಶನ ಕೇಳಿರುವುದು ಇಲ್ಲಿನ ಲೇಖಕರು ಸಾಹಿತ್ಯಕ್ಕೆ ಪ್ರಾಥಮಿಕರು ಎಂಬ ಅಂಶ ತಿಳಿಯುತ್ತದೆ. ಸಾಮಾನ್ಯವಾಗಿ ಸಾಹಿತ್ಯ ರಚನೆಗೆ ಹಿರಿಯರ, ಅನುಭವಿಗಳ ಮಾರ್ಗದರ್ಶನ ಅತ್ಯವಶ್ಯಕ ಎಂಬ ಅಂಶ ಇಲ್ಲಿ ತಿಳಿಯುತ್ತದೆ.

೧೯೪೭, ನಲ್ಲಿ 'ಮುಸುಕು ತೆರೆ' ಬಿಡುಗಡೆಯಾಗಿದೆ. ಈ ಕೃತಿಯ ರಚನೆಗಳು ನಲವತ್ತರ ದಶಕದಲ್ಲಿ ಆಗಿರಬಹುದು. ಈ ಅವಧಿಯಲ್ಲಿ ಸ್ವಾತಂತ್ರ್ಯ ಹೋರಾಟವು ತೀವ್ರ ಸ್ವರೂಪದಲ್ಲಿತ್ತು. ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ಸಿಗುವ ಸಂದರ್ಭ ಸಮೀಪಿಸಿತ್ತು. ಆದರೆ 'ಹೈದರಾಬಾದ್ ಕರ್ನಾಟಕ'ಕ್ಕೆ ಸ್ವಾತಂತ್ರ್ಯ ಸಿಗುವ ಸಾಧ್ಯತೆಗಳಿಲ್ಲ ಎಂಬ ಆತಂಕದ ವಾತಾವರಣ ಮೂಡಿತ್ತು. ನಿಜಾಮನ ಆಡಳಿತದಿಂದಲೂ ಮುಕ್ತರಾಗಬೇಕೆಂಬ ಕನಸು ತೀವ್ರವಾಗಿ ಕಾಡುತ್ತಿತ್ತು. ಇಂತಹ ಸಂದರ್ಭದಲ್ಲಿ ಈ 'ಮುಸುಕು ತೆರೆ' ಕೃತಿ ಹೊರಬಂದಿದೆ. ಸಾಹಿತ್ಯಿಕವಾಗಿ ನವೋದಯ ಸಾಹಿತ್ಯ ಚಳವಳಿಯ ಕಾವು ಕಡಿಮೆಯಾಗುತ್ತಿತ್ತು. ಆದರೆ ಅದು ತನ್ನ ಸಾಧನೆಯನ್ನು ಸಮರ್ಥವಾಗಿಯೇ ದಾಖಲಿಸಿತ್ತು. ಬಿ.ಎಂ.ಶ್ರೀ., ತೀ.ನಂ.ಶ್ರೀ., ಡಿ.ವಿ.ಜಿ., ಗೋವಿಂದ ಪೈ., ಮಾಸ್ತಿ, ಪಂಜೆ ಮುಂತಾದವರು ಮೊದಲ ಪೀಳಿಗೆಯ ನವೋದಯ ಕವಿಗಳು ಹಾಗೂ ನಂತರದ ಬೇಂದ್ರೆ, ಕಾರಂತ, ಅ.ನ.ಕೃ, ಕೆ.ಎಸ್.ನ, ಕಣವಿ, ಶಿವರುದ್ರಪ್ಪ ಮುಂತಾದವರು ನವ್ಯ ಸಾಹಿತ್ಯಕ್ಕೆ ಒಲಿದು ಹೊಸ ಆಯಾಮಗಳನ್ನು ಸೇರಿಸಿಕೊಂಡರು. ಇವರೆಲ್ಲರೂ ತಮ್ಮ ಕಾವ್ಯ ರಚನೆಯಲ್ಲಿ ಭಿನ್ನತೆಯನ್ನು, ವೈಶಿಷ್ಟ್ಯವನ್ನು ಸಾಧಿಸಿದ್ದಾರೆ. ಹೈದರಾಬಾದ್ ಕರ್ನಾಟಕ ಪ್ರದೇಶದ ಕವಿಗಳ ಮೇಲೆ ಇವರೆಲ್ಲರೂ ಪ್ರಭಾವ ಬೀರಿರುವುದು ನಿಜ. ಆದರೆ ಎಲ್ಲವೂ ಮೇಲ್ಪದರಿನ ಅನುಕರಣೆ ಮತ್ತು ತಾತ್ಕಾಲಿಕ ಪ್ರಭಾವ ಆದಂತೆ ಕಾಣುತ್ತದೆ. ಪ್ರಭಾವವನ್ನು ಅರಗಿಸಿಕೊಂಡು ವೈಶಿಷ್ಟ್ಯವನ್ನು ತೋರಿಸುವ ಗುಣ ಈ ಭಾಗದ ಕವಿಗಳಲ್ಲಿ ಕಾಣುವುದಿಲ್ಲ. ಹಾಗಾಗಿ ಆರಂಭಕಾಲದ ಸಾಹಿತ್ಯ ರಚನೆ ಅಷ್ಟಾಗಿ ಆಗಿಲ್ಲ. ಇದಕ್ಕೆ ಅನೇಕ ಸಾಂಸ್ಕೃತಿಕ ತೊಡಕುಗಳಿವೆ. ಇದರಿಂದಾಗಿ ಇಲ್ಲಿನ ಕಾವ್ಯದ ಸ್ಪಷ್ಟವಾದ ಧೋರಣೆ ಏನು ಎಂಬುದು ತಿಳಿಯುವುದಿಲ್ಲ.

ಈ ಭಾಗದ ತಲ್ಲಣಗಳಿಗೂ, ಈ ಕವಿಗಳ ತಲ್ಲಣಗಳಿಗೂ ಸಂಬಂಧ ಕಲ್ಪಿಸಲು ಕಷ್ಟವಾಗುತ್ತದೆ. ರಜಾಕಾರರ ಆಕ್ರಮಣಕ್ಕೆ, ಭೂ ಮಾಲೀಕರ ಅಧೀನದಲ್ಲಿ ಜನಸಾಮಾನ್ಯರು ನೋವು ಉಣ್ಣುತ್ತಿದ್ದರೆ, 'ಮೊದಲು ಮಾನವನಾಗು' ಎಂಬ ಆದರ್ಶದ ಕನಸುಗಳು ಈ ನೆಲದಲ್ಲಿ ಬಿತ್ತಿ ಬೆಳೆಯಲು ಸಾಧ್ಯವೇ? ಅಥವಾ ಉಚಿತವೇ? ನವೋದಯ ಕಾಲದ ಕವಿಗಳಿಗೆ ಮಾನವತಾವಾದ, ಆದರ್ಶ, ಕನಸುಗಳು ಮುಖ್ಯವಾಗಿದ್ದವು, ರಾಷ್ಟ್ರೀಯವಾದವನ್ನು ಎತ್ತಿ ಹಿಡಿಯುವುದು ಅನಿವಾರ್ಯವಾಗಿತ್ತು.

ದೇಶಾಭಿಮಾನ, ಭಾಷಾಭಿಮಾನಗಳಲ್ಲಿ ಆಯ್ಕೆಗಳಿರಲಿಲ್ಲ. ಅವೆರಡು ಒಂದೇ ನಾಣ್ಯದ ಎರಡು ಮುಖಗಳಾಗಿ ಪರಿಣಮಿಸಿದವು. ಇದರಿಂದಾಗಿ ರಾಷ್ಟ್ರೀಯತೆಯ ವೈಭವದಲ್ಲಿ ಸ್ಥಳೀಯತೆಯನ್ನು ಮರೆಯುವುದು ಅಥವಾ ಬದಿಗಿರಿಸುವುದು ಅನಿವಾರ್ಯವಾಯಿತು. ಸ್ವಾತಂತ್ರ್ಯ ಪಡೆಯುವ ಒಂದೇ ಗುರಿಯನ್ನು ಹೊಂದಿದ್ದರಿಂದ ಒಟ್ಟು ಮನುಷ್ಯರನ್ನು 'ಭಾರತೀಯ'ನನ್ನಾಗಿ ಗ್ರಹಿಸುವುದು ಅಂದಿನ ತುರ್ತಾಗಿತ್ತು. ಇದರಿಂದ ನವೋದಯ ಸಾಹಿತಿಗಳ ಸಾಮಾಜಿಕ ಕಾಳಜಿ ಎಂದರೆ ಮಾನವೀಯತೆ, ಉದಾರವಾದಿತನವೇ ಆಗಿತ್ತು. ಆರ್ಥಿಕ ಸ್ಥಿತಿಗಳ ಮೇಲೆ ವರ್ಗ-ವರ್ಗಗಳ ನಡುವಿನ ವ್ಯತ್ಯಾಸವನ್ನು ಅರಿಯದೆ ವಿಶ್ವಮಾನವತ್ವದ ಕಲ್ಪನೆ ರೂಪಿಸಿಕೊಂಡಿದ್ದರು. ಇದರಿಂದ ನವೋದಯ ಕವಿಗಳಲ್ಲಿ ಕುವೆಂಪು ಅವರನ್ನು ಹೊರತು ಪಡಿಸಿದರೆ ಬಡತನ, ಜಾತೀಯತೆ, ವರ್ಣವ್ಯವಸ್ಥೆ, ಮೂಢನಂಬಿಕೆ, ಸಂಪ್ರದಾಯಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿರುವ ಗುಣ ಕಾಣುವುದಿಲ್ಲ. ಬದಲಾಗಿ ಸುಧಾರಣಾವಾದಿ ಗುಣ ಕಂಡುಬರುತ್ತದೆ. ಇದು ಉದಾರವಾದಿ ನಿಲುವು ಎನಿಸುತ್ತದೆ.

ನವೋದಯ ಕಾಲದ ಎಲ್ಲ ಲಕ್ಷಣಗಳನ್ನು ಹೈದರಾಬಾದ್ ಪ್ರದೇಶದ ಕವಿಗಳು ಅನುಸರಿಸಿದರು. ಆದರೆ ಅವು ಈ ಭಾಗದ ರಾಜಕೀಯ, ಸಾಮಾಜಿಕ ಸಂದರ್ಭದ ತಲ್ಲಣಗಳಿಗೆ ಸಮೀಕರಿಸಿ, ಯೋಚಿಸಿದಂತೆ ಕಾಣುವುದಿಲ್ಲ. ನಾಡು ಬ್ರಿಟೀಶರ ಕೈಯಲ್ಲಿ, ನಿಜಾಮರ ಕೈಯಲ್ಲಿದ್ದರೂ ಜನಸಾಮಾನ್ಯರು ಧಾರ್ಮಿಕವಾಗಿ ಪುರೋಹಿತಶಾಹಿಗಳ, ಸಾಮಾಜಿಕವಾಗಿ ಭೂ ಮಾಲೀಕರ ಅಧೀನದಲ್ಲಿದ್ದರು. ಹಾಗಾಗಿ ಜನಸಾಮಾನ್ಯರು ಸ್ವಾತಂತ್ರ್ಯಕ್ಕಾಗಿ ಯಾರ ವಿರುದ್ಧ ಹೋರಾಟ ನಡೆಸಬೇಕು? ಯಾರ ಸಲುವಾಗಿ ಮಾಡಬೇಕು? ಎಂಬ ಬಿಕ್ಕಟ್ಟಿನ ವಾತಾವರಣಕ್ಕೆ ಸಿಲುಕಿಕೊಂಡರು. ಸ್ವಾತಂತ್ರ್ಯವಿಲ್ಲದ ಹಾಗೆ ನೋಡಿಕೊಂಡ ಬ್ರಿಟೀಶರನ್ನು ಕುರಿತು ಕವಿ ಶಿವಲೆಂಕ ರಾಯಚೂರು ಅವರು ಈ ರೀತಿ ಬರೆಯುತ್ತಾರೆ.

'ಉದರ ಪೋಷಣೆಗೆಂದು
ಕಡಲಿನಾಚೆಯ ಜನರು
ಬಂದು ನೆಲೆ ಊರಿದರು
ನಿನ್ನ ಮನೆಯಂಗಣದಿ

ನಾಡು ಕಾಡಾಯಿತ್ತು
ಒಡಕುಗಳು ಬೀಡಾಯಿತ್ತು
ಬಡತನಕ್ಕೆ ತವರಾಯ್ತು
ಪರತಂತ್ರ ಸ್ಥಿರವಾಯ್ತು!
ಸ್ವಾತಂತ್ರ್ಯ ಕನಸಾಯ್ತು!!'[೫](ಶಿವಲೆಂಕ ರಾಯಚೂರು : ಮುಸುಕುತೆಗೆ)

ಈ ಕವಿಗೆ ಅಕ್ಕ ಪಕ್ಕದ, ತನ್ನ ಸುತ್ತಮುತ್ತಲಿನ ಪ್ರಭುತ್ವವಾಗಲಿ, ರಜಾಕಾರರಾಗಲಿ, ಮಠಾಧೀಶನಾಗಲಿ, ಊರ ಗೌಡ, ಕುಲಕರ್ಣಿಗಳು, ಭೂ ಮಾಲೀಕರು ಜನಸಾಮಾನ್ಯರಿಗೆ

ನೀಡುವ ಹಿಂಸೆ, ನೋವು ಕಾಣುವುದಿಲ್ಲ. ಬದಲಾಗಿ ಬ್ರಿಟೀಶರು ಕಾಣಿಸುತ್ತಾರೆ. ಬ್ರಿಟೀಶರನ್ನು ಹೊರತು ಪಡಿಸಿ ಉಳಿದವರು ನಮ್ಮವರು ಎಂದು ಕವಿಗೆ ಅನಿಸಿರಬೇಕು. ಅದರಿಂದಾಗಿ ಬ್ರಿಟೀಶರನ್ನು ಹೊಡೆದೋಡಿಸಿ 'ಭಾರತಿ'ಗೆ ಮುಸುಕು ತೆರೆಯಲು ನಿವೇದಿಸಿಕೊಳ್ಳುತ್ತಾನೆ. ಇಲ್ಲಿ ಕವಿ ರಾಷ್ಟ್ರೀಯ ನೆಲೆಯಲ್ಲಿ ಚಿಂತಿಸಿದಂತಿದೆ. ಕವಿಗೆ ಇಲ್ಲಿ ಸ್ಥಳೀಯ ವಿದ್ಯಮಾನಗಳು ಗೌಣವಾಗಿ ರಾಷ್ಟ್ರೀಯ ವಿದ್ಯಮಾನಗಳು ಮುಖ್ಯ ಎನಿಸಿವೆ. ಇದೊಂದು ವೈರುಧ್ಯವೇ ಆಗಿದೆ. ತನ್ನ ಮನೆಯ ಯಾವುದೇ ಸಮಸ್ಯೆಗಳನ್ನು ತೋರ್ಪಡಿಸದೇ ರಾಷ್ಟ್ರ ಪ್ರೇಮಕ್ಕಾಗಿ ಸಾಹಿತ್ಯ ರಚಿಸಿರುವುದು ಕವಿಯ ಹೃದಯ ವೈಶಾಲ್ಯತೆಯನ್ನು ತೋರಿಸಿದಂತಿದೆ. ಕವಿ ಬ್ರಿಟೀಶರ ದಾಸ್ಯದಿಂದ ಭಾರತವನ್ನು ಬಿಡುಗಡೆ ಮಾಡಲು ಹಂಬಲಿಸಿರುವುದೂ ಇಲ್ಲಿ ಕಾಣುತ್ತದೆ.

ಕರ್ನಾಟಕದಲ್ಲಿ ಅದರಲ್ಲೂ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಬಹು ದೀರ್ಘಕಾಲದಿಂದ 'ಹಿಂದು–ಮುಸ್ಲೀಂ' ಸಮುದಾಯಗಳು ಕೂಡಿ ಬಾಳುತ್ತ ಬಂದಿವೆ. ನಲವತ್ತರ ದಶಕದಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ಸಮಯದಲ್ಲಿ ಮುಸ್ಲೀಂ ಸಮುದಾಯ 'ಪಾಕಿಸ್ತಾನ'ವನ್ನು ಪ್ರತ್ಯೇಕವಾಗಿ ಮಾಡಿ 'ಮುಸ್ಲೀಂ ದೇಶ'ವನ್ನು ಕಟ್ಟಿಕೊಳ್ಳಬೇಕೆಂಬ ಪ್ರಯತ್ನವನ್ನು ತೀವ್ರಗೊಳಿಸಿತು. ದೇಶ ವಿಭಜನೆಯ ವಿಷಯ ರಾಜಕೀಯವಾದದ್ದು. ಆದರೆ ದೇಶ ಒಡೆಯುವ ಸಂಗತಿ ಹೈದರಾಬಾದ್ ಕರ್ನಾಟಕ ಭಾಗದ ಪ್ರಜ್ಞಾವಂತ ಲೇಖಕರಿಗೆ ವ್ಯಥೆಯ ಸಂಗತಿಯಾಗಿ ಕಂಡಿದೆ.

'ಮೃಗಜಲವ ಬೆನ್ನಟ್ಟಿ ಬಳಲುತಿಹೆಯೇಕೆ?
ಗಗನ ಕುಸುಮಕ್ಕೆ ನೆಗೆದು ಸೋಲುತಿರುವೇಕೆ?
ಮನೆದೀಪ ಮುದ್ದಿಸಿ ಮುಖ ಸುಡುವಿಯೇಕೆ?
ಬಾಳ ಬಟ್ಟಲಿನಲ್ಲಿ ವಿಷವೆರೆಯುವೇಕೆ?

ನಾವಿರುವುದೊಂದೆ ಮನೆ ತಿಳಿದುನೋಡೆ
ಎಲ್ಲರೊಡನೊಡಗೂಡೆ ದೊರಕುವುದು ಜಯಮಾಲೆ
ಇಲ್ಲದಿರೆ ಇಹುದೆಂದೆಂದಿಗೂ ನರಕ ನೆಲೆ'[೬] (ಶಾಂತರಸ : ಬೇಗಂ ಪಾಕಿಸ್ತಾನ) ಈ ಕವಿತೆಯಲ್ಲಿ ವಿಚಿತ್ರವಾದ ಆತಂಕ ಕಾಣುತ್ತದೆ. ದೇಶ ಒಗ್ಗಟ್ಟಿದ್ದರೆ ಎಲ್ಲ ರೀತಿಯಿಂದ ಶಕ್ತವಾಗಿರುತ್ತದೆ. 'ಒಡೆಯುವ' ಮನಸ್ಸೆ ಕೆಡುಕಿನದು ಎಂಬ ಆತಂಕ ಇಲ್ಲಿ ಎದ್ದು ಕಾಣುತ್ತದೆ. ಈ ಆತಂಕಕ್ಕೆ ಯಾವ ಕಾರಣವಿರಬಹುದು? ಪಾಕಿಸ್ತಾನ ಪ್ರತ್ಯೇಕವಾಗುವ ವಿಷಯ ಹೈದರಾಬಾದ್ ಕರ್ನಾಟಕ ನೆಲದಲ್ಲಿದ್ದವರಿಗೆ ದಿಗಿಲನ್ನುಂಟು ಮಾಡಿರುವುದರ ಹಿಂದೆ ಬಲವಾದ ಕಾರಣವಿದೆ. ಪಾಕಿಸ್ತಾನ ಇಬ್ಭಾಗವಾಗುವ ವಿಷಯವು ಹೈದರಾಬಾದ್ ಸಂಸ್ಥಾನವನ್ನು ಆಳುವ ನಿಜಾಮನಿಗೆ ಹೊಸ ಆಸೆ ಚಿಗುರಿಸಿದೆ. ಪಾಕಿಸ್ತಾನ ಪ್ರತ್ಯೇಕವಾಗುವುದಾದರೆ, ಹೈದರಾಬಾದ್ ಸಂಸ್ಥಾನವೂ ಪ್ರತ್ಯೇಕವಾಗುವ ಕನಸು ಕಾಣುತ್ತದೆ. ಈ ಪ್ರಕ್ರಿಯೆಯಲ್ಲಿ ಹೈದರಾಬಾದ್ ಸಂಸ್ಥಾನ, 'ಮುಸ್ಲೀಂ ಸಂಸ್ಥಾನ'ವಾಗಿ ರೂಪುಗೊಳ್ಳುವ ಪ್ರಯತ್ನಗಳು ನಡೆಯ ತೊಡಗಿದವು. ರಜಾಕಾರರ ಮತ್ತು ನಿಜಾಮ್ ಆಳ್ವಿಕೆಯಿಂದ

ಬೇಸತ್ತ ಹೈದರಾಬಾದ್ ಕರ್ನಾಟಕ ಪ್ರದೇಶದ ಕನ್ನಡ ಕವಿಗೆ, ತಾನು ನಿಂತ ನೆಲವೇ 'ಮುಸ್ಲಿಂ ರಾಜ್ಯ'ವಾದರೆ ಅಂಥ ರಾಜ್ಯದಲ್ಲಿ ನೆಲೆಗೊಳ್ಳುವ ಸ್ಥಿತಿ ಕಲ್ಪನೆಗೂ ಮೀರಿದ್ದು ಎನಿಸಿರಬೇಕು.

ಭಾರತ ವಿಭಜನೆಯಾಗಿ ಪಾಕಿಸ್ತಾನ ಪ್ರತ್ಯೇಕ ದೇಶವಾಗಿ ನಿಲ್ಲುವ ಸಂದರ್ಭವು ಇಲ್ಲಿಯ ಕವಿಗಳಿಗೆ ವಿಚಿತ್ರ ರೀತಿಯ ಸಂಕಟವನ್ನು ತಂದಿದೆ. ಪಾಕಿಸ್ತಾನ ಕೇಳುವವರು ಮುಸ್ಲಿಮರು. ಹೈದರಾಬಾದ್ ಪ್ರದೇಶವನ್ನು ಆಳುವ ನಿಜಾಮನು ಮುಸ್ಲಿಮರವನು. ಅವನಿಂದ ಈ ಪ್ರದೇಶದ ಕನ್ನಡಿಗರಿಗೆ ಅನೇಕ ಬಿಕ್ಕಟ್ಟುಗಳು ಎದುರಾಗಿವೆ. ದೇಶವನ್ನು ಒಡೆಯುವ ಮನಸ್ಸು ಮುಸ್ಲಿಮರದ್ದೆ ಎಂಬ ಸಿಟ್ಟು, ಆತಂಕ ಇಲ್ಲಿಯ ಕವಿಗಳಿಗಿದ್ದಂತೆ ಕಾಣುತ್ತದೆ. 'ಸಲಾಂ ಸಾಬ್' ಕವಿತೆಯಲ್ಲಿ ಇದು ವ್ಯಕ್ತವಾಗಿದೆ.

'ಇವ ತುರುಕ, ಭಾರತದ ಅರಮನೆಯ ಮುರುಕ!
ಇವ ಮ್ಲೇಂಛ–ಭಾರತವ ಹಂಚೆ ಮಾಡಿಹ ಹೊಂಚ!
ಕರೆದು ನೆರವನು ಕೊಟ್ಟ ಜನರಿವಗೆ ಕಾಫರರು?
ಸ್ವಸ್ತ್ರೀಯ ಬಚ್ಚಿಟ್ಟು ಪರಸ್ತ್ರೀಯರನು ಕಂಡು
ಕೆರಳುವುದು ಕಾಮೇಚ್ಛೆ! ಹಿಂದುಗಳ ಕಂಡೊಡನೆ
ಎಂದಿವರ ನುಂಗುವೆನು' ಎಂದು ತಳಮಳಿಸುವನು
ಭಾರತದ ವೈರಿಯಿವ! ಹಾವ್ಗೆ ಹಾಲೆರೆಯದಿರು'[೨] ಸಲಾಮ್ ಸಾಬ್ ಎಂಬ ಸಿದ್ಧಯ್ಯಪುರಾಣಿಕರ

ಈ ಕವನದಲ್ಲಿ 'ಸಲಾಮ್ ಸಾಬ್' ಎಂದು ಕವಿಗೆ ಬಡ ವ್ಯಕ್ತಿಯೊಬ್ಬ ಭಿಕ್ಷೆ ಬೇಡುತ್ತಾನೆ. ಅವನ ಸ್ಥಿತಿಯನ್ನು ನೋಡಿ ಕವಿಗೆ ಮೊದಲು ಕನಿಕರ ಮೂಡುತ್ತದೆ. ಆದರೆ ಭಿಕ್ಷೆ ಬೇಡಿದ ವ್ಯಕ್ತಿ ಮುಸ್ಲಿಂ ವ್ಯಕ್ತಿಯಾದ್ದರಿಂದ ಮನಸ್ಸು ಆಕ್ರೋಶಗೊಳ್ಳುತ್ತದೆ. 'ಇವ ತುರುಕ, ಭಾರತದ ಅರಮನೆಯ ಮುರುಕ' ಎಂದು ಮನಸ್ಸು ಯೋಚಿಸಲು ಹಲವು ಕಾರಣಗಳಿವೆ. ಕವಿ ನಿಂತ ನೆಲವನ್ನು ಆಳುವ ರಾಜನ ಪ್ರಭುತ್ವದಲ್ಲಿ 'ಹಿಂದೂ'ಗಳಿಗೆ ಕಿರುಕುಳವಿದೆ. ನಾನಾ ರೀತಿಯ ಕೃತ್ಯಗಳನ್ನು ಮುಸ್ಲಿಮರು ಎಸಗುತ್ತಾರೆ ಎಂಬುವ ಸಿಟ್ಟಿದೆ. ಈಗ 'ಪಾಕಿಸ್ತಾನ'ವನ್ನು ಬೇಡುತ್ತಿದ್ದಾರೆ. ಇಂಥವರೇ ದೇಶವನ್ನು ಒಡೆಯುವ ದುಷ್ಟಶಕ್ತಿಗಳು ಎಂಬುದೇ ಕವಿಗೆ ಆತಂಕವಾಗಿದೆ. ದೇಶದ ದುರಂತ ಕವಿಯ ಮನಸ್ಸಿಗೆ ಹೊಳೆದಿದೆ. ಆದರೆ ಅದೇ ಕವಿ ನಿಂತು ವಿವೇಚಿಸಿದಾಗ, ಬೇರೆ ನಿಲುವು ತಾಳುತ್ತಾರೆ.

'ಭಾರತದ ವೈರಿಗಳು ಬಡ ತುರುಕರಲ್ಲ! ಸಿರಿ
ತಲೆಗೇರಿ ಕುಣಿಯುತಿಹ ಸ್ವಾರ್ಥಿಗಳು ಕೆಲವು ಜನ
ಬಡ ತುರುಕ ಬೇಡುವುದು ಅನ್ನ–ಅಲ್ಲ ಪಾಕಿಸ್ತಾನ'[೮] (ಕಾವ್ಯಾನಂದ : ಸಲಾಮ್ ಸಾಬ್)

ಚರಿತ್ರೆಯ ಉದ್ದಕ್ಕೂ ಈ ಪ್ರದೇಶ ಅನ್ಯರ ದಾಳಿಗೆ ಸಿಕ್ಕು ಹಲವು ಬಗೆಯಲ್ಲಿ ತೊಂದರೆಗಳನ್ನು ಎದುರಿಸಿದೆ. ಜನಸಮುದಾಯಗಳಿಗೆ ಈ ಪ್ರದೇಶದಲ್ಲಿ ನಡೆಯುವ ಯುದ್ಧಗಳಿಂದ ನೆಲೆಯೆಂಬುದೇ ಇರಲಿಲ್ಲ. ಪರಕೀಯರ ಆಡಳಿತವಂತೂ ಸರಿಯೇ. ಸ್ಥಳೀಯ ಜಮೀನ್ದಾರರಿಂದಲೂ ಜನಸಾಮಾನ್ಯರು

ದಬ್ಬಾಳಿಕೆಗೆ ಒಳಗಾಗಿದ್ದಾರೆ. ಒಂದು ಬಗೆಯಲ್ಲಿ ನಿರಂತರ ಸಂಘರ್ಷವನ್ನು ಈ ಪ್ರದೇಶದ ಜನ ಎದುರಿಸುತ್ತಲೇ ಬಂದಿದ್ದಾರೆ. ಅದರಲ್ಲೂ ನಿಜಾಮ್ ಆಳ್ವಿಕೆಯನ್ನು ಸ್ಥಿರಗೊಳಿಸುವ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ನಿಜಾಮನ ಬೆಂಬಲಿಗರಾದ ರಜಾಕಾರರ ದಾಳಿಯಲ್ಲಿ ಈ ಪ್ರದೇಶದ ಜನ ಅಪಾರ ಸಾವು ನೋವಿಗೆ ತುತ್ತಾದರು. ಈ ಸಂದರ್ಭವು ವಿಚಿತ್ರವಾಗಿತ್ತು. ವೈರಿಗಳಾರು? ತಮ್ಮವರಾರು? ಎಂಬುದೇ ಪ್ರಶ್ನೆಯಾಗಿತ್ತು. ಇಂಥ ಪರಿಸ್ಥಿತಿಯಲ್ಲಿ ಶಕ್ತಿಯುಳ್ಳವನು ತನ್ನನ್ನು ತಾನು ರಕ್ಷಣೆ ಮಾಡಿಕೊಳ್ಳುವ ಅನಿವಾರ್ಯ ಸ್ಥಿತಿ ನಿರ್ಮಾಣವಾಯಿತು. ಅಹಿಂಸೆಯ ತತ್ವವೇ ಈ ಪ್ರದೇಶದ ಜನರಿಗೆ ದೊಡ್ಡ ಸವಾಲಾಯಿತು. ರಕ್ತಪಾತ ಒಂದು ಕಡೆ ನಡೆಯುತ್ತಿದ್ದರೆ, ರಕ್ತರಹಿತ ಯುದ್ಧಗಳು ನಿರಂತರವಾಗಿ ಒಳಗೆ ನಡೆಯುತ್ತಿದ್ದವು. ರಾಷ್ಟ್ರೀಯ ನಾಯಕರಾದ ಮಹಾತ್ಮಾ ಗಾಂಧಿ, ಬಾಲಗಂಗಾಧರ ತಿಲಕ್, ಸುಭಾಷ್ ಚಂದ್ರ ಬೋಸ್ ಇವರಲ್ಲಿ ಯಾರನ್ನು ಆಯ್ಕೆಮಾಡಿಕೊಳ್ಳಬೇಕು ಎಂಬ ಗೊಂದಲ, ದ್ವಂದ್ವದಲ್ಲಿ ಇಲ್ಲಿಯ ಜನನಾಯಕರು ಮುಳುಗಿದರು. ಜನಸಾಮಾನ್ಯರಿಗೆ ದಾರಿ ಯಾವುದು? ಎಂಬುದೇ ತೋಚದಂತ ವಾತಾವರಣ ಅಲ್ಲಿ ನೆಲೆಗೊಂಡಿತ್ತು.

'ಹೋರಾಟ, ಹೋರಾಟ, ಎತ್ತೆತ್ತ ಹೋರಾಟ
ಹೋರಾಟವೇ ಬಾಳ ರಚಿಪ ಪಗಡೆಯಾಟ

ಮೈಗಳ್ಳಗೆ ಗೆಲುವಿಲ್ಲಿ, ಪುಕ್ಕನಿಗೆ ಸಾವೆ ಸಮ!
ಮುನ್ನುಗ್ಗೆ ಜಯಮಾಲೆ, ಹಿನ್ನುಳಿಯೆ ನರಕನೆಲೆ

ಮುಂದುವರಿದವ ಉಳಿವ, ಹಿಂದೆಸರಿದವ ಅಳಿವ
ಇದುವೆ ಬಾಳಿನ ತಿರುಳು, ಇದುವೆ ಬದುಕಿನ ಮಂತ್ರ'[೯] (ಕಲಾನಂದ ಗೂಗಲ್ಲು : ಸ್ವರ್ಗ)

ಇಲ್ಲಿನ ಇಡೀ ಕವಿತೆಯಲ್ಲಿ ತನ್ನ ಎದುರಾಳಿಯನ್ನು ಮುನ್ನುಗ್ಗಿ ಸದೆ ಬಡಿಯುವುದೇ ವ್ಯಕ್ತಿಯ ನೀತಿಯಾಗಬೇಕೆಂದು ಕವಿ ಆಶಿಸಿದಂತಿದೆ. ಕವಿತೆಯ ರಚನಾ ನೆಲೆಯೇ ಒಂದು ರೀತಿಯಿಂದ ಆಕ್ರಮಣಾತ್ಮಕವಾಗಿದೆ. 'ಹೈದರಾಬಾದ್ ಸಂಸ್ಥಾನ'ದ ಪ್ರದೇಶದಲ್ಲಿ ತನ್ನವರಾರು, ಪರರು ಯಾರು ಎಂಬ ಭೇದವೇ ತಿಳಿಯದಂತಾಗಿ ಆಕ್ರಮಣಗಳು ನಡದೇ ಇದ್ದವು. ಈ ಪ್ರದೇಶದ ಜನಸಮುದಾಯಗಳಿಗೆ ನೆಲೆಯೇ ಇಲ್ಲದಂಥ ಸಂದರ್ಭದಲ್ಲಿ ತನ್ನ ಸ್ವರಕ್ಷಣೆಗೆ ವ್ಯಕ್ತಿಗತ ಹೋರಾಟವೇ ಮುಖ್ಯ ಮಾರ್ಗವಾಗಿತ್ತೆ ಹೊರತು ನೀತಿ ಅನೀತಿ, ಹಿಂಸೆ ಅಹಿಂಸೆಗಳ ಬಗೆಗೆ ಚರ್ಚಿಸುವುದು ಮುಖ್ಯವಾಗಿದ್ದಿಲ್ಲ. ಅಂದಿನ ಜನಜೀವನದ ಸ್ಥಿತಿಯನ್ನು ಅರಿತು ಕವಿ ಬೇಸತ್ತ ಮನೋಭಾವದಿಂದ ಈ ಕವಿತೆಯನ್ನು ರಚಿಸಿದಂತೆ ಕಾಣುತ್ತದೆ.

'ಶಾಂತಿ ಭ್ರಾಂತಿಗೆ ದಾರಿ, ಸೈರಣೆಯು ಕೊರಳುರುಳು
ದಯೆಯು ನಮ್ಮನು ದಹಿಪ ಧಗಧಗಿಪ ದಾವಾಗ್ನಿ
ಸುಡು ಅಹಿಂಸಾ ನೀತಿ'[೧೦] (ಕಲಾನಂದ ಗೂಗಲ್ಲು : ಸ್ವರ್ಗ)

ಇದು ಕವಿಯ ನಿಲುವು. ಸ್ಥಳೀಯ ಪರಿಸ್ಥಿತಿಯನ್ನು ಕಂಡ ಕವಿಗೆ ಹೀಗೆ ಅನ್ನಿಸಿರುವುದರಲ್ಲಿ ತಪ್ಪಿಲ್ಲ. ಚರಿತ್ರೆಯ ಹಲವು ಸಂದರ್ಭಗಳಲ್ಲಿ ಎದುರಾಳಿಯನ್ನು ಹೇಗೆ ಎದುರಿಸಬೇಕು ಎಂಬ

ಪ್ರಶ್ನೆ ಇಲ್ಲಿ ಎದ್ದಿದೆ. ಈ ಪ್ರದೇಶದ ಸಂದರ್ಭವನ್ನು ಕಂಡ ಕವಿಗೆ ಹೋರಾಟವೇ ಮುಖ್ಯವಾಗಿ ಕಂಡಿದೆ. ಅಹಿಂಸೆಯು ಹೋರಾಟವನ್ನು ಕವಿ ನಿರಾಕರಿಸಿದ್ದಾನೆ. ಆದರೆ ಇದೇ ಕವಿ ಯುದ್ಧವನ್ನು, ಅದರ ಅಪಾಯಕಾರಿ ನೀತಿಯನ್ನು ಕಂಡು ಮರುಗಿದ್ದಾನೆ. ಅಲ್ಲಿ ಮಾನವೀಯತೆ ಜಾಗೃತವಾಗಿದೆ. 'ಪರಮಾಣು ಬಾಂಬು' ಎಂಬ ಕವಿತೆಯಲ್ಲಿ 'ಏಕಿದೆ ನಿನ್ನವತಾರವು' ಎಂದು ಭಯದಿಂದ ಪ್ರಶ್ನಿಸಿದ್ದಾನೆ.

'ನಿನ್ನಾಟಕೆ ಕೊನೆಯಂದೋ!
ಯಾರ್ಯಾರದು ಬಲಿಯಂದೋ
ಇದರಿಂಗಿತ ತಿಳಿದಿಲ್ಲವು
ಇದರರ್ಥವು ಹೊಳೆದಿಲ್ಲವು
ಭವಿಷ್ಯದ ಫಲವೇನಿಹುದೋ?
ಸಿಹಿಯೋ, ಕಹಿಯೋ ತಿಳಿವುದೆಂತು?'[೧೧] (ಕಲಾನಂದ ಗೂಗಲ್ಲು : ಪರಮಾಣು ಬಾಂಬ್)

ಮನುಕುಲ ನಾಶವಾಗುವುದನ್ನು ವ್ಯಥೆಯಿಂದ ಕಾಣುವ ಈ ಕವಿ 'ನಿನ್ನಾಟಕೆ ಕೊನೆಯಂದೋ' ಎಂದು ಕೇಳಿರುವುದನ್ನು ನೋಡಿದರೆ, ಅದಕ್ಕೆ ಕೊನೆಯೇ ಇಲ್ಲ ಎಂಬ ವಿಷಾದ ತುಂಬಿದೆ. ಪರಮಾಣು ಬಾಂಬುಗಳನ್ನು ಈ ಹೊತ್ತಿನಲ್ಲಿ ಸ್ಫೋಟಿಸಿರುವ ಭಾರತ-ಪಾಕಿಸ್ತಾನಗಳನ್ನು ಗಮನಿಸಿದರೆ ಈ ಕವಿಯ ಆತಂಕ ಅರ್ಥವಾಗುತ್ತದೆ. ಈ ಕವಿಯ 'ಸ್ವರ್ಗ' ಮತ್ತು 'ಪರಮಾಣು ಬಾಂಬು' ಎರಡು ಕವಿತೆಗಳಲ್ಲಿರುವ ವೈರುಧ್ಯವೆ ಆಗಿದೆ. ಒಂದು ಸ್ಥಳೀಯ ಸಂದರ್ಭ, ಇನ್ನೊಂದು ಜಾಗತಿಕ ಸಂದರ್ಭದ ಸ್ಥಿತಿ. ಇವೆರಡೂ ಬೇರೆ ಬೇರೆಯಾಗಿವೆ. ಕನ್ನಡದ ಸೃಜನಶೀಲ ಕವಿಗಳು ಮತ, ಪಂಥ, ಧರ್ಮಗಳನ್ನು ಮೀರಿ ಸಾಹಿತ್ಯ ರಚನೆ ಮಾಡಿರುವುದು ಅವರ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಒಂದು ಕಡೆ ನಿಜಾಮನ ಆಡಳಿತದಿಂದ ಬೇಸತ್ತು ಸಾಹಿತ್ಯಿಕ ಚಟುವಟಿಕೆಗಳು ನಡೆದರೆ, ಅದಕ್ಕೆ ತದ್ವಿರುದ್ಧವೆಂಬಂತೆ ಅವರನ್ನು ಹೊಗಳಿ ಕಾವ್ಯ ರಚನೆಯಾಗಿರುವುದು ಕಂಡು ಬರುತ್ತದೆ.

'ವಿಜಯವಿರಲೆಮ್ಮ ನೈಜಾಮದೊರೆಗೆ
ಉದಯವಿರಲೆಂದಿಗೂ ಕನ್ನಡದ ನುಡಿಗೆ
ಗೊದಾವರೀಕೃಷ್ಣೆ ತುಂಗಭದ್ರೆಯರಿಂದ
ಹರಿವ ಜಲದೊಳುಮಿಂದು ಪಾವನಳು ಆಗಿ
ಭೂಮಂಡಲದಿ ಶ್ರೇಷ್ಠರೆಂದೆನಿಪ ಭೂಪತಿಗ
ಳಂ ಪಡೆದ ಭಾಗ್ಯನಗರೀಪತಿಗೆ ಸತತಂ
ಧರ್ಮನಿರತರು ಪಾಪ ಭೀರುಗಳು ಅಕಳಂಕ
ಹೃದಯದವರೆಂದು ಹೆಸರಾಗಿರುವ ತನ್ನ

ಪ್ರಜೆಗಳಂ ಮಕ್ಕಳೋಪಾದಿಯಲಿ ಪಾಲಿಸುತ
ಲಿರುವ ನಮ್ಮಯ ಭಾಗ್ಯನಗರಾಧಿಪತಿಗೆ

ಇರಲಿ ನಿನ್ನಯ ಕೃಪಾಛತ್ರ ಕನ್ನಡಿಗರಿಗೆ
ಇರಲಿ ನಿನ್ನಡಿದಾವರೆಯ ಸೇವೆ ನಿತ್ಯಂ
ರನ್ನಗನ್ನಡಿಯಿಂದ ಬರುವ ಕಿರಣಗಳಂತೆ

ಹಬ್ಬಲೇ ನಿನ್ನ ಕೀರ್ತಿಯು ಜಗದಿ ದೊರೆಯೆ'[೧೨] ಮುತ್ತುಗಾರ ಸ್ವಾಮಿ ಅವರ ಕವನವಿದು. ನಮ್ಮ ಅತ್ಯುತ್ತಮ ಲೇಖಕರು ಯಾವತ್ತೂ ಮೂಲಭೂತವಾದಿ ಅಥವಾ ಕೋಮುವಾದಿಗಳು ಆಗಿರುವುದಿಲ್ಲ ಎಂಬುದಕ್ಕೆ ಮೇಲಿನ ಕವನವೇ ಸಾಕ್ಷಿ ಎನಿಸುತ್ತದೆ. ಕವಿಗಳು ವಿಶಾಲ ಮನೋಭಾವ ಹೊಂದಿರುವುದರಿಂದಲೇ ಈ ರೀತಿ ಬರೆಯಲು ಸಾಧ್ಯವಾಗಿದೆ. ೪೦ರ ದಶಕದ ನಂತರದ ರಾಜಕೀಯ ಚಟುವಟಿಕೆಗಳು ಮತಾಂಧತನವನ್ನು ಹೆಚ್ಚಿಸಿದವು. ನಂತರ ಸಹಜವಾಗಿ ಎಂಬಂತೆ ನಿಜಾಮ್ ಪ್ರಾಂತ್ಯದಲ್ಲಿನ ವಿದ್ಯಮಾನಗಳು ಸಾಹಿತ್ಯದಲ್ಲಿ ಪ್ರವೇಶ ಪಡೆದವು.

ಸ್ವಾತಂತ್ರ್ಯಪೂರ್ವದಲ್ಲಿ ಭಾರತವನ್ನು ದಾಸ್ಯದಿಂದ ಬಿಡುಗಡೆ ಮಾಡಿ 'ಸ್ವಾತಂತ್ರ್ಯ'ವನ್ನು ಗಳಿಸಬೇಕೆಂಬ ಏಕೈಕ ಹಂಬಲವನ್ನು ರಾಷ್ಟ್ರದ ನಾಯಕರು ಹೊಂದಿದ್ದರು. ಅವರಿಗೆ ಹೆಗಲು ಕೊಟ್ಟು ದುಡಿಯುವ ಜನರಿಗೆ ಸ್ಫೂರ್ತಿ ತುಂಬಲು ಕವಿಗಳು ಅನೇಕ ರಾಷ್ಟ್ರಾಭಿಮಾನದ ಕವಿತೆಗಳನ್ನು ಬರೆದರು. ಈ ಕವಿತೆಗಳಲ್ಲಿ ದೇಶಪ್ರೇಮ ತುಂಬಿ ತುಳುಕುತ್ತಿತ್ತು. ನಾಡು-ನುಡಿ ಸಂಸ್ಕೃತಿಯ ವೈಭವವನ್ನು ಉತ್ಸಾಹದಿಂದ ಬಣ್ಣಿಸುವ ಮೂಲಕ ಜನತೆಯಲ್ಲಿ ಸ್ವಾಭಿಮಾನ, ಆತ್ಮ ಪ್ರತಿಷ್ಠೆ ತ್ಯಾಗದ ಮನೋಭಾವವನ್ನು ಬೆಳೆಸುವುದು ಕವಿಗಳ ಜವಾಬ್ದಾರಿಯೇ ಆಗಿ ಪರಿಣಮಿಸಿತ್ತು. ಆದರೆ ಸ್ವಾತಂತ್ರ್ಯದ ಹೋರಾಟಕ್ಕಾಗಿ ನಡೆದ ಈ ಬಗೆಯ ಸಿದ್ಧತೆಗಳು ಹೈದರಾಬಾದ್ ಕರ್ನಾಟಕದ ಕವಿಗಳಲ್ಲಿ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಉಳಿದು ಅವು ಪರಕೀಯರ ದಾಳಿಗಳನ್ನು ಎದುರಿಸಲು ಬಳಕೆಯಾದವು.

'ಜೀವನಕೆ ಸಂಕಟದ ನೇಣು ಬಿಗಿದಿಹುದು!
ನೋವು-ಸಾವಿನ ಜತೆ ಮನ ಸರಸವಾಡುತಿದೆ!
ಬಾಳ ಬಳ್ಳಿಗೆ ಸೌರಭದ ಹೂಗಳಿಲ್ಲ!
ಕಸುಗಾಯಿ-ವಿಷಗಾಯಿ ಎಲ್ಲು ಕೊನರಿಸಿದೆ!
ತಿಳಿತಂಪು, ಹೂಬಿಸಿಲು ಬಂದು ಹೋದವು ಎಲ್ಲ!

ಆದರೂ ನಿಜಶಾಂತಿ ದೊರಕದಲ್ಲ!'[೧೩] (ಎಂ ಶಿವಯ್ಯ : ಬಾಳ್ಜಳ) ಕವಿಯ ಈ ಮನೋಭಾವವು ಹೈದರಾಬಾದ ಕರ್ನಾಟಕ ಪ್ರಾಂತ್ಯದ ಜನಜೀವನದ ಸ್ಥಿತಿಯನ್ನು ತಿಳಿಸುತ್ತದೆ. ಒಂದೆಡೆ ಪ್ರಭುತ್ವದ ಕಾಟ, ಇನ್ನೊಂದೆಡೆ ಪ್ರಕೃತಿಯ ಮುನಿಸು, ಬರಗಾಲ ಇಲ್ಲಿನ ಜನರ ಜೀವಿಸುವ ಶಕ್ತಿಯನ್ನು ಕುಂದಿಸಿವೆ. ಇಂಥ ಸಂದರ್ಭದಲ್ಲಿ ಸಾಂತ್ವಾನದ ನುಡಿಗಳ ಆಸರೆ ಬೇಕಾಗಿದೆ, ಆದರೂ ಶಾಂತಿಯನ್ನು ಅರಸುತ್ತ ಜೀವನ ಸಾಗಿದೆ ಎಂದು ಕವಿ ಇಲ್ಲಿ ಹೇಳಿದ್ದಾನೆ.

ಕಷ್ಟ, ಸುಖ ಬದುಕಿನ ಜಂಜಡಗಳನ್ನು ತೊರೆದು ಜೀವನದ ಅಂತಿಮ ಯಾತ್ರೆ ಎನಿಸುವ ಸಾವನ್ನು ಸ್ವೀಕರಿಸಿ ಅದನ್ನು ಮುಕ್ತವಾಗಿ ಕವಿತೆಯೊಂದರಲ್ಲಿ ಕವಿ ಮಲ್ಲಿಕಾರ್ಜುನ ಮಸ್ಕಿ ಅವರು ಈ ರೀತಿ ಆಹ್ವಾನಿಸಿದ್ದಾರೆ.

'ಸಾವೆನಲು ಮಾನವರೇ ನೀವೇಕೆ ಬೆದರುವಿರಿ?
ಸಾವಿನೊಳು ನೀವಾವ ದೌರ್ಜನ್ಯ ಕಾಣುವಿರಿ?
ಸಾವಿರಲು ನಿಮಗಿಹುದು ಸುಖ ಶಾಂತಿ ವಿಶ್ರಾಂತಿ
ಸಾವಿಂದೆ ಸಂಸಾರ ಬಿಡುಗಡೆಯು ಸದ್ಗತಿಯು.'[೧೪] (ಮಲ್ಲಿಕಾರ್ಜುನ ಮಸ್ಕಿ : ಸಾವು)

ಸಾವು ಎನ್ನುವುದು ಇಲ್ಲಿ ಕವಿಗೆ ಆಪ್ತವಾಗಿ ಕಂಡಿದೆ. ಸಹಜವಾಗಿ ಜೀವನದ ಕೊನೆಯು ಸಾವಿನಲ್ಲಿ ಆಗುತ್ತದೆ. ಅದರಿಂದ ಸಾವು ಬಂದೊದಗಿದರೆ ಜೀವನದಲ್ಲಿ ಮುಂದೆ ಯಾವುದೇ ರೀತಿಯ ಕಷ್ಟ ಕಾರ್ಪಣ್ಯಗಳು ಬರಲಾರವು. ಪ್ರಕೃತಿಯ ಮುನಿಸು, ಭೂಮಾಲೀಕರ ದರ್ಪ, ಪ್ರಭುತ್ವ ಕೊಡುವ ಹಿಂಸೆಯಿಂದ ದಿನವೂ ಸಾಯುವುದಕ್ಕಿಂತ, ಒಮ್ಮೆ ಸಾಯುವುದು ಮೇಲು ಎಂದು ಕವಿಗೆ ಅನಿಸಿದೆ. ಹಿಂಸೆಯಿಂದ ಕೂಡಿದ ಈ ಭಾಗದ ಜನರ ಸಾವು ಇಲ್ಲಿನ ಲೇಖಕರಿಗೆ ಕಾಡಿದೆ. ಅದರಿಂದಾಗಿಯೆ ಅವರು ಸಾವುಗಳ ಬಗೆಗೆ ಅವುಗಳ ಸ್ವರೂಪಗಳನ್ನು ಕಾವ್ಯತ್ಮಕವಾಗಿ ಕಾವ್ಯಗಳಲ್ಲಿ ಕಟ್ಟಿಕೊಡಲು ಯತ್ನಿಸಿದ್ದಾರೆ. ಶಾಂತರಸ 'ಬೇಗಂ ಪಾಕಿಸ್ತಾನ' ಎಂಬ ಕವನದ ಕೆಲವು ಸಾಲುಗಳನ್ನು ನೋಡಬಹುದು.

'ಎಲ್ಲಡೆಯು ನಾಡಿನಲಿ ನಡೆದಿಹುದು ಗೋಳಾಟ!
ಬಡವ– ಬಲ್ಲಿದರೆಂಬ ಭೇದ ಭಾವನೆಯಾಟ!
ಅನ್ನವಿಲ್ಲದ ಜನರು ಸಾಯುತಿರೆ ಪಟಪಟ!
ಆಳುವರು ನಡಸಿಹರು ಕುಟಿಲ ಕಪಟದ ಮಾಟ!'[೧೫] (ಶಾಂತರಸ ಬೇಗಂ ಪಾಕಿಸ್ತಾನ)

ಇಲ್ಲಿ ಕವಿ ಜನರ ಗೋಳಾಟಗಳಿಗೆ ನೇರವಾಗಿ ಪ್ರಭುತ್ವವೇ ಹೊಣೆ ಎಂದು ಆಪಾದಿಸುತ್ತಾರೆ. ಬಂಡಾಯ ಗುಣವುಳ್ಳ ಲೇಖಕರಾಗಿರುವುದರಿಂದ ಅವರಿಗೆ ಹಾಗೆ ಹೇಳಲು ಆಗಿದೆ. ಸಮಾಜದ ಅಂತ್ಯದಲ್ಲಿರುವವರನ್ನು ಪ್ರಭುತ್ವ ಹೇಗೆ ಬಳಸಿಕೊಳ್ಳುತ್ತದೆ ಎಂಬ ಚಿತ್ರಣ ಇದರಲ್ಲಿ ನೀಡಲಾಗಿದೆ.

'ಸಾವು ಕವಿಗೆ ಚಿಂತಿಸುವಂತೆ ಮಾಡಿದೆ.

'ಸಾವೆಂಬ ಕನ್ನಿಕೆ ಹೊರಟಿಹಳಣ್ಣಾ
ನೋವೆಂಬ ನಂಜನು ಸವರುತಲಣ್ಣಾ

ಹಗಲಿರುಳು ತಾಳವು
ಮುಗಿಯದ ಮೇಳವು

ಬೆಂಬತ್ತಿ ಬರುತಿರೆ ಹೊರಟಿಹಳಣ್ಣಾ
ಹೊರಟಿಹಳಣ್ಣಾ ಸಾವೆಂಬ ಕನ್ನಿಕೆ'[೧೬](ವೆಂಕಟೇಶ : ಸಾವುಗನ್ನಿಕೆ) ಬಂದೆರಗುವ ನೈಸರ್ಗಿಕ

ವಿಪತ್ತುಗಳಿಗಿಂತ ಕಣ್ಣೆದುರಿಗಿನ ಪ್ರಭುತ್ವದ ಕ್ರೌರ್ಯದ ದಬ್ಬಾಳಿಕೆ ಕವಿಗಳಿಗೆ ಮುಖ್ಯವೆನಿಸಿದೆ.

ಸಾವನ್ನು ಕವಿ ಹೆಣ್ಣಿಗೆ ಹೋಲಿಸಿದ್ದಾರೆ. ಯಾಕೆಂದರೆ ಹೆಣ್ಣು ಚಂಚಲೆ, ಒಂದುಕಡೆ ನಿಲ್ಲದವಳು ಎಂಬ ನಂಬಿಕೆ ನಮ್ಮಲ್ಲಿದೆ. ಅದೇ ರೀತಿ ಸಾವೂ ಸಹ ಹೇಳದೇ ಕೇಳದೇ ಬರುವಂತದ್ದು ಮಾರ್ಕ್ಸವಾದಿ ವಿಚಾರಧಾರೆ ಇಲ್ಲಿದೆ. ಬಡವ-ಬಲ್ಲಿದವೆಂಬ ಬೇಧ ಎಲ್ಲಿಯವರೆಗೆ ಇರುವುದೊ ಅಲ್ಲಿಯವರೆಗೆ ಈ ತಾರತಮ್ಯವನ್ನು ಕಾಣುತ್ತಲೇ ಇರುತ್ತೇವೆ. ಹಾಗಾಗಿ ಸಮಾಜದಲ್ಲಿ ಸಮಾನತೆಯು ಇಲ್ಲದಂತಾಗಿದೆ ಎಂದು ಕವಿ ವ್ಯಥಿಸುತ್ತಾನೆ.

'ಧನ ಪೂಜನವಿಂದಿನ ಕಲೆ
ಜನ ಸಮ್ಮತವಾಗಿದೆ ಕೊಲೆ
ಹಗೆ ತೊರೆವುದು ಮಾತೆಯ ಮೊಲೆ
ಶಾಂತಿಗೆ ಇನ್ನೆಲ್ಲಿಯ ನೆಲೆ
ಭಾ ಸಾಮದ ಉದ್ಗಾಯಕಾ
ಮಾನವ ಕುಲ ಸೇವಕಾ'[೧೭] (ಹೇಮಂತ : ಕವಿಯೊಳಗಿನ ಮಾನವ) ಹೈದರಾಬಾದ ಕರ್ನಾಟಕ ಪ್ರಾಂತ್ಯದಲ್ಲಿ ನಿಜಾಮರು, ಬ್ರಿಟೀಶರು, ಭೂಹಿಡುವಳಿದಾರರು, ದೇಸಾಯಿಗಳು, ಕುಲಕರ್ಣಿಗಳು ಮುಂತಾದವರು ಆಡಳಿತ ನಡೆಸುತ್ತಿದ್ದರು. ಅವರುಗಳ ಆಡಳಿತ ನೈತಿಕತೆಯಿಂದಿರದೇ ದುರಾಡಳಿತದಿಂದ ಕೂಡಿತ್ತು. ಅದರಿಂದ ಬೇಸತ್ತಿರುವ ಕವಿ, ಜನರನ್ನು ಜಾಗೃತಿಗೊಳಿಸುವ ಅಗತ್ಯವಿದೆ. ಜನಜಾಗೃತಿಯು ಕವಿಗಳಿಂದ, ಕಾವ್ಯದಿಂದ ಆಗಲಿ ಎಂದು ಮಾನವೀಯ ಗುಣಗಳುಳ್ಳ, ಸಮಾಜವನ್ನು ಜಾಗೃತಾವಸ್ಥೆಯಲ್ಲಿಡುವ ವ್ಯಕ್ತಿಗೆ ಆಹ್ವಾನಿಸುತ್ತಾನೆ. ಇದು ಕವಿಯ ವಿಶಾಲ ಮನೋಭಾವವನ್ನು ತಿಳಿಸುತ್ತದೆ. ಇಲ್ಲಿನ ಕನ್ನಡದ ಸ್ಥಿತಿಯನ್ನು ಕಂಡು ಮಾಸ್ತಿ ವೆಂಕಟೇಶ ಅಯ್ಯಂಗಾರ ಅವರು ಶ್ರೀಕಾರ ಕವನ ಸಂಕಲನದ ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ. 'ಒಂದು ಪ್ರದೇಶದ ಕವಿಗಳ ಕೃತಿ ಎಂಬ ದೃಷ್ಟಿಯಿಂದ ಇವಕ್ಕೆ ನನ್ನ ಆದರವನ್ನು ಬೇಡಿದ್ದಾರೆ. ಇದನ್ನು ನಾನು ಧಾರಾಳವಾಗಿ ನೀಡಬಲ್ಲೆನು. ಅದರಲ್ಲೂ ಕನ್ನಡದ ಕೆಲಸಕ್ಕೆ ಸ್ವಲ್ಪವೂ ಸೌಕರ್ಯ ಉತ್ತೇಜನ ಎನ್ನುವುದು ಇಲ್ಲದೆ, ಎಲ್ಲ ವಿವಿಧ ಅಡಚಣೆ ಇರುವ, ಹೈದರಾಬಾದಿನ ಪ್ರಾಂತ್ಯದ ಕವಿತೆ ಎಂದರೆ ಯಾವ ಕನ್ನಡಿಗ ಅದಕ್ಕೆ ಸ್ವಾಗತ ಕೊಡದೆ ಇದ್ದಾನು?'[೧೮] ಮಾಸ್ತಿಯವರ ಈ ಮಾತುಗಳು ಕನ್ನಡದ ಪ್ರೋತ್ಸಾಹದ ಮಾತುಗಳಾಗಿವೆ.

ಭಾರತದ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟವು ಒಂದರ್ಥದಲ್ಲಿ ಹಿಂಸೆಯಿಂದ ಕೂಡಿತ್ತು. ಅಹಿಂಸೆ, ಶಾಂತಿ, ಸಹನೆ ತ್ಯಾಗ ಮುಂತಾದ ಮೌಲ್ಯಗಳಿಂದ ಸ್ವಾತಂತ್ರ್ಯ ಗಳಿಸಬೇಕೆಂಬ ಕನಸಿತ್ತು. ಆದರೆ ಅದಕ್ಕೆ ಆಸ್ಪದ ಇಲ್ಲದಂತಾಯಿತು. ಹೈದರಾಬಾದ್ ಸಂಸ್ಥಾನದಲ್ಲಿ ನಿಜಾಮ್ ಆಳ್ವಿಕೆಯನ್ನು ಮುಂದುವರಿಸಬೇಕೆಂದು ರಜಾಕಾರರ ನಿಲುವಾಗಿತ್ತು. ಅದಕ್ಕಾಗಿ ಅವರು ನಡೆಸಿದ ಕ್ರೌರ್ಯಗಳು ಇಂದಿಗೂ ಕಣ್ಣಮುಂದೆ ಕಟ್ಟುತ್ತವೆ. ಆ ಕ್ರೌರ್ಯವನ್ನು ಹತ್ತಿಕ್ಕಲು ಈ ಪ್ರದೇಶದ ಜನರು ಸಂಘಟಿತರಾಗಿ ಶಸ್ತ್ರಗಳನ್ನು ಬಳಸಿ ಯುದ್ಧವನ್ನೇ ನಡೆಸಿದ್ದಾರೆ. ಈ ಯುದ್ಧವನ್ನು ಈ ಕವಿಗಳು ಕಣ್ಣಾರೆ ಕಂಡಿದ್ದು, ಅನುಭವಿಸಿ ಅದರಲ್ಲಿ ಭಾಗಿಗಳೂ ಆಗಿದ್ದಾರೆ. ರಜಾಕಾರರ ದಾಳಿ

ಎಂದರೆ ಅದು 'ಪರಕೀಯರ' ದಾಳಿಯೆಂದೇ ತಿಳಿಯಲಾಗಿತ್ತು. ಅವರೊಡನೆ ಶಸ್ತ್ರಧಾರಿಗಳಾಗಿಯೇ ಈ ಭಾಗದ ಜನ ಯುದ್ಧದ ರೀತಿಯಲ್ಲಿಯೇ ಹೋರಾಡಿದ್ದಾರೆ. ಇಲ್ಲಿನ ಜನತೆಯಲ್ಲಿ ನಾಡು-ನುಡಿಯ ಬಗ್ಗೆ ಸ್ವಾಭಿಮಾನ, ಆತ್ಮಾಭಿಮಾನ, ತ್ಯಾಗ-ಬಲಿದಾನ ಮುಂತಾದ ಮೌಲ್ಯಗಳನ್ನು ತಿಳಿಸಬೇಕಾಗಿತ್ತು. ಜನರಲ್ಲಿ ವಿಶ್ವಾಸ ಮೂಡಿಸುವ, ಅವರನ್ನು ಹುರಿದುಂಬಿಸುವ ಜವಾಬ್ದಾರಿಯೂ ಈ ಕವಿಗಳ ಮೇಲಿತ್ತು. ಈ ಧೋರಣೆ ಗಡಿ ಸಮಸ್ಯೆಯಿಂದ ಉಂಟಾದ ಭಾರತ-ಚೀನಾದ ನಡುವೆ ನಡೆದ ಯುದ್ಧದ ಸಂದರ್ಭದಲ್ಲೂ ಕೆಲಸ ಮಾಡಿದೆ. ರಜಾಕಾರರ ದಾಳಿಯ ವಿರುದ್ಧ ನಡೆದ ಯುದ್ಧಕ್ಕೂ, ಭಾರತ-ಚೀನಾ ನಡುವೆ ನಡೆದ ಯುದ್ಧಕ್ಕೂ ಯಾವ ವ್ಯತ್ಯಾಸವನ್ನು ಈ ಕವಿಗಳು ಕಾಣುವುದಿಲ್ಲ. ಪರಕೀಯರಂತೆ ಕಂಡ ರಜಾಕಾರರನ್ನು ನಾಶಮಾಡಬೇಕೆಂಬ ಅದಮ್ಯ ಕೋಪವು, ಭಾರತದ ಮೇಲೆ ಚೀನಿಯರು ಮಾಡಿದ ದಾಳಿಯು ಇವರನ್ನು ಕೆರಳಿಸಿದೆ. ಪಂಚಾಕ್ಷರಿ ಹಿರೇಮಠರು 'ನೀ ರುದ್ರನಾಗು' ಎಂಬ ಕವನ ಸಂಕಲನದಲ್ಲಿ ಚೀನಿಯರು ಯುದ್ಧ ಸಾರಿದ ಬಗ್ಗೆ ಎಲ್ಲಿಲ್ಲದ ರೋಷದಿಂದ ಬರೆದಿದ್ದಾರೆ. ನಿಜಾಮನ-ರಜಾಕಾರರ ವಿರುದ್ಧ ಹೋರಾಡಿದ ಅನುಭವಗಳು ನೇರವಾಗಿ ಅವರ ಕಾವ್ಯದಲ್ಲಿ ವ್ಯಕ್ತವಾಗಿವೆ. ಗಡಿಯ ಜಗಳದಿಂದ ಉಂಟಾದ ದೂರದ ಚೀನಾ-ಭಾರತದ ಯುದ್ಧ ಇವರ ಮೇಲೆ ಆಗಾಧ ಪ್ರಭಾವ ಬೀರಿರುವುದು ಮೇಲು ನೋಟಕ್ಕೆ ಆಶ್ಚರ್ಯವೆನಿಸುತ್ತದೆ. ಇದಕ್ಕೆ ಆಂತರಿಕ ಕಾರಣವೂ ಇದೆ. ಅಂದಿನ ಸಾಹಿತ್ಯಿಕ, ರಾಜಕೀಯ ವಾತಾವರಣದಲ್ಲಿ 'ರಾಷ್ಟ್ರಾಭಿಮಾನ', 'ಭಾರತೀಯತೆ' ಮುಂತಾದ ಕಲ್ಪನೆಗಳಲ್ಲಿ ಸ್ಥಳೀಯ ವಿದ್ಯಮಾನಗಳು ಹಿನ್ನೆಲೆಗೆ ಸರಿದಿದ್ದವು. ಹೀಗಾಗಿ ಸ್ಥಳೀಯ ಹೋರಾಟಗಳು ಲೆಕ್ಕಕ್ಕೆ ಬರದೆ ಗೌಣವಾದವು. ಆದರೆ ಅದರ ಅನುಭವಗಳನ್ನೇ ರಾಷ್ಟ್ರೀಯವಾದಿ ನೆಲೆಗೆ ಹೊಂದಿಸಿ ಈ ಸಂದರ್ಭವನ್ನು ಬಳಸಿಕೊಂಡು ಬರೆದಿರುವುದು ವಿಶಿಷ್ಟ ಸಂಗತಿಯಾಗಿದೆ. ದೇವೇಂದ್ರಕುಮಾರ ಹಕಾರಿ ಅವರ 'ನಾವು ಭಾರತ ಯೋಧರು', 'ಬಂಧು', 'ಯೋಧ', 'ಸ್ವಾತಂತ್ರ್ಯ ಯೋಧರನ್ನು ನೆನೆದು', 'ರಣಭೇರಿ' ಮುಂತಾದ ಕವಿತೆಗಳು ಇದಕ್ಕೆ ನಿದರ್ಶನವಾಗಿವೆ.

ನಿಜಾಮನ-ರಜಾಕಾರರ ವಿರುದ್ಧ ಈ ಪ್ರದೇಶದ ಜನರು ಹೋರಾಡುವುದು ಅನಿವಾರ್ಯವಾಗಿತ್ತು. ಅದರಲ್ಲೂ ಇಲ್ಲಿನ ಜನರಿಗೆ ರಜಾಕಾರರ ದಾಳಿಯನ್ನು ಎದುರಿಸುವುದು ಜೀವನ್ಮರಣದ ಪ್ರಶ್ನೆಯಾಗಿತ್ತು. ನಿಜಾಮನ-ರಜಾಕಾರರ ವಿರುದ್ಧ ಹೋರಾಡಲು ಈ ಪ್ರದೇಶದ ಜನರು ಸಂಘಟಿತರಾಗಿ ಸಮೂಹಿಕವಾಗಿ ಯುದ್ಧವನ್ನೇ ಹೂಡಬೇಕಾದ ಅನಿವಾರ್ಯತೆ ಒದಗಿ ಬಂತು. ಈ ಸಂದರ್ಭದಲ್ಲಿ ಹುಟ್ಟಿದ ಜನತೆಯ ಸಂಘಟನೆಯಾಗಿದ್ದ 'ಹೈದರಾಬಾದ್ ರಾಜಕೀಯ ಪರಿಷತ್' ಮೂರನೆಯ ಅಧಿವೇಶನದಲ್ಲಿ ನೇತಾಜಿ ಸುಭಾಷ್ ಚಂದ್ರ ಬೋಸ್ ಅವರು ಪಾಲ್ಗೊಂಡು ಹೋರಾಟಕ್ಕೆ ಸ್ಫೂರ್ತಿ ನೀಡಿದ್ದರು. ಅಷ್ಟೇ ಅಲ್ಲ ಈ ಪ್ರದೇಶದ ಯುವಕರಿಗೆ ಹೋರಾಡಲು ಸೈನಿಕ ತರಬೇತಿ ಬೇಕಾದ ಸಂದರ್ಭದಲ್ಲಿ ಅಜಾದ್ ಹಿಂದ್ ಸೈನ್ಯದಲ್ಲಿದ್ದ ಸೈನಿಕರೇ ಬಂದು ನೀಡಿದ್ದರು. ಹೀಗಾಗಿ ನಿಜಾಮನ-ರಜಾಕಾರರ ವಿರುದ್ಧ ಯುದ್ಧ ಹೂಡಲು ಬೋಸ್‌ರವರ ಪ್ರೇರಣೆ ಈ ಭಾಗದ ಜನರಲ್ಲಿ ತೀವ್ರವಾಗಿತ್ತು. 'ನೀವು ರಕ್ತ ಕೊಡಿ, ನಾ

ಸ್ವಾತಂತ್ರ್ಯ ಕೊಡುವೆ' ಎಂಬ ಭೋಸ್‌ರ ಘೋಷಣೆ ಈ ಹೋರಾಟದಲ್ಲಿ ಮಂತ್ರದಂತೆ ಪರಿಣಮಿಸಿದೆ. ದೇವೇಂದ್ರಕುಮಾರ ಹಕಾರಿ ಅವರ 'ಸ್ಮರಣೆ' ಕವಿತೆ ಬೋಸ್‌ರನ್ನು ಕುರಿತು ಇರುವುದಕ್ಕೆ ಇದೇ ಸಾಕ್ಷಿಯಾಗಿದೆ. ಈ ಪ್ರದೇಶದ ಕವಿಗಳು 'ಯುದ್ಧಗಳ' ಬಗ್ಗೆ ವೀರಾವೇಶದಿಂದ ಬರೆದಿರುವುದಕ್ಕೆ ಅವರ ಸ್ವಂತ ಅನುಭವಗಳೇ ಕಾರಣವಾಗಿವೆ.

'ಬಿರುಗಾಳಿ' (ಸಗರ ಕೃಷ್ಣಾಚಾರ್ಯ) ಎಂಬ ಕವನ ಮಹಾಯುದ್ಧಗಳನ್ನು ಕುರಿತಿದೆ. 'ಒಂದು ರಣಗೀತೆ' (ಎಂ.ಲಕ್ಷ್ಮಣ) ಪಾಕಿಸ್ತಾನ ದಾಳಿಯನ್ನು 'ಸತ್ಯಮೇವ ಜಯತೆ' (ಶಿವಶರಣ ಜಾವಳಿ) ಚೀನಾದ ದಾಳಿಯನ್ನು ಕುರಿತಿದೆ. ಯುದ್ಧವೆಂದರೆ ಭಯ ಮತ್ತು ವಿಚಿತ್ರ ಧೈರ್ಯ ಈ ಕವಿಗಳಲ್ಲಿ ಕಾಣುತ್ತದೆ. ಭಾರತವು ಬ್ರಿಟೀಶರ ದಾಸ್ಯದಿಂದ ಬಿಡುಗಡೆಯಾದ ಮೇಲೆ 'ಸ್ವತಂತ್ರ ಭಾರತವು' ಹೇಗೆ ರೂಪಗೊಳ್ಳಬೇಕು? ಮುಂದಿನ ಭವಿಷ್ಯದಲ್ಲಿ ಭಾರತ ಹೇಗೆ ಪ್ರಗತಿ ಸಾಧಿಸಬೇಕು? ಜನತೆ ಕೂಡ 'ಆಧುನಿಕ ಭಾರತ'ವನ್ನು ಕಟ್ಟಲು ಶ್ರಮಿಸಬೇಕು ಎಂಬ ಕನಸುಗಳನ್ನು ಈ ಭಾಗದ ಕವಿಗಳು ಕಂಡಿದ್ದಾರೆ. ಸ್ವಾತಂತ್ರ್ಯದ ಸಂಭ್ರಮ ಮತ್ತು ಭಾರತದ ಮುಂದಿನ ದಾರಿಯ ಬಗ್ಗೆ ಉತ್ಸಾಹದಿಂದ ಭರವಸೆಯ ಕನಸುಗಳನ್ನು ಕಂಡ ಕವಿಗಳಲ್ಲಿ ಹನುಮಂತಾಚಾರ್ಯ ಉಪಾಧ್ಯಾಯ ಮುಖ್ಯರು. ಐವತ್ತರ ದಶಕದಲ್ಲಿ ಅವರು ಕಂಡ ಕನಸುಗಳನ್ನು 'ಶುಭೋದಯ', 'ನವಭಾರತ' ಎಂಬ ಕವಿತೆಗಳಲ್ಲಿ ಅಧ್ಯಾತ್ಮದಿಂದ, ಯೋಗದಿಂದ, ವಿಜ್ಞಾನದಿಂದ, ಕೈಗಾರಿಕೆಯಿಂದ, ಹಸಿರು ಕ್ರಾಂತಿಯಿಂದ ಪ್ರಾಕೃತಿಕ ಸಂಪತ್ತಿನಿಂದ, ಸಾಹಿತ್ಯ, ಕಲೆ ಸಂಗೀತದಿಂದ, ನಾಗರಿಕ ಸೌಲಭ್ಯಗಳಿಂದ ಇವೆಲ್ಲವುಗಳನ್ನು ಒಗ್ಗೂಡಿಸಿ ಕವನಗಳನ್ನು ಬರೆದಿದ್ದಾರೆ. ಇಂಥ ಭವ್ಯ ಭಾರತದ ನಿರ್ಮಾಣದಲ್ಲಿ ಎಲ್ಲರೂ ದುಡಿಯಬೇಕು ಎಂದು ಹೇಳುತ್ತ

'ಬೇಡ ಕಪಟ ಕುಟಿಲ ರಾಜಕಾರಣಕ್ಕೆ ಮನ್ನಣೆ
ಸತ್ಯ, ಸಮತೆ, ಸ್ನೇಹ, ಶಾಂತಿ ರಾಷ್ಟ್ರ ಕಾರ್ಯಪ್ರೇರಣೆ
ಒಳಿತುಕೊಂಡು ಒಳಿತುಕೊಟ್ಟು ಒಳಿತು ಬೆಳೆವ ಧೋರಣೆ
ಜಗದಿ ಒಳಿತಿಗಾಗಿ ಬೇಕು ಸಹಜೀವನ ಭಾವನೆ.'[೧೯] (ಹನುಮಂತಾಚಾರ್ಯ ಉಪಾಧ್ಯಾಯ

: ನವಭಾರತ) ಇಡೀ ಕವಿತೆಯಲ್ಲಿ ಆದರ್ಶ ತುಂಬಿದೆ. ಅಲ್ಲಿ ಕವಿಯ ಮುಗ್ಧತೆಯಿದೆ. ಆದರೆ ಕವಿಯ ಕನಸಿನ 'ನವಭಾರತ' ಸೃಷ್ಟಿಯಲ್ಲಿ ಮನುಷ್ಯನ ಪಾಲು ಮುಖ್ಯ ಎಂಬ ಅರಿವು ಇದೆ. ಈ ಅರಿವಿನಿಂದಲೇ ಮನುಷ್ಯನ ಬಗ್ಗೆ ಅನುಮಾನವೂ ವ್ಯಕ್ತವಾಗಿದೆ. ಮನುಷ್ಯನ ಸಣ್ಣತನ, ಸ್ವಾರ್ಥದಿಂದ ನವಭಾರತ ಕಟ್ಟಲು ಸಾಧ್ಯವೇ ಎಂಬ ಅನುಮಾನ ಈ ಕವಿತೆಯಲ್ಲಿ ಕಾಣುತ್ತದೆ. ಅದಕ್ಕಾಗಿ ಸ್ವಾತಂತ್ರ್ಯ ಪಡೆಯಲು ಕ್ರಾಂತಿಯಾದಂತೆ ಮನುಷ್ಯರಲ್ಲಿ ಸಹಜೀವನ, ಸಹಬಾಳ್ವೆ ಬೆಳೆಯಲು ಮೊದಲು ಕ್ರಾಂತಿಯಾಗಬೇಕೆಂದು 'ಕ್ರಾಂತಿಗೆ ಆಹ್ವಾನ' ಎಂಬ ಕವಿತೆಯಲ್ಲಿ ಕವಿ ವ್ಯಕ್ತಪಡಿಸಿದ್ದಾನೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ದಿನಕಳೆದಂತೆ ಉದ್ಭವಿಸಿದ ಸಮಸ್ಯೆಗಳು ಈ ಆದರ್ಶವಾದಿ, ಮುಗ್ಧ ಕವಿಗೆ ದಿಗಿಲು ಹುಟ್ಟಿಸಿದೆ. ಸಹಜೀವನ, ಸಹಬಾಳ್ವೆಯ ಕನಸು ಒಡೆದು

ಹೋದಂತೆ ಬೆಚ್ಚಿಬಿದ್ದಿದ್ದಾನೆ. ಮನುಷ್ಯ-ಮನುಷ್ಯನ ನಡುವೆ ಏರ್ಪಟ್ಟ ಕಂದರ ಮುಚ್ಚಲಾರದಂಥದ್ದು ಎಂಬ ಸತ್ಯ ಇಲ್ಲಿ ಗೋಚರಿಸಿದೆ.

'ಸಾಸಿರದ ಜನುಮಗಳು ಶ್ರೀಮಂತರ ಸೇವೆಯಲಿ
ಸವೆದರೂ ಬಡತನವು ಸವೆದುದಿಲ್ಲ
ಜೀತಕ್ಕೆ ಆಳಾಗಿ ಬಾಳೆಲ್ಲ ದುಡಿದರೂ
ಮಧ್ಯಮರ ಬಾಳ್ ಬವಣೆ ಮುಗಿದುದಿಲ್ಲ

ಆಯಾಸವಿಲ್ಲದಲೆ ಆಗರ್ಭಶ್ರೀಯುತರ
ಮಹಲಿಗೇರುವುವು ಉಪ್ಪರಿಗೆ ಏಳು
ಕಲ್ಲುಗಳ ಕಟೆಕಟೆದು ಗಟ್ಟು-ಗಾರೆಯ ಹೊತ್ತು
ಬಳಲಿದರು ತಲೆಗಿರದು ಮನೆಯ ನೆರಳು

ರಚನೆಗೊಳ್ಳಲಿ ನಾಡು ಅರ್ಥ ಸಮತೆಯ ಹದಕ್ಕೆ
ಹಸನುಗೊಳ್ಳಲಿ ನಾಡ ಬಡಜನರ ಬದುಕು
ಅಸನ-ವ್ಯಸನದ ಚಿಂತೆ ಹರಿದೊಮ್ಮೆ ನಾಡಿನಲಿ
ಸಂತೃಪ್ತಿ-ಸಂಮೃದ್ಧಿಗಳು ನೆಲಸಬೇಕು'[೨೦](ಹನುಮಂತಾಚಾರ್ಯ ಉಪಾಧ್ಯಾಯ : ಕ್ರಾಂತಿಗೆ ಆಹ್ವಾನ) ಈ ಕವನದಲ್ಲಿ ಅನೇಕ ವೈರುಧ್ಯಗಳಿವೆ. ಕವಿಯ ಆ ವೈರುಧ್ಯಗಳಿಗೆ ಅರ್ಥವಿದೆ. ಭಾರತಕ್ಕೆ ಸ್ವಾತಂತ್ರ್ಯ ಬಂದದ್ದು ಕೇವಲ ರಾಜಕೀಯ ಸ್ವಾತಂತ್ರ್ಯ. ಶ್ರೀಮಂತರಿಗೆ, ಅಧಿಕಾರಿಗಳಿಗೆ ಮಾತ್ರ ಸ್ವಾತಂತ್ರ್ಯ ಬಂದಿದೆ ಎಂಬ ಸ್ಥಿತಿ ನಿರ್ಮಾಣವಾಗಿತ್ತು. ನಿಜಾಮ್ ಕರ್ನಾಟಕದಲ್ಲಿ ಬಡವನ ಗೋಳು ನಿರಂತರವಾದದ್ದು ಎಂಬುದು ಕವಿಗೆ ಅರಿವಾಗಿದೆ. ಕವಿಯ ಆಶಾವಾದಿತನದ ಮತ್ತು ಭ್ರಮನಿರಸನಗಳು ಈ ಎರಡು ವೈರುಧ್ಯಗಳಿಗೆ ಸಮಾಜದ ಚಲನೆಯಲ್ಲಿ ಕಂಡ ವಿದ್ಯಮಾನಗಳೇ ಕಾರಣವಾಗಿವೆ. ಹನುಮಂತಾಚಾರ್ಯ ಉಪಾಧ್ಯಾಯ, ಸಗರ ಕೃಷ್ಣಾಚಾರ್ಯ, ಸಿದ್ಧಯ್ಯ ಪುರಾಣಿಕ ಮುಂತಾದ ಈ ಭಾಗದ ಕವಿಗಳು ಮೂಲತಃ ನವೋದಯ ಮಾರ್ಗದ ಅನುಯಾಯಿಗಳು. ವಿಶ್ವಮಾನವತ್ವದ ಕಲ್ಪನೆ, ಆದರ್ಶವಾದ, ಮಾನವತಾವಾದ, ರಾಷ್ಟ್ರೀಯವಾದ ಈ ಅಂಶಗಳು ಈ ಕವಿಗಳಲ್ಲಿ ಮನೆ ಮಾಡಿದ್ದವು. ಭಾರತದ ಪರಿಸ್ಥಿತಿ, ಇಲ್ಲಿಯ ಬಡತನ, ಶೋಷಣೆ ಮುಂತಾದವುಗಳ ಅರಿವಿದ್ದರೂ ಮನುಷ್ಯನನ್ನು ಔನ್ನತ್ಯಕ್ಕೇರಿಸುವ ಪ್ರಯತ್ನ ಮಾಡಿದರು. ಬಡವ ಬಲ್ಲಿದವರ ನಡುವಿನ ವ್ಯತ್ಯಾಸಗಳನ್ನು, ಅದಕ್ಕಿರುವ ಕಾರಣಗಳನ್ನು ಗಂಭೀರವಾಗಿ ಪರಿಶೀಲಿಸಲು ಹೋಗಲಿಲ್ಲ. 'ಸ್ವತಂತ್ರ್ಯ ಭಾರತದ ನಾಯಕ'ರಾದ ನೆಹರೂ ಅವರ 'ಸಮತಾವಾದ'ವನ್ನು ಈ ಕವಿಗಳು ಮನಸ್ಸಿನಲ್ಲಿ ಇಟ್ಟುಕೊಂಡಂತಿದೆ. ದೇಶದ ಪ್ರಗತಿಯಲ್ಲಿ ಮನುಷ್ಯರ ಬಾಳು ಸುಧಾರಿಸುತ್ತದೆ. ಸಮಪಾಲು, ಸಮಬಾಳು ಭಾರತೀಯನದಾಗುತ್ತವೆ ಎಂಬ ಆದರ್ಶದ ನೆಲೆಯಲ್ಲಿ ಸಮಾಜ ಮತ್ತು ಮನುಷ್ಯನನ್ನು ಗ್ರಹಿಸಲಾಯಿತು. ಜೊತೆಗೆ ಆಧ್ಯಾತ್ಮ ಸೇರಿಕೊಂಡು ಮನುಷ್ಯನನ್ನು ಚಾರಿತ್ರಿಕ ಸಂದರ್ಭದಲ್ಲಿಟ್ಟು ನೋಡದೆ ವೈಭವೀಕರಿಸಲಾಯಿತು.

ಸಗರ ಕೃಷ್ಣಾಚಾರ್ಯರ 'ರಾಷ್ಟ್ರೀಯ ಭಾವೈಕ್ಯತೆ' ಕವಿತೆಯನ್ನು ನೋಡಿದರೆ ಆ ಕಾಲದ ಕವಿಗಳ ಆದರ್ಶ, ಭ್ರಮನಿರಸನ ಯಾವ ಹಂತವನ್ನು ತಲುಪಿತ್ತು ಎಂಬುದು ಅರ್ಥವಾಗುತ್ತದೆ.

ಭಾರತಕ್ಕೆ ಸ್ವಾತಂತ್ರ್ಯ ಸಿಗುವ ಮುನ್ನಿನ ಕನಸುಗಳು ಸ್ವಾತಂತ್ರ್ಯಾನಂತರ ಒಡೆದು ಹೋದದ್ದು ಕವಿಗಳ ವಿಷಾದಕ್ಕೆ ಕಾರಣವಾಗಿದೆ. ದೇಶ, ಭಾಷೆ, ಜನ, ಸಮಾಜ ಸಂಸ್ಕೃತಿಯ ಬಗ್ಗೆ ಎಷ್ಟು ಆಶಾವಾದಿಯಾಗಿದ್ದರೋ ಅವರ ಕಣ್ಣಮುಂದೆಯೇ ಅವು ವಿಕೃತಗೊಂಡಂತೆ ಕಂಡವು. ಅದರಿಂದಾಗಿ ಅವರಿಗೆ ಅದು ವ್ಯಥೆಯ ಸಂಗತಿಯಾಗಿ ಪರಿಣಮಿಸಿತು. ಯಾವುದನ್ನು ಕುರಿತು ಹಾಡಿ ಹೊಗಳಿದರೋ ಅದರ ಬಗ್ಗೆಯೇ ಆಕ್ರೋಶಗೊಳ್ಳುವಂತಾಯಿತು. ರಾಜಕೀಯ, ಧಾರ್ಮಿಕ, ಸಾಮಾಜಿಕ ವ್ಯವಸ್ಥೆಗಳಷ್ಟೇ ಅಲ್ಲದೆ ಈ ಭಾಗದ ಪ್ರಾಕೃತಿಕ ಏರಿಳಿತಗಳು ಇಲ್ಲಿನ ಸಾಹಿತಿಗಳನ್ನು ಕಾಡಿದೆ. ಮಾನ್ವಿ ನರಸಿಂಗರಾವ್ ಅವರ ಒಂದು ಕವನ ಆ ಸಾಲಿಗೆ ಸೇರುತ್ತದೆ ಅದರ ಕೆಲ ಸಾಲುಗಳು ಇಂತಿವೆ.

'ಬೆಟ್ಟ ಬಿಸಿಲಿನರಾಜ ಲೋಕಜೀವನಸುಡುವೆ;
ನಿನ್ನ ದರ್ಪಕೆ ಲೋಕಬರತು ಬೆಂಡಾಗಿಹುದು;
ಕಾಡುಮೃಗ ಪಕ್ಷಿಕುಲ ಸಸ್ಯಸಂತಾನಗಳು
ನಿನ್ನ ಸಂತಾಪಕೆ 'ಶಿವಧೋ' ಎನ್ನುತಲಿಹವು
ನಿನ್ನ ರಕ್ಕಸದರ್ಪ ಸಹಿಸದಲೆಲೋಕಜನ
ಮೈಯೆಲ್ಲ ಕಣ್ಣಾಗಿ ಅಳುತಿಹುದೊ ಎಂಬಂತೆ
ಬೆಮರುಹೊಳೆ ಹರಿಸುವುದು; ಬೆದರಿಕೆಯ ಕರಹೊ ಎನೆ'[೨೦] (ಮಾನ್ವಿ ನರಸಿಂಗರಾವ್ : ವೈಶಾಖ)

ಹೈದರಾಬಾದ ಕರ್ನಾಟಕವು ಮೊದಲಿನಿಂದಲೂ ಪ್ರಾಕೃತಿಕ ಅವಘಡಗಳನ್ನು ಅನುಭವಿಸುತ್ತಲೇ ಬಂದಿದೆ. ಈ ಪ್ರದೇಶದ ಜನರು ಒಂದೆಡೆ ಪ್ರಭುತ್ವದ, ಇನ್ನೊಂದೆಡೆ ಪ್ರಕೃತಿಯ ಹೊಡೆತಗಳನ್ನು ತಿನ್ನುತ್ತಲೇ ಬಂದಿದ್ದಾರೆ. ಈ ಪ್ರದೇಶವು ಅತಿವೃಷ್ಟಿ, ಅನಾವೃಷ್ಟಿ, ಭೂಕಂಪಗಳಂತ ಪ್ರಕೃತಿಯ ಮುನಿಸುಗಳನ್ನು ಅನುಭವಿಸಿದೆ. ಮೇಲಿನ ಕವಿತೆಯಲ್ಲಿ ಬಿಸಿಲಿನ ತಾಪವನ್ನು ಚಿತ್ರಿಸಲಾಗಿದೆ. ಅದರಿಂದ ಪ್ರಾಣಿಗಳಷ್ಟೇ ಅಲ್ಲದೇ ಪಕ್ಷಸಂಕುಲಕ್ಕೂ ತೊಂದರೆ ಎಂಬುದನ್ನು ಕವಿಯ ಸೂಕ್ಮ ಮನಸ್ಸು ಗ್ರಹಿಸಿದೆ. ಬಿಸಿಲಿನ ಝಳದಿಂದ 'ಮೈಯೆಲ್ಲ ಕಣ್ಣಾಗಿ ಅಳುತಿಹುದೊ ಎಂಬಂತೆ ಬೆಮರುಹೊಳೆ ಹರಿಸುವುದು' ಎಂದು ಹೇಳಿರುವ ಮಾತುಗಳು ಕಾವ್ಯದ ವಿಶಿಷ್ಟತೆಯನ್ನು ಹೆಚ್ಚಿಸಿವೆ.

ಈ ಭಾಗದ ಪ್ರಮುಖ ನವೋದಯ ಮಾರ್ಗದ ಕವಿ 'ಆಧುನಿಕ ವಚನಕಾರ' ಎಂದು ಹೆಸರಾದ ಸಿದ್ಧಯ್ಯ ಪುರಾಣಿಕರ ಕಾವ್ಯದಲ್ಲಿ ಪ್ರಕೃತಿ ಆರಾಧನೆ, ಜನಸಾಮಾನ್ಯರ ಬಗೆಗಿನ ಕಾಳಜಿ ಹೆಚ್ಚಾಗಿ ಕಾಣಿಸಿದೆ. ರಾಜಪ್ರಭುತ್ವ ಹೋಗಿ ಪ್ರಜಾಪ್ರಭುತ್ವ ಬಂದರೂ, ಪ್ರಜಾರಾಜ್ಯ ಕೇವಲ ಹೆಸರಿಗೆ ಹೊರತು ನಿಜವಾದ ಅರ್ಥದಲ್ಲಿ ಆಗಲಿಲ್ಲ. ದೇಶವನ್ನಾಳುವ ಸರಕಾರದ

ನೀತಿ–ನಿಯಮಗಳು ದೇಶವನ್ನು, ದೇಶದ ಪ್ರಜೆಗಳನ್ನು ಸುವ್ಯವಸ್ಥಿತ ಸ್ಥಿತಿಗೆ ತರಲಾಗಲಿಲ್ಲ ಎಂದು ಕವಿ ತಮ್ಮ ಅನೇಕ ಕವನಗಳಲ್ಲಿ ಅಭಿಪ್ರಾಯ ಪಡುತ್ತಾರೆ.

೧೯೪೭ರ ಆಗಸ್ಟ್ ೧೫ರ ದಿನ ಭಾರತೀಯರಿಗೆ ರೋಮಾಂಚನದ ದಿನವಾಗಿತ್ತು. 'ಸ್ವಾತಂತ್ರ್ಯ' ಸಿಕ್ಕ ಫಲವನ್ನು ಅನುಭವಿಸುವುದೇ ಪರಮಾನಂದ ಎನಿಸಿತು. ಧ್ವಜಾರೋಹಣ ಮಾಡುವುದರ ಮೂಲಕ ಅಂದಿನವರೆಗೆ ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟ, ಅದರಿಂದ ಅನುಭವಿಸಿದ ನೋವು ಎಲ್ಲವೂ ಹೆರಿಗೆಯ ನಂತರ ಮರೆಯುವಂತೆ ಭಾರತೀಯ ಹೋರಾಟಗಾರನ ಸ್ಥಿತಿಯಾಗಿತ್ತು. ಆದರೆ ಹೈದರಾಬಾದ್ ಕರ್ನಾಟಕಕ್ಕೆ ಆ ಭಾಗ್ಯವಿರಲಿಲ್ಲ. 'ಹೈದರಾಬಾದ್ ಸಂಸ್ಥಾನ'ವನ್ನು ನಿಜಾಮ ಸ್ವತಂತ್ರವಾಗಿ ಆಳುವ ನಿರ್ಧಾರ ತೆಗೆದುಕೊಂಡಿದ್ದರಿಂದ, ೧೯೪೭ರ ಆಗಸ್ಟ್ ೧೫ ರಂದು ನಿಜಾಮನ ರಾಜ್ಯದಲ್ಲಿ ತ್ರಿವರ್ಣ ಧ್ವಜವನ್ನು ಯಾರೂ ಹಾರಿಸುವಂತಿರಲಿಲ್ಲ. ಆದರೆ ಸ್ವಾತಂತ್ರ್ಯದ ಕನಸು ಕಂಡ ಜನರಿಗೆ ಧ್ವಜಾರೋಹಣ ಮಾಡುವ ಉತ್ಸಾಹ ತುಂಬಿತ್ತು. ನಿಜಾಮನ ಆಜ್ಞೆಯನ್ನು ಮೀರಿ ಧ್ವಜಾರೋಹಣ ಮಾಡಿದವರಿಗೆಲ್ಲ ನಿಜಾಮ್ ಸರಕಾರದ ಪೋಲೀಸರ ಒದೆ, ಸೆರೆಮನೆ ವಾಸ ಕಾದಿತ್ತು. ಕೆಳಗಿನ ಕವಿತೆಯಲ್ಲಿ ಇಂಥ ಸನ್ನಿವೇಶದ ಅರಿವಿದೆ. ಸ್ವಾತಂತ್ರ್ಯದ ಕನಸು ಕಂಡು ಹೋರಾಡಿದ ಸಾಹಸಿಗರಿಗೆ ಅಂದಿನ ದಿನ ಎಲ್ಲ ನಿರ್ಬಂಧಗಳನ್ನು ಎದುರಿಸಿ ಧ್ವಜಹಾರಿಸಿ, ಪೋಲೀಸರಿಂದ ಬೂಟುಗಾಲಿನಿಂದ ಒದೆ ತಿಂದರೂ ಅದು ನೋವಿನ ವಿಷಯವಾಗಿರಲಿಲ್ಲ. ಹರ್ಷ, ರೋಮಾಂಚನದ ವಿಷಯವಾಗಿತ್ತು. ನೋವೆ ಇಲ್ಲಿ ಒಂದು ರೀತಿಯ ಸುಖವನ್ನು ನೀಡುತ್ತಿತ್ತು.

'ಆ ಒದೆಯ ನೋವಿನಾಳದಲಿ ನೂರು
ಸುಂದರ ಹೊಂಗನಸುಗಳು ಮೈ ಮುರಿಯುತ್ತಿದ್ದುವು.
ಆ ನರಳಿಕೆಯ ಜಿಂಹ್ವೆಯಲಿ ಭವ್ಯಭಾರತದ
ಹಾಡುಗಳು ಗುಣುಗುಣಿಸುತ್ತಿದ್ದುವು.
ಸುಡುಸುಡುವ ಸುರಿವ ನೆತ್ತರಲಿ ಮೂಡಿತ್ತು
ಸಸ್ಯಶಾಮಲೆಯ ನಿತ್ಯ ನಿರ್ಮಲೆಯ ತನಿರೂಪು'[೨೨] (ಶಾಂತರಸ : ಹದಿನೈದು ಆಗಸ್ಟ್)

ಆದರೆ ಸ್ವಾತಂತ್ರ್ಯಾ ನಂತರದ ಭಾರತದ ಪರಸ್ಥಿತಿಯನ್ನು ನೆನೆದು ಹಿಂದೆ ಅನುಭವಿಸಿದ ನೋವಿನಲ್ಲಿ ಅರಳಿದ ಸಂತಸ ಮಾಯವಾಗಿ ಹಳೆಯ ಪೆಟ್ಟು ಮರುಕಳಿಸುವಂತೆ ಮರುಕಗೊಳಿಸಿ ಮೂಕ ನೋವು ಕಾಣಿಸತೊಡಗಿತು. ಅದು ಸ್ವಾತಂತ್ರ್ಯಕ್ಕಾಗಿ, ದಾಸ್ಯದ ಬಿಡುಗಡೆಗಾಗಿ ಹೋರಾಡಿದ ಜೀವಗಳಿಗೆ, ದೇಶದ ಸ್ಥಿತಿಗೆ ಕಂಡು ಮರುಗಿದ ನೋವೆಂದು ಕಾಣುತ್ತದೆ.

ಕನಸು ಒಡೆಯಿತ್ತು, ನೋವು ಮರುಕಳಿಸಿತ್ತು
ತಾಯ ವಸ್ತ್ರಾಪಹರಣ ನಡೆಯಿತ್ತು
ಉರುಳುತಿಹ ಕಾಲವೇ ಹೆಬ್ಬಾವಾಗಿ
ಈ ನೆಲದ ಧಮನಿಗಳ ಕಚ್ಚಿತ್ತು

ನಾಯಿ ಮುಟ್ಟಿದ ಗಡಿಗೆ ಈ ಬಾಳು
ಇರುಳಿನಲ್ಲಿ ಕೊಡೆ ಹಿಡಿಸಿಕೊಂಬವರೆ ಮುಂದಾಳು
ಪ್ರಜರ ಕುತ್ತಿಗೆ ಹಿಚುಕಿ ನಲಿವ ಹೆಡೆ ಹಸ್ತಗಳು
ಹಾರಿಸಿ ಧ್ವಜಗಳು

ನಮ್ಮ ಆಶೋತ್ತರದ ಹೆಣಗಳು'[೨೨](ಶಾಂತರಸ : ಹದಿನೈದು ಆಗಸ್ಟ್) ಕವಿತೆಯಲ್ಲಿ ಅಸಹಾಯಕತೆ ಮಾತ್ರ ಉಳಿದಂತಿದೆ. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ತ್ಯಾಗಿಗಳಿಗೆ ಅಂದಿನ ರಾಜಕೀಯವನ್ನು, ರಾಜಕಾರಣವನ್ನು, ದೇಶವನ್ನು, ಜನತೆಯನ್ನು ಕಂಡು ಯಾರಿಗಾಗಿ ಸ್ವಾತಂತ್ರ್ಯವನ್ನು ತಂದು ಕೊಟ್ಟೇವು ಎಂಬ ವ್ಯಥೆಯು ತುಂಬಿ ಬಂದಿದೆ.

ಸಿದ್ಧಯ್ಯಪುರಾಣಿಕರು ಪ್ರಕೃತಿ ಸೌಂದರ್ಯಾರಾಧಕರು. ಮಾನವತಾವಾದಿಗಳು, ಅವರ ಕಾವ್ಯ-ವಚನಗಳು ಆದರ್ಶ, ಮಾನವೀಯತೆ ಮತ್ತು ಬೋಧನೆಯಿಂದ ತುಂಬಿವೆ. ಅವುಗಳಲ್ಲಿ ಸಮಾಜದ ಅಸಮಾನತೆಯ ಬಗೆಗಿನ ಚಿಂತೆ, ಅಸ್ತವ್ಯಸ್ಥ ರಾಜಕಾರಣದ ಬಗ್ಗೆ ನೈತಿಕ ಸಿಟ್ಟು, ಅನ್ಯಾಯ, ಶೋಷಣೆಗಳ ವ್ಯಂಗ್ಯ ಇದೆ. ವಚನ ಪರಂಪರೆಯಿಂದ ಪ್ರಭಾವಿತರಾದ ಅವರ ಕಾವ್ಯ-ವಚನಗಳಲ್ಲಿ ಶರಣರ ಆಶಯಗಳ ಮರು ಮಂಡನೆಯಾಗಿರುವುದು ಕಾಣುತ್ತದೆ. ನವೋದಯ ಮಾರ್ಗದ ಕವಿಗಳು ವಿಶ್ವಮಾನವತ್ವದ ಕಲ್ಪನೆ, ಆದರ್ಶ, ಕನಸು, ರಾಷ್ಟ್ರೀಯತೆ ಮುಂತಾದ ಮೌಲ್ಯಗಳನ್ನು ಪ್ರತಿಪಾದಿಸಲು ಪ್ರಯತ್ನಿಸಿರುವುದು ನಿಜವಾದರೂ ಇದನ್ನು ಮೀರಿ ವಾಸ್ತವವನ್ನು ಗ್ರಹಿಸಲು ಕೆಲವರು ಪ್ರಯತ್ನಿಸಿದ್ದಾರೆ. ಕರಸಿದ್ಧ, ಚೋಮ, ವೆಂಕಟಿಗ, ಮೊಸರಿನ ಮಂಗಮ್ಮ ಮುಂತಾದವರು ಅಸಹಾಕತೆಯನ್ನು ಗುರುತಿಸಲಾಯಿತು. ಈ ಸಾಧ್ಯತೆಗಳೂ ಈ ಭಾಗದ ಕವಿಗಳಲ್ಲಿ ಕಾಣಿಸಿದೆ.

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಅರವತ್ತರ ದಶಕದವರೆಗಿನ ಕಾವ್ಯವನ್ನು ಗಮನಿಸಿದಾಗ ರಾಷ್ಟ್ರೀಯ ಪ್ರಜ್ಞೆ, ಆದರ್ಶವಾದ, ಮಾನವೀಯತೆ, ಭಾಷಾಭಿಮಾನ ಪ್ರಧಾನವಾಗಿ ಕಾಣುತ್ತದೆ. ಬಿ.ಎಂ.ಶ್ರೀ ಅವರ 'ಇಂಗ್ಲೀಶ್ ಗೀತಗಳು' ಪ್ರಕಟಣೆಯೊಂದಿಗೆ ನವೋದಯ ಕಾವ್ಯ ಪ್ರಾರಂಭವಾಯಿತು. ಅದನ್ನು ಅನುಸರಿಸಿ ಈ ಭಾಗದಲ್ಲೂ ನವೋದಯ ಕಾವ್ಯ ಕಾಣಿಸಿಕೊಂಡಿತು. ಈ ಕಾವ್ಯದ ಮುಖ್ಯ ಆಶಯಗಳೆಲ್ಲ ಈ ಭಾಗದ ಕಾವ್ಯದಲ್ಲಿ ಮೂಡಿಬಂದವು. ಇದರಿಂದ ಸ್ಥಳೀಯ ವಿದ್ಯಮಾನಗಳು ಸಾಮಾಜಿಕ ಬದುಕಿನ ವಿವರಗಳು ಹಿನ್ನೆಲೆಗೆ ಸರಿದು, ರಾಷ್ಟ್ರೀಯವಾದಿ ನಿಲುವಿನಲ್ಲಿ ಈ ಕವಿಗಳು ಬರೆದರು. ಸ್ಥಳೀಯ ಸಮಸ್ಯೆಗಳು ರಾಷ್ಟ್ರೀಯ ಸಮಸ್ಯೆಗಳಿಗೆ ಪರಿವರ್ತಿಸಿ ಸ್ವಾತಂತ್ರ್ಯ ಹೋರಾಟಕ್ಕೆ ಅಣಿಗೊಳಿಸುವ ಧ್ಯೇಯವೂ ಇದರಲ್ಲಿತ್ತು. ಸ್ಥಳೀಯವಾಗಿ ಆಳ್ವಿಕೆ ನಿಜಾಮನದಿದ್ದರೂ ಬ್ರಿಟಿಷರನ್ನೂ ಹೊಡೆದೋಡಿಸುವಂತೆ ಕಾವ್ಯದಲ್ಲಿ ಕರೆಕೊಟ್ಟರು.

ನಿಜಾಮನ-ರಜಾಕಾರರ ವಿರುದ್ಧ ಯುದ್ಧದ ರೀತಿಯಲ್ಲಿಯೇ ಹೋರಾಡಿದ ಕವಿಗಳು ಅದರ ಅನುಭವವನ್ನು ಕಾವ್ಯದಲ್ಲಿ ಪಡಿಮೂಡಿಸುವ ಬದಲು, ಅಂಥ ಅನುಭವದ ಒಳಗಿರುವ ಧೈರ್ಯ, ಸಾಹಸ, ಆಕ್ರೋಶಗಳೆಲ್ಲ ಚೀನಾ, ಪಾಕಿಸ್ತಾನ ಯುದ್ಧಗಳ ಸಂದರ್ಭದಲ್ಲಿ ವ್ಯಕ್ತಪಡಿಸಿದರು.

'ಮನುಷ್ಯ' ಈ ಭಾಗದಲ್ಲಿ ದಮನಕ್ಕೆ ಒಳಗಾಗುತ್ತಿದ್ದರೂ ಮನುಷ್ಯನ ವ್ಯಕ್ತಿತ್ವದ ಘನತೆಯನ್ನು ಎತ್ತಿ ಹಿಡಿಯುವಂತೆ 'ದಿವ್ಯ ದಾರ್ಶಿಕನು', 'ಚಾರು ಚರಿತನು', 'ಧೀರ ಪುರುಷನು' (ಸಗರ ಕೃಷ್ಣಾಚಾರ್ಯ ಮುಂತಾದವರು) ಎಂದು ಬರೆದರು. ಅರವಿಂದ, ವಿವೇಕಾನಂದ, ಪರಮಹಂಸರ ಪ್ರಭಾವದಿಂದ ಆಧ್ಯಾತ್ಮದ ಹಿನ್ನೆಲೆಯಲ್ಲಿ ಮನುಷ್ಯನ ಆತ್ಮೋನ್ನತಿಯನ್ನು ಎತ್ತಿ ಹಿಡಿದರು. ಇದರಿಂದಾಗಿ ಸಾಮಾಜಿಕ ಕಾಳಜಿ ಕೇವಲ ಮಾನವೀಯ, ಉದಾರವಾದಿ ನೆಲೆಯಿಂದ ಪ್ರೇರಿತವಾಗಿತ್ತು. ಜಾತಿ, ವರ್ಗ, ಬಡತನ, ಶೋಷಣೆ ಇವುಗಳನ್ನು ಅನುಕಂಪದ ನಿಲುವಿನಿಂದಲೇ ನೋಡಲಾಯಿತು. ಈ ಎಲ್ಲ ಹಿನ್ನೆಲೆಯಿಂದ ನೋಡಿದಾಗ ಕುವೆಂಪು, ಬೇಂದ್ರೆ, ಮಧುರಚೆನ್ನ ಮುಂತಾದವರು ನವೋದಯ ಕಾಲದ ಎಲ್ಲ ಮೌಲ್ಯಗಳ ಜೊತೆಗೆ ಅದನ್ನು ಮೀರಿ ತಮ್ಮ ಅನನ್ಯತೆಯನ್ನು ಸಾಧಿಸಿದಂತೆ, ಈ ಭಾಗದ ಕವಿಗಳು ತಮಗಿರುವ ಮಿತಿಗಳ ನಡುವೆ ತಮ್ಮ ಅನನ್ಯತೆಯನ್ನು ಸಾಧಿಸಿರುವ ಪ್ರಯತ್ನಗಳು ಕಾಣುವುದಿಲ್ಲ. ಅವರು ಸ್ಥಳೀಯ ಸಾಂಸ್ಕೃತಿಕ ಚರಿತ್ರೆಯ ಜತೆ ಮುಖಾಮುಖಿಯಾಗಲು ಪ್ರಯತ್ನಿಸಲಿಲ್ಲ. ಸಿದ್ಧಯ್ಯ ಪುರಾಣಿಕರನ್ನೊಳಗೊಂಡು ಹೆಚ್ಚಿನ ಕವಿಗಳು ಸೌಂದರ್ಯ ಆರಾಧಕರಾಗಲು ಬಯಸಿದಂತೆ ಕಾಣುತ್ತದೆ. 'ಕಾವ್ಯಾನಂದ', 'ಕಲಾನಂದ', 'ಸತ್ಯಾನಂದ', 'ಅಮರಾನಂದ' ಈ ಎಲ್ಲ ಕಾವ್ಯನಾಮಗಳಲ್ಲಿ ಕಾಣುವ 'ಆನಂದ'ದ ಕಲ್ಪನೆಯನ್ನು ಗಮನಿಸಿದರೆ ಇವರಿಗೆ ಆದರ್ಶ, ಕನಸು, ಮಾನವೀಯತೆಗಳು ಮುಖ್ಯವಾಗಿರುವುದು ಕಂಡುಬರುತ್ತದೆ. ಬದುಕು ಸುಂದರ, ಸ್ವೀಕಾರಾರ್ಹವಾದುದು. ಬಾಳಿನಲ್ಲಿ ಆನಂದ ಕಾಣುವುದು ಮುಖ್ಯ ಎಂದು ಭಾವಿಸಲಾಯಿತು. ಇದು ಸ್ವಾತಂತ್ರ್ಯಪೂರ್ವ ಕಾಲದ ಸಾಹಿತ್ಯ ವಲಯದಲ್ಲಿದ್ದ ಪ್ರಧಾನ ಧ್ಯೇಯವಾಗಿತ್ತು ಎಂಬುದು ಮುಖ್ಯವಾಗಿ ಗಮನಿಸಬೇಕಾದ ಸಂಗತಿಯಾಗಿದೆ.

ನವೋದಯ ಸಾಹಿತ್ಯದಲ್ಲಿ ಮನುಷ್ಯ ಸಮಾಜದ ಭಾಗವೆಂದು, ಸಾಮಾಜಿಕ ಜೀವನ, ಸಾಮಾಜಿಕ ಸಮಸ್ಯೆಗಳೇ ಮುಖ್ಯವಾದವೆಂದು ಪರಿಗಣಿಸಲಾಗಿತ್ತು. ಅದಕ್ಕಾಗಿ ಮನುಷ್ಯನನ್ನು ಅರ್ಥೈಸುವುದು ಕೂಡ ಸಾಮಾಜಿಕ ಚೌಕಟ್ಟಿನಲ್ಲೇ. ಆದ್ದರಿಂದಲೇ ಮನುಷ್ಯನ ಸಾಮಾಜಿಕ ವರ್ತನೆಗಳು ಆತನ ವ್ಯಕ್ತಿತ್ವವನ್ನು, ಮನುಷ್ಯತ್ವವನ್ನು ತಿಳಿಸುತ್ತವೆ ಎಂದು ಗ್ರಹಿಸಲಾಯಿತು. ಆದರೆ ನವ್ಯ ಸಾಹಿತ್ಯ ಇದಕ್ಕೆ ವಿರುದ್ಧವಾಗಿ ಗ್ರಹಿಸತೊಡಗಿತ್ತು. ಸಾಮಾಜಿಕ ಚೌಕಟ್ಟಿನಿಂದ ಆಚೆಗೂ ಮನುಷ್ಯನ ಸಮಸ್ಯೆಗಳಿಗೆ ಅರ್ಥವಿದೆ. ಮನುಷ್ಯನ ಹೊರ ಜಗತ್ತಿನಂತೆ ಒಳಜಗತ್ತಿಗೂ ಅಸ್ತಿತ್ವವಿದೆ. ಸಮಾಜ ಬಿಟ್ಟರೆ ಮನುಷ್ಯನಿಗೆ ಅಸ್ತಿತ್ವವೇ ಇಲ್ಲ ಎಂಬಂತಿರುವ ಈ ಭಾಗದ ಕವಿಗಳಿಗೆ ಸಮಾಜ ಮುಖ್ಯವಾಗಿತ್ತು. ಜಾನಪದವನ್ನೇ ಉಸಿರಾಡಿದ ದೇವೇಂದ್ರಕುಮಾರ ಹಕಾರಿ, ಚೆನ್ನಣ್ಣ ವಾಲೀಕಾರ, ಅಮ್ಮಾಪುರ, ಲಿಂಗಣ್ಣ ಸತ್ಯಂಪೇಟೆ, ಜಂಬಣ್ಣ ಅಮರಚಿಂತ, ಎಂ.ಲಕ್ಷ್ಮಣ, ಬಿ.ಜಿ. ವಿಸಾಜಿ, ಶಿವಶರಣ ಪಾಟೀಲ್ ಜಾವಳಿ, ಶೈಲಜಾ ಉಡಚಣ, ಮಹಾಂತೇಶ ಅರಣಕಲ್ ಮುಂತಾದವರಿಗೆ ಹೊರಜಗತ್ತು ಪರಿಚಯವಿದ್ದಂತೆ, ಮನುಷ್ಯನ ಒಳಜಗತ್ತು ಒಂದಿದ್ದು ಅವಕ್ಕೂ ಅಸ್ತಿತ್ವವಿದೆ ಎಂದು ಅರಿಯುವುದು ಅವರಿಗೆ ತೊಡಕಿನ ವಿಷಯವಾಯಿತು. ಹಾಗಾಗಿ ನವೋದಯ ಮಾರ್ಗದಲ್ಲಿ ಮುಂದುವರಿಯಲು ಹಿಂಜರಿಯಬೇಕಾಯಿತು. ಯಾಕೆಂದರೆ ಅವರಿಗೆ ಅದು

ಹಳೆಯದಾಗಿ ಕಂಡಿತು. ಸಂಪ್ರದಾಯದ ವಿರುದ್ಧ, ಅಸ್ತಿತ್ವಕ್ಕಾಗಿ ವ್ಯಕ್ತಿಗತ ಹೋರಾಟವನ್ನು ಸಾಮಾಜಿಕ ಸನ್ನಿವೇಶದಲ್ಲಿ ಕಾಣುವ ಅಸಾಮಾನ್ಯತೆಯ ವಿರುದ್ಧ ಸಾಮೂಹಿಕ ಹೋರಾಟವನ್ನಾಗಿ ಪರಿವರ್ತಿಸಿಕೊಳ್ಳಲು ಸಾಧ್ಯವಾಯಿತೇನೋ ಎಂದು ಕಾಣುತ್ತದೆ. ಈ ಸಂದರ್ಭದ ಕವಿಗಳ ಒಟ್ಟು ಮನಸ್ಥಿತಿಯನ್ನು ಶಾಂತರಸರು ಸಂಪಾದಿಸಿದ 'ಬೆನ್ನ ಹಿಂದಿನ ಬೆಳಕು' ಎಂಬ ಸಂಕಲನದ ಕವಿತೆಗಳಲ್ಲಿ ಕಾಣಬಹುದು.

'ಬೆನ್ನ ಹಿಂದಿನ ಬೆಳಕು' ಪ್ರಧಾನವಾಗಿ ಎರಡು ಕಾರಣಕ್ಕಾಗಿ ಮುಖ್ಯ ಎನಿಸುತ್ತದೆ. ಒಂದು ೬೦ರ ದಶಕ ದಾಟುತ್ತಿದ್ದಂತ ಅವಧಿಯಲ್ಲಿ (೧೯೬೫-೭೫) ಈ ಭಾಗದ ಕವಿಗಳು ಕಾವ್ಯ ರಚನೆಯ ಸಂದರ್ಭದಲ್ಲಿ ತೊಡಕಾಗುವ ಮನೋಧರ್ಮದ ಪ್ರಶ್ನೆಗಳನ್ನು ಎದುರಿಸಬೇಕಾಯಿತು. ಎರಡು ಈ ಭಾಗದ ಕವಿಗಳ ಅಸ್ತಿತ್ವದ ಪ್ರಶ್ನೆ. ಮೊದಲನೆಯದು ವ್ಯಕ್ತಿಗತ ಸಮಸ್ಯೆಯಾದರೆ, ಎರಡನೆಯದು ಸಾಹಿತ್ಯಿಕ ವಲಯದಲ್ಲಿ ಈ ಭಾಗದ 'ಕಾವ್ಯ ಸತ್ವ'ದ ಸಮಸ್ಯೆಯಾಗಿತ್ತು. 'ಬೆನ್ನ ಹಿಂದಿನ ಬೆಳಕು' ಕೃತಿಯ ಸಂಪಾದಕರ ಪ್ರಸ್ತಾವನೆಯನ್ನು ಗಮನಿಸಿದರೆ, ಹೈದರಾಬಾದ್ ಕರ್ನಾಟಕ ಪ್ರದೇಶದ ಕವಿಗಳಿಗೆ ನವ್ಯಕಾವ್ಯ ಹುಟ್ಟಿಸಿದ ಗೊಂದಲ ಎದ್ದು ಕಾಣುತ್ತದೆ. ಯಾವುದು ಒಳ್ಳೆಯ ಕಾವ್ಯ? ಯಾರು ಒಳ್ಳೆಯ ಕವಿ? ಎಂದು ತೋರಿಸುವಲ್ಲಿ ವಿಮರ್ಶಕರು ಪಕ್ಷಪಾತ ಮಾಡುತ್ತಿದ್ದಾರೆ. ಹೈದರಾಬಾದ್ ಕರ್ನಾಟಕ ಪ್ರದೇಶದ ಕಾವ್ಯವನ್ನು ನಿರ್ಲಕ್ಷ್ಯ ಮಾಡಲಾಗುತ್ತಿದೆ. ಈ ಭಾಗದಲ್ಲಿಯೂ ಈ ಶತಮಾನದ ಪ್ರಾರಂಭದಿಂದ ಹೊಸಗನ್ನಡ ಸಾಹಿತ್ಯ ಸಮೃದ್ಧವಾಗಿ ಬೆಳೆದಿದೆ ಎಂದು ಉದಾಹರಣೆ ಸಹಿತ ಅದರಲ್ಲಿ ತೋರಿಸಲಾಗಿದೆ. ನಮ್ಮಲ್ಲೂ ಸಾಹಿತ್ಯ ಇದೆ ಎಂದು ಅದು 'ಬೆನ್ನ ಹಿಂದಿನ ಬೆಳಕಿ'ನಂತಿದೆ ಎಂದು ತೋರಿಸಲು ಈ ಕೃತಿಯನ್ನು ಸಂಪಾದಿಸಲಾಯಿತು. ಕಾವ್ಯವೇ ಪ್ರಧಾನ ಪ್ರಕಾರವಾಗಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದರಿಂದ, ಅಂದಿನ ಕಾವ್ಯವನ್ನು ದಾಖಲಿಸುವ ಕೃತಿಗಳು ಹೊರಬಂದಿವೆ. ಬಿ.ಎಂ.ಶ್ರೀ ಸಂಪಾದಿಸಿದ 'ಕನ್ನಡ ಬಾವುಟ' (೧೯೩೮), ರಂ.ಶ್ರೀ.ಮುಗಳಿ ಸಂಪಾದಿಸಿದ 'ಕನ್ನಡ ಕಾವ್ಯ ಸಂಚಯ' (೧೯೭೦). ಈ ಎರಡು ಕೃತಿಗಳಲ್ಲಿ ಸಮಗ್ರ ಕನ್ನಡ ಕಾವ್ಯ ಪರಂಪರೆಯ ದಾಖಲೆಯಿದೆ. ನಂತರ ಬಂದ 'ನವ್ಯಧ್ವನಿ', 'ಸಂಕ್ರಮಣ ಕಾವ್ಯ', 'ಅಕ್ಷರ ಹೊಸ ಕಾವ್ಯ', 'ಹೊಸ ಜನಾಂಗದ ಕವಿತೆಗಳು', ಮುಂತಾದ ಅನನ್ಯತೆಯನ್ನು ಸಾರುವ ಕೃತಿಗಳಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದ ಕವಿಗಳಿಗೆ ಸ್ಥಾನ ಸಿಕ್ಕಿರಲಿಲ್ಲ. ಇದೆಲ್ಲವನ್ನು ಗಮನಿಸಿ ಈ 'ಪಕ್ಷಪಾತ'ವನ್ನು ವಿರೋಧಿಸುವ ದೃಷ್ಟಿಯಿಂದ 'ಬೆನ್ನ ಹಿಂದಿನ ಬೆಳಕು' ಹೊರ ಬಂದಿದೆ. ಇದರ ಇತಿಮಿತಿಯ ಬಗ್ಗೆ ಕನ್ನಡ ಸಾಹಿತ್ಯದ ವಲಯದಲ್ಲಿ ತಕ್ಕಮಟ್ಟಿಗೆ ಚರ್ಚೆಯೂ ಆಗಿದೆ.

'ನಾ ಕಟ್ಟಿದ ಮಹಲಿನ ಸುತ್ತ ಕಂಟಿ ಕಮರಿ
ಮುಳ್ಳು ಜಾಲಿ, ಕಳ್ಳಿ ಬೆಳೆಯುತ್ತ
ಬೆಳೆಯುತ್ತ
ಹಾವುಗಳ ಹುತ್ತ ಹುಲಿಗಳ ಗುಹೆ

ನರಿಗಳ ಬಲ ಇರುವೆ ಬರದಂತೆ
ಮೆತ್ತಿಕೊಂಡಾಗ
ನನ್ನ ಉಸಿರು
ಮಹಲಿನ ಒಂದೊಂದು ಕಲ್ಲು ಕೆಡವಿ
ನೆಲಸಮ ಮಾಡಿ ಕಾಡಾಗಿ
ಬದುಕಬೇಕೆನ್ನತ್ತದೆ.'[೨೪] (ಉರಿ: ಚೆನ್ನಣ್ಣ ವಾಲೀಕಾರ)

'ನಾವು ಹೆಣ್ಯಾಗಳು ಸಾರ್, ನಾವು ಹೆಣ್ಯಾಗಳು
ಮಾಡೇವು, ತೋರಿಸೇವು, ಮುಗಿಸೇವನುವಂತಿಲ್ಲ.
ಹಿಡಿದ ದಾರಿ ತುಳಿದೇವು, ತುಳಿದು ದೂರ ಸೇರೇವಂತಿಲ್ಲ
ಗಟ್ಟಿಲ್ಲ, ತಾಕತ್ತಿಲ್ಲ.'[೨೫] (ನಾವು ಸತ್ತ ಹಾವು ಸಾರ್: ಮಲ್ಲಿಕಾರ್ಜುನ ಹಿರೇಮಠ)

'ಹಾಡಿದ್ದೆ ಹಾಡಿ
ಬಗೆದದ್ದೆ ಬಗೆದು
ಬಾಳು ಸೀಳಿ–ಕೂದಲು ಮಾಡಿ
ಸಾಕಾಗಿದೆ
ಏಕಾಂತ ಹೊದ್ದು
ಲೋಕಾಂತ ಒದ್ದು
ಶೂನ್ಯಕ್ಕೆ ತೆಕ್ಕೆಬಿದ್ದು
ಗೆದ್ದೇನೆಂದು ಎದ್ದದ್ದು
ಸಾಕಾಗಿದೆ'[೨೬] (ಕಳೆ: ಲಿಂಗಣ್ಣ ಸತ್ಯಂಪೇಟೆ)

'ಹುಟ್ಟಿದಾಕ್ಷಣವೇ ಸ್ವಂತ ಅತ್ತ ನಾನು
ಅರವತ್ತಾಗಿ ಸತ್ತರೂ ಇದಕಾಗಿ ಪರಾವಲಂಬಿಯಾಗಬೇಕಾಗುವುದಲ್ಲ?
ಖುದ್ ಎಷ್ಟೋ ಹೆಣ ಹೊತ್ತ ನಾನು
ಸ್ವತಃ ಸತ್ತಾಗ ಎರಡನೆಯವರಿಂದ ಹೊರಿಸಿಕೊಳ್ಳಬೇಕಾಗುವದಲ್ಲ?
ಅದಕಾಗಿ
ಒಮ್ಮೆ ಎಂದರೆ ಒಮ್ಮೆಯೇ
ಸ್ವತಃ ನಾನೇ ಸತ್ತು, ನಾನೇ ಹೊತ್ತು, ನಾನೇ ಅತ್ತು ನೋಡುವ
ಸ್ವಾವಲಂಬನಕ್ಕೆ ನಾನು ಪ್ರಯತ್ನಿಸುತ್ತಿದ್ದೇನೆ.'[೨೭] (ಸ್ವಾವಲಂಬನೆ: ಗುರುಬಸಯ್ಯ ಹಿರೇಮಠ)

'ಸದ್ದಿಲ್ಲದೆ ಕಟ್ಟುತ್ತಿದೆ ಹುತ್ತ ಕಟ್ಟಿರುವೆ ದಂಡು
ನೆನಪಿನ ಜೋಗಕ್ಕೆ ಹೃದಯ ಗಿಮ್ಮೆಂದು

ತಿರುಗಿ
ನರ-ನರಕ್ಕೆ ವಿದ್ಯುತ್ ಪ್ರವಾಹ
ಹರಿದಾಗ ನನ್ನ ನಾ ಮರೆತು
ನಿನ್ನೆಗಳ ಗುಂಡಿಯಲಿ
ಒದ್ದಾಡುತ್ತಿದ್ದೇನೆ
ಕೊಳೆತ ನೀರಿನ ಹೊಂಡ
ಬಟ್ಟಿ ಸುಡುವ ಕಮಟು ವಾಸನೆ
ಮರೆತಷ್ಟು ಎದೆ ತುಂಬ ಹೆಡೆ ಬಿಚ್ಚುವ ತಕ್ಷಕ
ಈ ಅಣೆಕಟ್ಟು ಒಡೆದು ಕೊಳೆತ
ನೀರನ್ನು ಹೊರಬಿಡಬೇಕು
ಹರಿವ ನೀರು ಹರಿಯಗೊಡಬೇಕು'[೨೮] (ಹರಿಯುವ ನೀರು: ಜಂಬಣ್ಣ ಅಮರಚಿಂತ)

ಈ ಎಲ್ಲ ಕವಿತೆಗಳನ್ನು ನೋಡಿದರೆ ವ್ಯಕ್ತಿಯ ಅಸ್ತಿತ್ವಕ್ಕಾಗಿ, ಉಸಿರುಗಟ್ಟುವ ವಾತಾವರಣದ ವಿರುದ್ಧ ಹೋರಾಡುವುದು ಕಾಣುತ್ತದೆ. ನವ್ಯ ಕಾವ್ಯಕ್ಕೆ ಸ್ಪಂದಿಸಿದ್ದರೂ ದೇವೇಂದ್ರ ಕುಮಾರ ಹಕಾರಿ, ರಾಘವೇಂದ್ರ ಇಟಗಿ, ವಸಂತ ಕುಷ್ಟಗಿ, ಜಿ.ಕೃಷ್ಣರಾವ್ ಮುಂತಾದವರು ಗೋಕಾಕರ ಕಾವ್ಯ ಮಾರ್ಗವನ್ನು ಅನುಸರಿಸಿದರೆಂದೇ ಹೇಳಬೇಕು. ಶಿವಶರಣ ಜಾವಳಿ ನವ್ಯ ಕಾವ್ಯಕ್ಕೆ ಸ್ಪಂದಿಸಿದಂತೆ ಕಂಡರೂ ಅದರಲ್ಲಿ ದಾರಿ ಸವೆಸುವುದು ಕಷ್ಟವೆಂದು ಹೊರಬಂದು ತಮ್ಮದೇ ಹಾದಿಯನ್ನು ಕಂಡುಕೊಂಡರು. ಸಮಾಜದಲ್ಲಿ ನಡೆಯುವ ಅನ್ಯಾಯ, ಅಸಮಾನತೆ, ಶೋಷಣೆಗಳ ಬಗ್ಗೆ ಅಸಹನೆ, ವ್ಯಂಗ್ಯ ವ್ಯಕ್ತವಾಗಿದೆ. ಪ್ರಾಮಾಣಿಕತೆ, ನಿಷ್ಠೆ, ಜವಾಬ್ದಾರಿಗಳ ಬಗೆಗೆ ಅಪಾರ ಕಾಳಜಿ ವ್ಯಕ್ತವಾಗಿದೆ. ಆದರೆ ಅವರ ಕಾವ್ಯ 'ಸತ್ವ'ದ ದೃಷ್ಟಿಯಿಂದ ಎತ್ತರಕ್ಕೆ ಬೆಳೆಯದೆ ಒಂದೇ ಪಾತಳಿಯಲ್ಲಿ ಉಳಿದಿದೆ. ಚೆನ್ನಣ್ಣ ವಾಲೀಕಾರ, ಜಂಬಣ್ಣ ಅಮರಚಿಂತ, ಎಂ.ಲಕ್ಷ್ಮಣ ಮುಂತಾದವರು ಬಂಡಾಯ ಸಾಹಿತ್ಯ ಚಳವಳಿಗೆ ಧುಮುಕಿದರು. ಶಾಂತರಸರು ನವೋದಯ, ನವ್ಯ, ಬಂಡಾಯ ಈ ಮೂರು ಕಾವ್ಯ ಮಾರ್ಗದಲ್ಲಿ ನಡೆದಿದ್ದಾರೆ. ಇದೆಲ್ಲವನ್ನು ಗಮನಿಸಿದರೆ ನವ್ಯಕಾವ್ಯ ಮಾರ್ಗದಲ್ಲಿ ಈ ಭಾಗದ ಕವಿಗಳು ಬಲು ದೂರ ನಡೆಯಲಾಗಿಲ್ಲ. ಚಂದ್ರಕಾಂತ ಕುಸನೂರು 'ನಂದಿಕೋಲು', ಚೆನ್ನಣ್ಣ ವಾಲೀಕಾರ 'ಮರದ ಮೇಲಿನ ಗಾಳಿ' ಮಲ್ಲಿಕಾರ್ಜುನ ಹಿರೇಮಠ 'ಆಕ್ವೇರಿಯಮ್ ಮೀನು', ಜಂಬಣ್ಣ ಅಮರಚಿಂತರ 'ಮುಂಜಾವಿನ ಕೊರಳು' ಹೀಗೆ ಒಂದೊಂದೇ ಸಂಕಲನ ತರುವಷ್ಟು ಸ್ಪಂದಿಸಿದರು.

೭೦ರ ದಶಕದ ಕೊನೆಗೆ ಬರುತ್ತಿದ್ದಂತೆ ವಾಲೀಕಾರ, ಅಮರಚಿಂತ, ಜಾವಳಿ, ಶಾಂತರಸ, ಎಂ.ಲಕ್ಷ್ಮಣ, ಗುರುಬಸಯ್ಯ ಅಮ್ಮಾಪುರ ಮುಂತಾದವರು ಬಂಡಾಯ ಸಾಹಿತ್ಯ ಚಳವಳಿಯ ಪ್ರಭಾವಕ್ಕೆ ಒಳಗಾದರು. ಕೆಲವರಂತೂ ಇದರಲ್ಲಿಯೇ ತಮ್ಮ ಪ್ರತಿಭೆಯನ್ನು ತೋರಿಸತೊಡಗಿದರು. ಆದರೆ ಇಟಗಿ, ಹಕಾರಿ, ಉಡಚಣ, ಕುಷ್ಟಗಿ, ಕೃಷ್ಣರಾವ್, ಕುಸನೂರು ಮುಂತಾದವರು ಈ

ಸಾಹಿತ್ಯ ಚಳವಳಿಯ ಪ್ರಭಾವಕ್ಕೆ ಒಳಗಾಗಲಿಲ್ಲ. ಗೋಕಾಕರ ಕಾವ್ಯಮಾರ್ಗ ಅನುಸರಿಸಿದರೂ ಬಹುದೀರ್ಘಕಾಲ ಬರೆಯುವ ಉತ್ಸಾಹವನ್ನು ಅನೇಕರು ಉಳಿಸಿಕೊಳ್ಳಲಿಲ್ಲ. ಇಲ್ಲೂ ಶಾಂತರಸರು ಬಂಡಾಯ ಸಾಹಿತ್ಯ ಚಳವಳಿಯ ಪ್ರಭಾವಕ್ಕೆ ಒಲಿದರೂ ಅದನ್ನು ಹೊರಗಿನಿಂದ ನೋಡಿದರು. ಅದರ ಧ್ಯೇಯ ಧೋರಣೆಯನ್ನು ಅನುಮಾನಿಸಿದಂತೆ ಕಾಣುವ ಹಾಗೆ ಕಾವ್ಯ ರಚಿಸಿದರು.

'ಗೆಳೆಯಾ, ನಾನು ಕವಿತೆ ಬರೆಯಲಾರೆ,
ಬರೆಯುವುದಿಲ್ಲ.
ಕಾವ್ಯ ಬರೆಯಲು ಇದು ಸಮಯವೂ ಅಲ್ಲ.
ಕಾಗದ ಮಸಿ ಪೆನ್ನು ಪುಸ್ತಕ
ಅಲ್ಲಿರಲಿ;
ಬಾ, ಗೆಳೆಯಾ
ಹೊರಗೆ ಬಾ,
ಏನಾದರೂ ಮಾಡೋಣ.'[೨೯] (ಶಾಂತರಸ : ಏನಾದರೂ ಮಾಡೋಣ) ಎಂದು ಕವಿತೆ ಬರೆದರು. ಕವಿತೆಯಲ್ಲಿ ಮಾತ್ರ ಪ್ರತಿಭಟನೆ ಮಾಡುವುದರಿಂದ 'ಶೋಷಕ ವ್ಯವಸ್ಥೆ' ಬಗ್ಗುವುದಿಲ್ಲ. ಬೀದಿಗೆ ಬಂದು ಹೋರಾಡಬೇಕು ಎಂಬ ಕವಿಯ ನಿಲುವು ಇದರಲ್ಲಿದೆ. ವಚನ ಚಳವಳಿಯ ಕಾಲದಲ್ಲಿ ಪ್ರತಿಭಟನೆ ಮತ್ತು ಕಾವ್ಯ ಒಂದಕ್ಕೊಂದು ಪೂರಕವಾಗಿದ್ದವೇ ಹೊರತು ಎರಡು ಕ್ರಿಯೆಗಳು ಬೇರೆ ಬೇರೆಯಾಗಿರಲಿಲ್ಲ. ಈ ಧೋರಣೆಯೇ ಬಂಡಾಯ ಸಾಹಿತ್ಯ ಚಳವಳಿ ಅನುಸರಿಸಿದೆ. ಬೀದಿಗೆ ಬಂದು ಯಾವುದಕ್ಕಾಗಿ ಹೋರಾಡಲಾಯಿತೋ ಆ ಸಂದರ್ಭವನ್ನು ಕುರಿತು ಕವಿತೆಯ ಮೂಲಕವೂ ವ್ಯಕ್ತಪಡಿಸಲಾಗಿದೆ. ಬಂಡಾಯ ಸಾಹಿತ್ಯ ಚಳವಳಿ ಸಮಾಜದಲ್ಲಿ ಜರುಗಿದ ಅನೇಕ ಅನ್ಯಾಯದ ಘಟನೆಗಳ ವಿರುದ್ಧ ಬೀದಿಯ ಚಳವಳಿ ನಡೆಸಿದೆ. ಆ ಸಂದರ್ಭವನ್ನು ಕವಿತೆಗಳ ಮೂಲಕವೂ ಪ್ರತಿಭಟಿಸಿದ್ದಕ್ಕೆ ಅನೇಕ ಉದಾಹರಣೆಗಳಿವೆ.

ಹೈದರಾಬಾದ್ ಕರ್ನಾಟಕ ಪ್ರದೇಶದ ಬರಹಗಾರರಿಗೆ ನೇರವಾಗಿ ನವೋದಯ ಮತ್ತು ನವ್ಯ ಸಾಹಿತ್ಯ ಚಳವಳಿಯ ಸಂಬಂಧ ಏರ್ಪಟ್ಟಿರಲಿಲ್ಲ. ನಿಜಾಮ್ ಆಡಳಿತಕ್ಕೆ ಸೇರಿದ ಈ ಪ್ರದೇಶದ ಬರಹಗಾರರು ಪ್ರಾರಂಭದಲ್ಲಿ ಹೈದರಾಬಾದ್ ನಗರವನ್ನು ಸಾಂಸ್ಕೃತಿಕ ಕೇಂದ್ರವನ್ನಾಗಿ ಮಾಡಿಕೊಂಡಿದ್ದರು. ೧೮-೧೯ನೇ ಶತಮಾನದಿಂದಲೇ ಈ ಪ್ರದೇಶದಲ್ಲಿ ಕನ್ನಡ ಭಾಷೆ ಸಾಹಿತ್ಯಿಕವಾಗಿ ಹಿನ್ನೆಲೆಗೆ ಸರಿದಿತ್ತು. ಜನಸಾಮಾನ್ಯರಲ್ಲಿ ವ್ಯವಹಾರಿಕವಾಗಿ ಕೇವಲ ಕನ್ನಡ ಭಾಷೆ ಮಾತ್ರ ಇರದೆ ನೆರೆಯ ಭಾಷೆಗಳೂ ಮುತ್ತಿಕೊಂಡಿದ್ದವು. ಮಠಮಾನ್ಯಗಳಲ್ಲಿ ವ್ಯವಹಾರೇತರವಾಗಿ ಕನ್ನಡ ಭಾಷೆ ಚಲನೆಯಲ್ಲಿತ್ತು.

೨೦ನೇ ಶತಮಾನದಲ್ಲಿ ಹೈದರಾಬಾದ್ ಕರ್ನಾಟಕೇತರ ಪ್ರದೇಶದಲ್ಲಿ ಆಧುನಿಕ ಶಿಕ್ಷಣವನ್ನು ಪಡೆಯುವ ಸಾಧ್ಯತೆಯನ್ನು ದಕ್ಕಿಸಿಕೊಂಡಂತೆ ಈ ಭಾಗದಲ್ಲಿ ಅದು ಸಾಧ್ಯವಿರಲಿಲ್ಲ. ನಿಜಾಮ್

ರಾಜ್ಯಾಡಳಿತ ಭಾಷೆಯಾಗಿ ಉರ್ದು ಪ್ರಭುತ್ವದಲ್ಲಿದ್ದರಿಂದ ಅಕ್ಷರ ಕಲಿಯಲು ಅವಕಾಶ ಪಡೆಯುವ ವಿದ್ಯಾರ್ಥಿಗಳಿಗೆ ಉರ್ದು ಭಾಷೆಯೇ ಗತಿಯಾಯಿತು. ಇದರಿಂದ ಅಕ್ಷರ ಕಲಿಯಲು ಸಾಧ್ಯವಾಗುವ ಅತ್ಯಲ್ಪ ಸಂಖ್ಯೆಯ ವಿದ್ಯಾರ್ಥಿಗಳು ಉರ್ದು ಮಾಧ್ಯಮದ ಮೂಲಕ ಪ್ರವೇಶಿಸಿ ಹೆಚ್ಚಿನ ಶಿಕ್ಷಣವನ್ನು ಅದರಲ್ಲೇ ಪಡೆಯುವತ್ತ ಸಾಗಿದರು. ಇದರಿಂದ ಲೌಕಿಕ ಪ್ರಯೋಜನಗಳೂ ಇದ್ದುದರಿಂದ ವಿದ್ಯಾವಂತರು ಪರಿಸ್ಥಿತಿಗೆ ಹೊಂದಿಕೊಂಡರು. ಕನ್ನಡ ಭಾಷೆ ಮತ್ತು ಸಾಹಿತ್ಯಾಭಿಮಾನಿಗಳು ಇದೇ ಹಾದಿಯ ಜತೆಗೆ ಸಾಹಿತ್ಯಿಕ ಚಟುವಟಿಕೆಗಳಿಗೆ ಗಮನಕೊಟ್ಟರೂ ವಾತಾವರಣ ಆರೋಗ್ಯಕರವಾಗಿರಲಿಲ್ಲ. ಬೆಂಗಳೂರು, ಮೈಸೂರು, ಧಾರವಾಡ ನಗರಗಳಲ್ಲಿದ್ದ ಸಾಂಸ್ಕೃತಿಕ ವಾತಾವರಣ ಹೈದರಾಬಾದ್ ನಗರದಲ್ಲಿ ಇರಲು ಸಾಧ್ಯವಿರಲಿಲ್ಲ. ಇಲ್ಲಿನ ಕನ್ನಡಕ್ಕೆ ಒದಗಿದ ಸ್ಥಿತಿಯನ್ನು ಕಾವ್ಯಾನಂದರು ಒಂದು ಕವನದಲ್ಲಿ ಹೀಗೆ ಚಿತ್ರಿಸುತ್ತಾರೆ.

'ಹೊನ್ನ ಬೆಳೆ ಬರುತ್ತಿದ್ದ ಕನ್ನಡದ ಹುಲುಸು ಹೊಲ
ಬೀಳು ಬಿದ್ದಿಹುದಿಂದು ಬಂಜೆ ಬಯಲಾಗಿ
ಉತ್ತುವುದು ಬಹಳಾಯ್ತು ಬಿತ್ತುವರೆ ಬರಲಿಲ್ಲ
ಮುನ್ನ ಬಿತ್ತಿದ ಬೆಳೆಯ ಇದುವರೆಗೆ ಕೊಯಲಾಗಿ

ಬರಗಾಲ ಬಂದಿಹುದು ಸಿರಿಯ ತವರೂರಿಗೆ
ಹೆರರ ಹಾವಳಿ ಬಂತು ನಮ್ಮ ನಡುಕೇರಿಗೆ
ಕೊಟ್ಟುಬಿಟ್ಟೆವು ಹೊಲವ ಪರಜನಕೆ ಕೋರಿಗೆ
ನಮ್ಮ ಹಾಳನು ಕಾಂಬ ಕಣ್ಣಿಹುದು ಯಾರಿಗೆ ?'[೩೦](ಕಾವ್ಯಾನಂದ : ಕನ್ನಡದಬೆಳೆ)

ಕನ್ನಡದ ಈ ಪ್ರದೇಶದಲ್ಲಿ ಅನ್ಯ ಪ್ರಭುತ್ವದಿಂದ ಕನ್ನಡ ಭೂಮಿಯು ಬಂಜೆಯಾಯಿತು. ಅದನ್ನು ನೋಡಿಕೊಳ್ಳುವವರು ಯಾರು ಎಂದು ಕವಿ ಪ್ರಶ್ನಿಸಿದ್ದಾರೆ. ಹೀಗೆ ಪರರ ದಾಸ್ಯದಿಂದ ಬೇಗ ಬಿಡುಗಡೆ ಆಗದೇ ಇರುವುದು ಇಲ್ಲಿನ ಸಾಹಿತ್ಯ ಹಿಂದುಳಿಯುವುದಕ್ಕೆ ಮೂಲ ಕಾರಣವಾಗಿದೆ. ಹೀಗಾಗಿ ಸಾಹಿತ್ಯಿಕವಾಗಿ ಎಷ್ಟೇ ಅಭಿಮಾನ, ಉತ್ಸಾಹವಿದ್ದರೂ ಸಂಪರ್ಕದ ಕೊರೆಯಿಂದ ಮತ್ತು ಆಧುನಿಕ ವಿದ್ಯಾಭ್ಯಾಸದಿಂದ ಸಿಗುವ ಜ್ಞಾನವು ಬಹುಬೇಗ ದೊರೆಯಲಿಲ್ಲ. ಇದರಿಂದ ಹೈದರಾಬಾದ್ ಕರ್ನಾಟಕ ಪ್ರದೇಶವು ಉಳಿದ ಪ್ರದೇಶಗಳಿಗಿಂತ ಎರಡು ದಶಕಗಳ ಕಾಲ ಸಾಂಸ್ಕೃತಿಕವಾಗಿ ಹಿಂದುಳಿದಿತ್ತು.

ಮೇಲಿನ ಕಾರಣದಿಂದಲೇ ನವೋದಯ, ನವ್ಯ ಸಾಹಿತ್ಯವು ಅದರ ಪ್ರಾರಂಭಿಕ ಅವಸ್ಥೆಯ ಜೊತೆಗೆ ಬೆಳೆಯಲು ಈ ಭಾಗದ ಬಹರಗಾರರಿಗೆ ಸಾಧ್ಯವಾಗಲಿಲ್ಲ. ಈ ತೊಡಕಿನಿಂದಾಗಿಯೂ ಸಾಹಿತ್ಯ ಹೇಳಿಕೊಳ್ಳುವ ಎತ್ತರಕ್ಕೆ ಬೆಳೆಯಲಿಲ್ಲ. ಇದೆಲ್ಲ ರಾಜಕೀಯ ಸ್ಥಿತ್ಯಂತರಗಳ ಕಾರಣದಿಂದ ಆದದ್ದು. ಆದರೆ ಬಂಡಾಯ ಸಾಹಿತ್ಯ ಚಳವಳಿಯ ಜೊತೆಗೆ ಬೆಳೆಯುವ ಅವಕಾಶ ಈ ಭಾಗದ ಬರಹಗಾರರಿಗೆ ನೇರವಾಗಿ ಬಂದಿತು. ಈ ಹೊತ್ತಿಗಾಗಲೇ ಈ ಪ್ರದೇಶಕ್ಕೆ ಸ್ವಾತಂತ್ರ್ಯ ಸಿಕ್ಕು ಕಾಲುಶತಮಾನ ದಾಟಿತ್ತು. ಸ್ವಾತಂತ್ರ್ಯ ಸಿಗುವ ಸಮಯದಲ್ಲಿ ಜನ್ಮ ಪಡೆದವರಿಗೆ, ಅಕ್ಷರ

ಕಲಿಯಲು ಅವಕಾಶ ಇರುವವರಿಗೆ ಒಂದರ್ಥದಲ್ಲಿ ಆಧುನಿಕ ಶಿಕ್ಷಣ ಲಭ್ಯವಾಯಿತು. ಅದರಿಂದ ಸ್ವಾತಂತ್ರ್ಯಾನಂತರ ದೇಶದ ಬೆಳವಣಿಗೆಯ ಎಲ್ಲ ವಿದ್ಯಮಾನಗಳ ಅರಿವು ದೊರೆಯಲು ಸಾಧ್ಯವಾಯಿತು. ರಾಜಕೀಯವಾಗಿ, ವೈಜ್ಞಾನಿಕವಾಗಿ ದೇಶದಲ್ಲಿ ಉಂಟಾಗುವ ಬದಲಾವಣೆಗಳನ್ನು ಗ್ರಹಿಸಲು ಅವಕಾಶಗಳು ಸಿಕ್ಕವು. ಎಲ್ಲ ಬಗೆಯ ಸ್ಥಿತ್ಯಂತರಗಳ ಜೊತೆ ಈ ಭಾಗದ ಬರಹಗಾರರು ಪ್ರತಿಕ್ರಿಯಿಸಿದ್ದಾರೆ. ದಲಿತ ಬಂಡಾಯ ಸಾಹಿತ್ಯ ಚಳವಳಿಯ ಹುಟ್ಟಿಗೆ ಕಾರಣವಾಗಿರುವ (ಸಾಂಸ್ಕೃತಿಕ ಒತ್ತಡಗಳು) ಎಲ್ಲ ಸಾಧ್ಯತೆಗಳ ಜೊತೆಗೆ ಸಾಗಿ ಬಂದಿದ್ದಾರೆ. ಈ ಅವಕಾಶವು ಈ ಭಾಗದ ಮೂರನೆ ತಲೆಮಾರಿನ ಬರಹಗಾರರಿಗೆ ಸಿಕ್ಕಿರುವುದರಿಂದಲೇ ಹೆಚ್ಚಿನ ಸಂಖ್ಯೆಯಲ್ಲಿ ಬರಹಗಾರರು ಈ ಅವಧಿಯಲ್ಲಿ ಬೆಳಕಿಗೆ ಬಂದು ಅಭಿವ್ಯಕ್ತಿಸಲು ಸಾಧ್ಯವಾಗಿದೆ.

ರಾಜಕೀಯವಾಗಿ ೧೯ನೇ ಶತಮಾನದ ಉತ್ತರಾರ್ಧದಲ್ಲಿ ಜರುಗಿದ ಘಟನೆಗಳು ಸಾಮಾಜಿಕ, ಸಾಂಸ್ಕೃತಿಕ ವಲಯಗಳಲ್ಲಿ ಆದ ಸ್ಥಿತ್ಯಂತರಗಳು ಹೊಸ ಸಮಾಜದ ನಿರ್ಮಾಣಕ್ಕೆ ದಾರಿಯಾದವು. ರಾಜಾರಾಂ ಮೋಹನರಾಯ್, ದಯಾನಂದ ಸರಸ್ವತಿ, ವಿವೇಕಾನಂದ, ಈಶ್ವರಚಂದ್ರ ವಿದ್ಯಾಸಾಗರ, ರವೀಂದ್ರನಾಥ ಠಾಕೂರ್, ಬಂಕಿಮಚಂದ್ರ ಚಟರ್ಜಿ ಮುಂತಾದ ಬಂಗಾಳದ ವಿಚಾರವಂತರು ತಮ್ಮ ವೈಚಾರಿಕತೆಯಿಂದ ದೇಶದ ಸಾಮಾಜಿಕ ರಂಗದಲ್ಲಿ ತಂದ ಬದಲಾವಣೆಗಳು ಮುಖ್ಯವಾದವು. ರಾಜಾರಾಂ ಮೋಹನರಾಯರು ಅಂಧ ಶ್ರದ್ಧೆಯಲ್ಲಿದ್ದ ಭಾರತೀಯ ಸಂಸ್ಕೃತಿಯನ್ನು ಪರಿವರ್ತನೆಗೊಳಿಸಲು ಅನೇಕ ರೀತಿಯಲ್ಲಿ ಶ್ರಮಿಸಿದರು. 'ಸತಿಪದ್ಧತಿ'ಯಂಥ ಕ್ರೂರ ಆಚರಣೆಯನ್ನು ರದ್ದುಗೊಳಿಸಲು ಬ್ರಿಟೀಶರ ಅಧಿಕಾರವನ್ನು ಕಾನೂನು ಬದ್ಧವಾಗಿ ಬಳಸಿಕೊಂಡು ಪ್ರತಿಬಂಧಿಸಲು ಪ್ರಯತ್ನಿಸಿದರು. ಸ್ತ್ರೀಯರಿಗೆ ಅನೇಕ ವಿಷಯಗಳಲ್ಲಿ ಹೆಚ್ಚಿನ ಸ್ಥಾನಮಾನವನ್ನು ಕಲ್ಪಿಸಲು ಶ್ರಮಿಸಿದರು. ವಿವೇಕಾನಂದರು ಹಿಂದೂ ಧರ್ಮದ ಪರವಾಗಿದ್ದರೂ ಅದರಲ್ಲಿಯೂ ಅನೇಕ ಅಮಾನವೀಯ ವಿಷಯಗಳನ್ನು ಖಂಡಿಸಿದರು. ದೀನದಲಿತರ ಪರವಾಗಿ ನಿಂತರು. ಇಂಥ ಸುಧಾರಣೆಗಳಲ್ಲಿ ಮಾನವೀಯತೆ, ಉದಾರವಾದಿ ನಿಲುವು ಕಂಡಿದ್ದು ಮುಂದಿನವರಿಗೆ ಇನ್ನಷ್ಟು ಒಳ ಹೊಕ್ಕು ಸುಧಾರಿಸಲು ದಾರಿಯಾಯಿತು. ಮಾರ್ಕ್ಸ್‌ವಾದವು ತನ್ನ ಪ್ರಭಾವದಿಂದ ಭಾರತೀಯ ಸಮಾಜದಲ್ಲಿ ಹೊಸ ವಿಚಾರವೊಂದನ್ನು ಹುಟ್ಟು ಹಾಕಿತು. ಆರ್ಥಿಕ ಸಮಾನತೆಯನ್ನು ತರಲು ಪ್ರೇರಣೆ ನೀಡಿತು. ಲೋಹಿಯಾ ಅವರು ರಾಜಕೀಯ ಚಳವಳಿಯ ಮೇಲೆ ಪರಿಣಾಮ ಬೀರಿದರು. ಭಾರತೀಯ ಬ್ರಾಹ್ಮಣೇತರ ಬರಹಗಾರರಿಗೆ ಮುಖ್ಯ ಪ್ರೇರಣೆಯಾದರು. ಅವರು ಇಂಗ್ಲೀಶ್‌ನ ಬಗೆಗೆ, ಜಾತಿಪದ್ಧತಿ ಬಗೆಗೆ, ಅಂತರಾಷ್ಟ್ರೀಯ ತಾರತಮ್ಯಗಳ ಬಗೆಗೆ, ಭಾರತೀಯ ಅನೇಕ ಭಾಷೆಗಳ ಬಗೆಗೆ ಹೇಳಿದ ಮಾತುಗಳು ಕನ್ನಡ ಬರಹಗಾರರ ಮೇಲೆ ಸಾಕಷ್ಟು ಪ್ರಭಾವ ಬೀರಿದವು. ಗಾಂಧೀಜಿಯವರ ಅಹಿಂಸಾ ಹೋರಾಟ, ದಲಿತೋದ್ಧಾರ, ದೇಶವಸ್ತುಗಳ ಬಳಕೆ ಮತ್ತು ಅವರ ಸರಳ ವ್ಯಕ್ತಿತ್ವವು ಭಾರತೀಯರ ಮೇಲೆ ತುಂಬ ಪರಿಣಾಮವನ್ನುಂಟು ಮಾಡಿದವು.

ದಲಿತರ ಸ್ವಾಭಿಮಾನದ ಸಂಕೇತವಾದ ಅಂಬೇಡ್ಕರ ಅವರು ಭಾರತೀಯಯರ ಮೇಲೆ ಅದರಲ್ಲೂ ವಿಶೇಷವಾಗಿ ದಲಿತರ ಮೇಲೆ ಗಾಢವಾಗಿ ಪ್ರಭಾವ ಬೀರಿದರು. ಪ್ರಜ್ಞಾವಂತ ದಲಿತೇತರರಿಗೂ ಅವರ ವಿಚಾರಗಳು ಚಿಂತನೆಗೆ ಗುರಿ ಮಾಡಿದವು. ದಲಿತ ಬರಹಗಾರರಿಗಂತೂ ಅವರು ಅಚ್ಚಳಿಯದ ಪ್ರೇರಕರಾದರು. ಹಿಂದೂ ಧರ್ಮದ ಅನಿಷ್ಟಗಳನ್ನು ಅಮಾನವೀಯತೆಯನ್ನು ಸ್ವತಃ ಅನುಭವಿಸಿದ್ಧ ಅವರು, ಅದೆಲ್ಲವನ್ನು ಉಗ್ರವಾಗಿ ತಿರಸ್ಕರಿಸುತ್ತ ಭಾರತದಲ್ಲಿ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಚಳವಳಿಯನ್ನು ನಡೆಸಿದವರು. ಹಾಗೆ ಮಾಡುತ್ತ ಬ್ರಾಹ್ಮಣ್ಯದ ಸಾಂಸ್ಕೃತಿಕ ಪ್ರಭುತ್ವವನ್ನು ಅಲುಗಾಡಿಸಲು ಕಾರಣರಾದರು. ಚರಿತ್ರೆಯ ಉದ್ದಕ್ಕೂ ಬ್ರಾಹ್ಮಣರು ಅಸಮಾನತೆಯನ್ನು ಕಾಯ್ದುಕೊಂಡು ದಲಿತರನ್ನು ನಿಷ್ಕ್ರೀಯರನ್ನಾಗಿ ಮಾಡಿರುವುದನ್ನು ನಾವು ಕಾಣುತ್ತೇವೆ. ಅವರಿಗೆ ಯಾವ ಬಗೆಯ ಅಧಿಕಾರ ದೊರೆಯದಂತೆ ಎಚ್ಚರವಹಿಸಿ, ಮಹಿಳೆಯರಿಗೆ ಸ್ವಾತಂತ್ರ್ಯವನ್ನು ನಿರಾಕರಿಸಿದ್ದನ್ನು ಅಂಬೇಡ್ಕರ್ ಅವರು ವಿರೋಧಿಸಿದರು. ಇಂಥ ವಿಚಾರಗಳನ್ನು ಬಯಲು ಮಾಡಿದ ಅವರು ಸಮಾಜದಲ್ಲಿ ಹೊಸಯುಗ ಆರಂಭವಾಗಲು ಚಳವಳಿಯನ್ನೇ ಹೂಡಿದರು.

ಇಂಥ ಅನೇಕರ ವಿಚಾರಗಳು, ಚಳವಳಿಗಳು, ರಾಜಕೀಯ, ದೇಶದ ಸಾಮಾಜಿಕ ಗತಿಯನ್ನು ಬದಲಿಸಿದವು. ಇದರಿಂದಾಗಿ ಈ ಶತಮಾನದಲ್ಲಿ ಶೂದ್ರರಿಗೂ ಶಿಕ್ಷಣ ಕಲಿಯುವ ಅವಕಾಶ ದೊರೆತು ಅನೇಕ ಚಳವಳಿಗಳು ತೀವ್ರಗೊಳ್ಳಲು ಕಾರಣವಾದವು. ಹಿಂದೂ ಧರ್ಮದ ವ್ಯವಸ್ಥೆಯಲ್ಲಿ ಶೂದ್ರರಿಗೆ ಕನಿಷ್ಟ ಸ್ಥಾನಮಾನಗಳೂ ಇರಲಿಲ್ಲ. ಹೀಗೆ ದಬ್ಬಾಳಿಕೆಗೆ, ಶೋಷಣೆಗೆ ಒಳಗಾಗುತ್ತಲೇ ಇರುವುದನ್ನು ಅರಿತು ದಲಿತರು ಚಳವಳಿಗಳಿಗೆ, ಸಂಘಟನೆಗಳಿಗೆ ತೊಡಗಿದರು. ಅವರು ಕಲಿತ ಶಿಕ್ಷಣವೇ ಅದಕ್ಕೆ ಪ್ರೇರಣೆಯಾಯಿತು. ಸಾಮಾಜಿಕ ಪರಿವರ್ತನೆಯ ಸಂದರ್ಭದೊಡನೆ ಸಾಹಿತ್ಯವು ಗುರುತಿಸಿಕೊಳ್ಳುತ್ತ ಹೋಗುವಂತಾಯಿತು. ಅಷ್ಟಲ್ಲದೆ, ಬದಲಾದ ಕಾಲದ ವಿಶಿಷ್ಟ ವಿಚಾರಗಳನ್ನು ಸಾಹಿತ್ಯವು ಮರುಸೃಷ್ಟಿಸುತ್ತ, ಮರು ಮೌಲ್ಯಮಾಪನಗೊಳಿಸುತ್ತ ನಡೆಯುವಂತಾಯಿತು.

ಸ್ವಾತಂತ್ರ್ಯಪೂರ್ವ ಹೈದರಾಬಾದ್ ಕರ್ನಾಟಕದ ಕಾವ್ಯವೆಂದರೆ ಅದು ಆ ಹೊತ್ತಿನ ಕನ್ನಡ ಕಾವ್ಯದ ಭಾಗವಾಗವೇ ಆಗಿದೆ. ಬದುಕು, ಭಾಷೆ, ಸಂಸ್ಕೃತಿಯನ್ನು ವಿವರಗಳಲ್ಲಿ ಕಟ್ಟಿಕೊಡುವಲ್ಲಿ ಗದ್ಯಕ್ಕೆ ಇರುವ ಸಾಮರ್ಥ್ಯ ಕಾವ್ಯಕ್ಕಿಲ್ಲ ಎನಿಸುತ್ತದೆ. ಕಾವ್ಯದ ಸಾಮರ್ಥ್ಯ ಬೇರೆ ರೀತಿಯದು. ಕಾವ್ಯದ ಅನನ್ಯತೆಯು ಕವಿಯ ಶೈಲಿ, ರಚನೆ ಮತ್ತು ಯಾವುದೇ ಸನ್ನಿವೇಶವನ್ನು ಗ್ರಹಿಸುವ ಸಾಮರ್ಥ್ಯವನ್ನು ಅವಲಂಬಿಸಿರುತ್ತದೆ. ಶೋಷಣೆ ಎಂಬುದು ಕೇವಲ ಈ ಕಾಲದ ಗುಣವಲ್ಲ. ಅದು ಚರಿತ್ರೆಯ ಉದ್ದಕ್ಕೂ ಕಾಣಿಸುತ್ತದೆ. ಸಾಹಿತ್ಯವು ಅದನ್ನು ಹುಡುಕಿ, ತೋರಿಸುತ್ತದೆ. ಅದು ಶೋಷಿತ ವ್ಯವಸ್ಥೆಯ ಇತಿಹಾಸವನ್ನು ಬಯಲಿಗೆ ಹಾಕುತ್ತದೆ. ವರ್ಣವ್ಯವಸ್ಥೆ, ಸ್ತ್ರೀಯರ ಸ್ವಾತಂತ್ರ್ಯದ ನಿರಾಕರಣೆ, ದಲಿತರಿಗೆ ಯಾವ ಬಗೆಯ ಕಿಂಚಿತ್ ಅಧಿಕಾರವನ್ನು ಕೊಡದಿರುವುದು, ಧರ್ಮ–ದೇವರ ಹೆಸರಿನಲ್ಲಿ ಜನರನ್ನು ವಂಚಿಸುವುದು ಮುಂತಾದ ನಿಯಮಗಳನ್ನು ಹೊಂದಿರುವುದನ್ನು ಸಾಹಿತ್ಯವು ಬಲವಾಗಿ ಖಂಡಿಸುತ್ತದೆ. ಸಾಹಿತ್ಯವು ಪುರಾಣ, ಮಹಾಭಾರತ,

ರಾಮಾಯಣ ಮತ್ತು ಇತಿಹಾಸ ಕಾಲದಲ್ಲಿ, ಪುರೋಹಿತಶಾಹಿ–ರಾಜಶಾಹಿಗಳ ಕುತಂತ್ರಕ್ಕೆ ಬಲಿಯಾದ ವ್ಯಕ್ತಿಗಳನ್ನು ಗೌರವಿಸುತ್ತದೆ (ಏಕಲವ್ಯ, ಶಂಬೂಕ, ಕರ್ಣ, ಅಕ್ಕ, ಅಹಲ್ಯೆ, ಸೀತೆ, ರೇಣುಕ). ಚರಿತ್ರೆಯಲ್ಲಿ 'ಜೀವಪರ' ನಿಲುವುಗಳನ್ನು ಪ್ರತಿಪಾದಿಸುತ್ತ, ದಮನಕ್ಕೆ ಒಳಗಾದವರನ್ನು ಸಮಾಜದಲ್ಲಿ ಆತ್ಮಗೌರವದಿಂದ ಬಾಳುವಂತೆ ಮಾಡಲು ಶ್ರಮಿಸಿದವರನ್ನು (ಬುದ್ಧ, ಬಸವ, ಗಾಂಧಿ, ಅಂಬೇಡ್ಕರ) ಗೌರವಿಸುತ್ತದೆ. ರಾಜಕೀಯವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ 'ಜನಪರ' ಕಾರ್ಯಗಳನ್ನು ಮಾಡಿದ ರಾಜಕಾರಣಿಯಿರಲಿ, ಸಾಹಿತಿ–ಕಲಾವಿದರಿರಲಿ, ಚಿಂತಕರಿರಲಿ, ಸಂತರಿರಲಿ (ಜೆ.ಪಿ., ಲೋಹಿಯಾ, ಅರಸ್, ಪೆರಿಯಾರ್, ವಿವೇಕಾನಂದ) ಅವರ ಚಿಂತನೆಗಳನ್ನು ಎತ್ತಿ ಹಿಡಿಯುತ್ತದೆ. ಮೂಢನಂಬಿಕೆ, ಸಂಪ್ರದಾಯಗಳ ಆಚರಣೆ ಮುಂತಾದ ಜೀವವಿರೋಧಿ ಧಾರ್ಮಿಕ ಆಚರಣೆಗಳನ್ನು ಖಂಡಿಸುತ್ತದೆ. ಪುರುಷ ಪ್ರಧಾನತೆಯನ್ನು ವಿರೋಧಿಸಿ, ಸ್ತ್ರೀ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುತ್ತದೆ. ಸಮಾಜದಲ್ಲಿ ಸಮಾನತೆಯನ್ನು ಬಯಸುತ್ತದೆ. ದೇಶದ ಸಂಪತ್ತನ್ನು ದೋಚುವ–ಹಾಳುಮಾಡುವ ಬಹುರಾಷ್ಟ್ರೀಯ ಕಂಪೆನಿಗಳನ್ನು, ಇಂಥದ್ದಕ್ಕೆ ಅವಕಾಶ ಮಾಡಿಕೊಡುವ ರಾಜಕೀಯ ವ್ಯವಸ್ಥೆಯನ್ನು ತರಾಟೆಗೆ ತೆಗೆದುಕೊಳ್ಳುತ್ತದೆ. ಶೋಷಣೆ, ದಬ್ಬಾಳಿಕೆ ಎಲ್ಲಿಯೇ ನಡೆದಿರಲಿ, ಯಾರ ಮೇಲೆಯೇ ನಡೆದಿರಲಿ ಅದನ್ನು ಜವಾಬ್ದಾರಿಯಿಂದ ವಿರೋಧಿಸುತ್ತದೆ. (ದಕ್ಷಿಣ ಆಫ್ರಿಕಾ, ಕಪ್ಪುಜನ, ನೆಲ್ಸನ್ ಮಂಡೇಲಾ, ಮೊಲಾಯಿಸ್, ರೂಪಾಕನ್ವರ್). ಸಮಾಜದಲ್ಲಿ ಸಂಭವಿಸುವ ಕ್ರೂರ ಕೃತ್ಯಗಳನ್ನು ಖಂಡಿಸುತ್ತದೆ. (ಕುದುರೆ ಮೋತಿ ಪ್ರಕರಣ, ದಲಿತರನ್ನು ಅವಮಾನಿಸುವಂಥ ಪ್ರಕರಣ) ಸಮಾಜದಲ್ಲಿ ನಿರ್ಭೀತಿಯು ಜನಸಾಮಾನ್ಯರಲ್ಲಿ ಧೈರ್ಯ–ಪ್ರೀತಿಯನ್ನು ತುಂಬುವುದು, ಹಾಸ್ಯ ಮನೋರಂಜನೆಗಳಿಂದ ಜನರಲ್ಲಿ ಜೀವನೋತ್ಸಾಹವನ್ನು ತುಂಬುವುದು ಜೊತೆಗೆ ಶೋಷಕರನ್ನು ಮನುಷ್ಯರನ್ನಾಗಿ ಮಾಡಲು ಪ್ರಯತ್ನಿಸುತ್ತದೆ. ಸಾಹಿತ್ಯದ ಅನೇಕ ಕವಿಗಳ ಕಾವ್ಯದಲ್ಲಿ ಸಾಮಾನ್ಯವಾಗಿ ಕಾಣುವ ಧೋರಣೆಗಳಿವು. ಇಂಥ ಧೋರಣೆಗಳು ಇಂದು ಸಮಾಜದಲ್ಲಿ ಕಾಣದಾಗಿವೆ ಎಂದು ಕವಿ ಚಿಂತಿತನಾಗಿದ್ದಾನೆ. ಅಂತ ಒಂದು ಕವನ ಇಲ್ಲಿದೆ.

'ಅಲ್ಲಿ ಪಾಂಡವರೇ ಇರುವುದಿಲ್ಲ.
ಆ ಕಡೆ ಈ ಕಡೆ ಎಲ್ಲ ಕೌರವರೇ ನೆರೆಯುತ್ತಾರೆ
ಅವರವರಲ್ಲೇ ಭೀಕರ ಕದನ ನಡೆಯುತ್ತದೆ.
ಗದೆಯೆತ್ತಿ ದುರ್ಯೋಧನ ದುಶ್ಯಾಸನನಿಗೆ ಇಕ್ಕುತ್ತಾನೆ,
ದುಶ್ಯಾಸನ ದುರ್ಯೋಧನನಿಗೆ ಇಕ್ಕುತ್ತಾನೆ.
ಹೀಗೆ ಎಲ್ಲ ಬಂಧುಗಳು ಪರಸ್ಪರ ಹೊಡೆದಾಡಿ
ಸರ್ವ ನಾಶಗೊಳಿಸುತ್ತ ಸರ್ವರೂ ನಾಶವಾಗಿ ಹೋಗುತ್ತಾರೆ;'[೩೧](ಕಾಲಜ್ಞಾನದ ಕವಿತೆ)

ದೇಶದ ಮುಂದಿನ ದಿನಗಳನ್ನು ಕುರಿತು ಈ ಕವಿತೆಯಲ್ಲಿ 'ಕಾಲಜ್ಞಾನ'ದಂತೆ ನುಡಿಯಲಾಗಿದೆ. ಆದರೆ ಕಾಲಜ್ಞಾನದ ಮಾತು ನಿಜವಾದಂತೆ ಭಾಸವಾಗುತ್ತದೆ. ಈ ದೇಶದಲ್ಲಿ ನಡೆಯುವ

ಕೊಲೆ–ಸುಲಿಗೆಗಳು, ದರೋಡೆಗಳು, ಸರಕಾರದ ನೀತಿ–ನಿಯಮಗಳು, ರಾಜಕಾರಣಿಗಳ ಸ್ವೇಚ್ಛಾಚಾರ, ಶ್ರೀಮಂತರ ಆಳ್ವಿಕೆ, ಬಹುರಾಷ್ಟ್ರೀಯ ಕಂಪೆನಿಗಳು ಇಲ್ಲಿಯ ಎಲ್ಲ ಬಗೆಯ ಸಂಪತ್ತನ್ನು ದೋಚುವ ನೀತಿ, ಜನಸಾಮಾನ್ಯರ ಬವಣೆಗಳು ಇವೆಲ್ಲ ನೋಡಿದರೆ ಈ ದೇಶದ ಪರಿಸ್ಥಿತಿ ಏನಾಗಿದೆ? ಮನುಷ್ಯನ ಮನಸ್ಥಿತಿ ಎಲ್ಲಿಗೆ ಬಂದಿದೆ? ಎಂಬುದು ಅರಿವಿಗೆ ಬರುತ್ತದೆ. ಒಂದು ಗಳಿಗೆಯೂ ಮನುಷ್ಯ ನೈತಿಕವಾಗಿ ಬದುಕಲು ಅಸಾಧ್ಯವಾದಂತ ಸ್ಥಿತಿ ಈ ದೇಶದಲ್ಲಿ ನಿರ್ಮಾಣವಾಗಿದೆ. 'ಏನಾಗಿದೆ ಈ ದೇಶಕ್ಕೆ? ಎತ್ತ ಸಾಗುತ್ತಿದೆ ಈ ದೇಶ' ಎಂಬ ಹತಾಶೆಯ ಉದ್ಗಾರಗಳು ಪ್ರಜ್ಞಾವಂತರಿಂದ ಕೇಳಿ ಬರುತ್ತಿವೆ. ಮನುಷ್ಯ–ಮನುಷ್ಯನ ನಡುವೆ ಪ್ರೀತಿ–ವಿಶ್ವಾಸವೇ ಇಲ್ಲ ಎಂಬುವಷ್ಟು ಸ್ವಾರ್ಥ ತುಂಬಿ ಹೋಗಿದೆ. ಹಿತಸಾಧನೆಗಾಗಿ ಒಬ್ಬರನ್ನು ಒಬ್ಬರು ಬಲಿ ತೆಗೆದುಕೊಳ್ಳುತ್ತಿದ್ದಾರೆ.

ಇಂಥ ಭಾರತದ ಪರಿಸ್ಥಿತಿಯನ್ನು ವಿಷಾದದಿಂದ, ವ್ಯಂಗ್ಯದಿಂದ, ಬೆರಗಿನಿಂದ ಅಭಿವ್ಯಕ್ತಗೊಂಡ ಹತ್ತಾರು ಕವನಗಳಿವೆ. ದೇಶವನ್ನು ಆಳಲು ಹುಟ್ಟಿಕೊಳ್ಳುವ ರಾಜಕೀಯ ಪಕ್ಷಗಳು ಮತ್ತು ಅದರ ಮುಖಂಡರು ಅಧಿಕಾರದ ಸೂತ್ರಗಳನ್ನು ಹಿಡಿದು ದೇಶವನ್ನು ಉದ್ಧಾರ ಮಾಡುವ ಪ್ರಯತ್ನಗಳೆಲ್ಲ ವಿಫಲವಾಗಿ ಹೋಗುತ್ತಿವೆ. ರಾಜಕೀಯ ಇಚ್ಛಾಶಕ್ತಿಯ ಕೊರತೆ, ದೇಶಸೇವೆಯ ಮನೋಭಾವವಿಲ್ಲದ ಕಾರಣ ಜನಸಾಮಾನ್ಯರ ಬಗ್ಗೆ ಕನಿಷ್ಟ ಕಾಳಜಿಗಳನ್ನು ತೋರಿಸದೆ ಜನರ ಬದುಕನ್ನು ಅಧೋಗತಿಗೆ ತಂದಿದ್ದಾರೆ. ಹಾಗೆ ನೋಡಿದರೆ ಇದುವರೆಗೆ ಈ ದೇಶದ ಅಧಿಕಾರವನ್ನು ಹಿಡಿದ ಯಾವ ರಾಜಕೀಯ ಪಕ್ಷವೂ ದೇಶವನ್ನು ಸುವ್ಯವಸ್ಥಿತವಾಗಿ ಮುನ್ನಡೆಸಲು ಸಾಧ್ಯವಾಗಿಲ್ಲ. 'ಜನಪರ ಸರಕಾರ'ವೆಂದು ಅಧಿಕಾರ ಹಿಡಿಯುವ ಮುನ್ನ ಜನಬೆಂಬಲ ಗಳಿಸಿ, ಅಧಿಕಾರ ಹಿಡಿದ ನಂತರ ದೇಶದ ಕಾಳಜಿಯ ಬಗ್ಗೆ ನಿರ್ಲಕ್ಷ್ಯವನ್ನು ತೋರಿಸಿ, ತಮ್ಮ ಹಿತಸಾಧನೆಗೆ ನಿಂತ ಸರಕಾರಗಳೂ ಬಂದು ಹೋಗಿವೆ. ಈಗ ಬರುತ್ತಲೂ ಇವೆ. ಯಾವ ಸರಕಾರ ಬಂದರೂ ಜನರಲ್ಲಿ ಆಶಾಭಾವನೆ ಉಳಿದಿಲ್ಲ. ಯಾವ ರಾಜಕೀಯ ಪಕ್ಷಗಳ ಮೇಲೆ ನಂಬಿಕೆ ಇಲ್ಲದಂತ ವಾತಾವರಣವಿದೆ. ಹುಸಿ ಮಾತುಗಳನ್ನು, ಆಶ್ವಾಸನೆಗಳನ್ನು ನೀಡುತ್ತಾರೆಯೇ ಹೊರತು ರಾಜಕಾರಣಿಗಳು ಜನರ ಉದ್ಧಾರವನ್ನು ಮಾಡುವುದಿಲ್ಲ ಎಂಬ ವ್ಯಥೆಯು 'ಜಾತಿ ಗೆರೆಗಳು' ಎಂಬ ಕವನದಲ್ಲಿ ವ್ಯಕ್ತವಾಗಿದೆ.

'ಆಡಂಬರದ ಅಂದಕ್ಕೆ
ಬೆಳ್ಳಗೆ ಹೊಳೆವ ಕೋರೆ ಹಲ್ಲು ಹೊರಗೆ.
ರಾಜಕೀಯದಲ್ಲಿ ಮೇಯುತ್ತಿರುವ
ಮದ್ದಾನೆಗಳದ್ದೂ ಅದೇ ಜಾತಿ ತಾನೆ?

ದ್ವಿಪಾತ್ರದ ಅಭಿನಯಕ್ಕೆ ಹೇಳಿ ಮಾಡಿಸಿದ ನಮೂನೆ.'[೨೨] (ಶಿವಶರಣಪಾಟೀಲ ಜಾವಳಿ : ಜಾತಿ ಗೆರೆಗಳು) ಈ ದೇಶದ ರಾಜಕಾರಣಿಗಳು, ಶ್ರೀಮಂತರು, ಉದ್ದಿಮೆದಾರರು, ಯಾವುದೇ ವ್ಯವಸ್ಥೆಯನ್ನು ಅದಲು ಬದಲು ಮಾಡುವಷ್ಟು ಶಕ್ತರಾಗಿದ್ದಾರೆ. ಭ್ರಷ್ಟಾಚಾರ ದಿನೇದಿನೇ ಹೆಚ್ಚಾಗುತ್ತಲೇ

ಇದೆ. ಹೀಗಾಗಿ ದೇಶವನ್ನು ಆಳುವವರು ಅಂತಿಮವಾಗಿ ಈ ದೇಶದ ಬಂಡವಾಳಗಾರರೇ ಹೊರತು ರಾಜಕೀಯ ಪಕ್ಷಗಳಲ್ಲ ಎಂಬ ಸ್ಥಿತಿ ಬಂದೊದಗಿದೆ. ದುಡಿಯುವ ಜನರನ್ನು ದುಡಿಸಿಕೊಂಡು ನಿಶ್ಯಕ್ತರನ್ನಾಗಿ ಮಾಡುವ, ಯಾವುದೇ ರೀತಿಯಿಂದ ಬಲಗೊಳ್ಳದಂತೆ ಮಾಡಿ ರಾಜಕಾರಣಿಗಳು ಆಡಳಿತ ನಡೆಸುತ್ತಿದ್ದಾರೆ. ಕವಿತೆಯ ಉದ್ದಕ್ಕೂ ಶೋಷಿತರ ಪರ ಚಿಂತನೆ ನಡೆಸಿರುವುದು ಕಾಣುತ್ತದೆ. ದಲಿತರು ಬೀಜಗಳಿದ್ದ ಹಾಗೆ. ಬೀಜ ಮೊಳೆಯಲು ಮಣ್ಣು, ನೀರು, ಗಾಳಿ ಬೇಕು. ಆದರೆ ಬೀಜವನ್ನು ಉಗ್ರಾಣದಲ್ಲಿಟ್ಟುಕೊಂಡರೆ ಅದು ಮೊಳೆಯುವುದಿರಲಿ ಹುಳಬಿದ್ದು ತನ್ನ ಸತ್ವವನ್ನು, ಶಕ್ತಿಯನ್ನೇ ಕಳೆದುಕೊಳ್ಳುತ್ತದೆ. ಉಳ್ಳವರು, ಆಳುವವರು ಮಾಡಿಕೊಂಡು ಬಂದ ಕೃತ್ಯ ಇಂಥದ್ದೆ ಆಗಿದೆ. ದಲಿತರ ಶಕ್ತಿಯನ್ನು ತಮ್ಮ ಅಧಿಕಾರವೆಂಬ ಉಗ್ರಾಣದಲ್ಲಿಟ್ಟು ಬಂಧಿಸಿದ್ದಾರೆ. ಅದಕ್ಕೆ ಮೊಳೆಯಲು, ಬೆಳೆಯಲು ಅವಕಾಶವನ್ನೇ ನೀಡದಿದ್ದರೆ ಅದು ನುಸಿ ಹಿಡಿದು ನಾಶವಾಗುತ್ತದೆ. ದಲಿತರ ಸ್ಥಿತಿ ಮಣ್ಣು ಕಾಣದ ಬೀಜದಂತಾಗಿದೆ ಎಂಬ ರೂಪಕವನ್ನು ಬಳಸಿರುವುದು ಇಡೀ ವ್ಯವಸ್ಥೆಯನ್ನು ತೆರೆದು ತೋರಿಸಿದಂತಾಗಿದೆ.

**೬.೧. ಪುರೋಹಿತ–ಬಂಡವಾಳಶಾಹಿ ವಿರುದ್ಧ**

ದೇಶದಲ್ಲಿ ಪುರೋಹಿತಶಾಹಿ ವ್ಯವಸ್ಥೆಯು ದೇವರು–ಧರ್ಮದ ಹೆಸರಿನಲ್ಲಿ ಗುಡಿ–ಮಠಗಳನ್ನು ನಿರ್ಮಿಸಿಕೊಂಡಿದೆ. ಆಳುವ ವ್ಯವಸ್ಥೆಯ ಜೊತೆಗಿದ್ದು, ಸಮಾಜದಲ್ಲಿ ಉನ್ನತ ಸ್ಥಾನವನ್ನು ಹಿಡಿದುಕೊಂಡು ಜನ ಸಾಮಾನ್ಯರನ್ನು ಹಲವು ರೀತಿಯಲ್ಲಿ ಹಿಂಸಿಸುತ್ತದೆ. ಆಳುವ ವ್ಯವಸ್ಥೆ ಮತ್ತು ಪುರೋಹಿತ ವ್ಯವಸ್ಥೆ ಯಾವಾಗಲೂ ಒಂದಾಗಿರುತ್ತವೆ. ಅವು ಒಂದು ನಾಣ್ಯದ ಎರಡು ಮುಖಗಳಂತಿದ್ದು ಜನಸಾಮಾನ್ಯರನ್ನು ವ್ಯವಸ್ಥಿತವಾಗಿಯೇ ತುಳಿಯುತ್ತವೆ. ಆಳುವ ವ್ಯವಸ್ಥೆ ಒಂದು ರೀತಿಯಿಂದ ಶೋಷಿಸಿದರೆ, ಬಂಡವಾಳಶಾಹಿ, ಪುರೋಹಿತಶಾಹಿಗಳು ಜನಸಾಮಾನ್ಯರನ್ನು ಮೂಢನಂಬಿಕೆ, ಪಾಪ–ಪುಣ್ಯ, ಪುನರ್ ಜನ್ಮಗಳ ಕಲ್ಪನೆಯ ಕರ್ಮಕೂಪದಲ್ಲಿ ಸಿಲುಕಿಸಿ ಅಸಹಾಯಕರನ್ನಾಗಿ ಮಾಡಿ, ಅವರನ್ನು ಅಜ್ಞಾನದಲ್ಲಿ ದೂಡುತ್ತವೆ. ಅದರಿಂದ ಬಿಡುಗಡೆ ಹೊಂದಲು ಅದೇ ವ್ಯವಸ್ಥೆಗೆ ಮೊರೆ ಹೋಗುವಂತೆ ಮಾಡುತ್ತವೆ. ಜನಸಾಮಾನ್ಯರು ತಮ್ಮ ಶಕ್ತಿಯನ್ನೆಲ್ಲ ಇಂಥದ್ದಕ್ಕೆ ಧಾರೆ ಎರೆಯುತ್ತಾರೆ. ಧರ್ಮಾಧಿಕಾರಿ, ಮಠಾಧೀಶ, ಜಗದ್ಗುರು ಎಂಬ ಹೆಸರಿನ ಸ್ವಾಮಿಗಳ ನಿಜಸ್ಥಿತಿಯನ್ನು ಈ ಭಾಗದ ಅನೇಕ ಕವಿತೆಗಳು ಹೇಳುತ್ತವೆ. ದೇವರ ಹೆಸರಿನಲ್ಲಿ ಬಿಡುವ ಗೂಳಿ ಕಂಡ ಕಂಡವರ ಹೊಲ ಹೊಕ್ಕು ಹಸಿರು ಮೇದರೂ ಅದು ದೇವರ ಗೂಳಿಯಾದ್ದರಿಂದ ಅದನ್ನು ತಡೆಯುವುದು ಪಾಪವಾಗುತ್ತದೆ ಎಂಬ ನಂಬಿಕೆಯಂತೆ ಮಠಾಧೀಶನನ್ನು ತೆಗಳುವುದು ಸಾಮಾಜಿಕವಾಗಿ ನಿಷಿದ್ಧವಾಗಿದೆ. ಆದರೆ ಕವಿಗಳಿಗೆ ಯಾವ ಅಂಜಿಕೆ, ಅಳುಕೂ ಇಲ್ಲದೇ ವ್ಯವಸ್ಥೆಯನ್ನು ಸರಿಪಡಿಸಲು ಟೀಕಿಸಿ ಸಾಹಿತ್ಯ ರಚಿಸಿರುವುದು ಕಾಣುತ್ತೇವೆ. ಮಠಾಧೀಶರನ್ನು ದೇವರ ಗೂಳಿಗೆ ಹೋಲಿಸಿ ಕವಿತೆ ರಚಿಸಿರುವುದನ್ನು ಅನೇಕ ಕವಿತೆಗಳಲ್ಲಿ ಕಾಣುತ್ತೇವೆ. ಇಂಥ ಪುರೋಹಿತಶಾಹಿಗಳನ್ನು, ಬಂಡವಾಳಶಾಹಿಯನ್ನು ಎಚ್ಚರಿಸುವ, ಛೇಡಿಸುವ, ವ್ಯಂಗ್ಯಮಾಡುವ ಅನೇಕ ಕವನಗಳಿವೆ. 'ಅಡ್ಡಪಲ್ಲಕ್ಕಿ ಮೆರವಣಿಗೆ' (ಕಾಶೀನಾಥ

ಅಂಬಲಿಗೆ), 'ಶೆಟ್ಟಿ' (ಶಾಂತರಸ), 'ಪುರೋಹಿತಶಾಹಿಗಳ ಹಾಡು' (ಈರಪ್ಪ ಎಂ.ಕಂಬಳಿ) 'ಅಯ್ಯೋಸ್ವಾಮಿಗಳೆ' (ಮಹಾಂತೇಶ ಮಸ್ಕಿ), 'ಅಶ್ವಹೃದಯಿ ಮಹಾಂತ ಸುಪ್ರಭಾತ' (ಎನ್.ಜಿ. ಸ್ವಾಮಿ) ಈ ಎಲ್ಲ ಕವಿತೆಗಳು ಪುರೋಹಿತಶಾಹಿ, ಬಂಡವಾಳಶಾಹಿಗಳು ಈ ಸಮಾಜದಲ್ಲಿ ಮಾಡುವ ಕೃತ್ಯಗಳನ್ನು ತೋರಿಸುತ್ತವೆ. ಅಂತಹ ಒಂದು ಕವನ ಇಲ್ಲಿದೆ.

'ಮೂರು ತಿಂಗಳಿಗೊಮ್ಮೆ ತಿರುಪತಿ ಯಾತ್ರೆ
ಈ ಸೆಟ್ಟಿಗೆ.
ಆಗಲೇ ಇವನ ತಲೆ ಗಡ್ಡ ಮೀಸೆ–ಸುಡುಗಾಡು–
ಎಲ್ಲಾ ಕೂದಲುಗಳಿಗೂ ಮೋಕ್ಷ!
ತಿಮ್ಮಪ್ಪನಿಗೂ ಇವನಿಗೂ ಒಪ್ಪಂದ
ಕಳ್ಳ ಸಂತೆ ವ್ಯಾಪಾರಕ್ಕಾಗಿ.'[೩೩] (ಶಾಂತರಸ : ಸೆಟ್ಟಿ)ಈ ಕವಿತೆಗಳಲ್ಲಿ ಧರ್ಮ–ದೇವರ ಹೆಸರಿನಲ್ಲಿ ಮುಗ್ಧ ಜನರನ್ನು ವಂಚಿಸುವ ಶೆಟ್ಟಿಯ ಕೃತ್ಯವನ್ನು ವ್ಯಂಗ್ಯ ಮಾಡಲಾಗಿದೆ. ಜೊತೆಗೆ ತಿರುಪತಿ ತಿಮ್ಮಪ್ಪನ ಕಾಯಕವನ್ನು ನಿಷ್ಠೂರವಾಗಿ ಖಂಡಿಸಲಾಗಿದೆ. ಕವಿ ಬಂಡಾಯ ಮನೋಧರ್ಮ ತಾಳಿರುವುದು ಇಲ್ಲಿನ ವ್ಯವಸ್ಥೆಯಿಂದ ರೋಸಿಯೇ. ದೇವರು ಧರ್ಮದಿಂದ ಈ ದೇಶದ ಬಡವರಿಗೆ ಅಪಾಯವೇ ಹೊರತು ಯಾವ ಲಾಭವೂ ಇಲ್ಲ. ದೇವರು ಧರ್ಮ ಎಂಬುದು ಎಂದಿಗೂ ಪುರೋಹಿತಶಾಹಿಗಳ ಬಂಡವಾಳವಾಗಿದೆ. ಈ ಕವಿಗಳು ವಚನಪರಂಪರೆಯ ಗಾಢ ಪ್ರಭಾವಕ್ಕೆ ಒಳಗಾದವರು. ಈ ಶತಮಾನದ ಬ್ರಾಹ್ಮಣ ವಿರೋಧಿ ಚಳವಳಿಗಳನ್ನು ಸಾಂಸ್ಕೃತಿಕ ಕಾರಣಕ್ಕೆ ಬೆಂಬಲಿಸುವವರಾದ ಕಾರಣ, ಬಂಡವಾಳಶಾಹಿ ವಿರೋಧಿ ನಿಲುವು ತಾಳಲು ಸಹಾಯವಾಯಿತು ಅನಿಸುತ್ತದೆ.

'ಬರುತಿದೆ ಬಡವರ ಯುಗ ನೆನಪಿಡು ಓ ಧನಿಕ
ತರುತಿದೆ ನಿನಗೇ ಕ್ಷಯ ನಿನ್ನಯ ಧನಕನಕ'[೩೪] (ಕಾವ್ಯಾನಂದ : ಬರುತಿದೆ ಬಡವರ ಯುಗ) ಸಾಮಾನ್ಯವಾಗಿ ಕಾವ್ಯವನ್ನು 'ಜನರ ನೋವಿಗೆ ಮಿಡಿಯುವ ಪ್ರಾಣಿಮಿತ್ರ' ಎಂದು ಗ್ರಹಿಸಲಾಗುತ್ತದೆ. ಇಲ್ಲಿ ಕವಿ ಬಂಡವಾಳಶಾಹಿಯ ವಿರುದ್ಧ ಮಾತಾಡಿರುವುದು ಕಾಣುತ್ತದೆ. ಕೇವಲ ಹಣ ಗಳಿಕೆಯಿಂದ ಎಲ್ಲವೂ ಸಿಕ್ಕಂತಾಗುವುದಿಲ್ಲ. ಜೀವನದಲ್ಲಿ ಮಾನಸಿಕ ನೆಮ್ಮದಿ ಮುಖ್ಯ. ಹಾಗಾಗಿ ಬಡವರಿಗೆ ಸಹಾಯ ಮಾಡು ಎಂದು ಕವಿ ಹೇಳುತ್ತಾರೆ. ಆ ಮೂಲಕ ಸಮಾಜದಲ್ಲಿ ಸಮಾನತೆ ತರಲು ಪ್ರಯತ್ನಿಸುವುದು ಕಂಡು ಬರುತ್ತದೆ. ಬಡವರನ್ನು ಶೋಷಿಸಿದ ವರದಕ್ಷಿಣೆಯು ಇಲ್ಲಿನ ಕವಿಗಳಿಗೆ ವಸ್ತು ಆಗಿದೆ. ಸಮಾಜದ ಕೆಲವೇ ವರ್ಗಗಳಲ್ಲಿ ಇದ್ದ ಆ ಅನಿಷ್ಟ ಆಚರಣೆಯನ್ನು ಕವಿ ವ್ಯಂಗ್ಯದಿಂದ ಬರೆದಿದ್ದಾರೆ.

ಶ್ರೀ ಲಕ್ಷ್ಮಿ ಮನೆಯೊಳಗೆ ನಲುಮೆಯಿಂ ಬರುವಾಗ
ಬಾ ಒಳಗೆ ಎನಬೇಕೆ ಇಷ್ಟು ಕೊಟ್ಟೇ
ಶ್ರೀ ಗಂಗೆ ಹೃದಯದಲಿ ಒಲುಮೆಯಿಂ ಹರಿವಾಗ
ಧನಕ್ಕಾಗಿ ದಿನನೂಲು ಬಾಯಿ ಬಿಟ್ಟೆ

ಕೋಶ ಬರುತಿರೆ ಕಾಸ ಕೇಳಿ ಕೆಟ್ಟೆ

ಹತ್ತು ಸಾವಿರವಂತೆ ಹದಿನೈದು ಮಿಕ್ಕಂತೆ
ಇಪ್ಪತ್ತು ನಾಲ್ಕಕ್ಕೆ ಮಿಕ್ಕ ಬೇಕೇ?
ಎಷ್ಟು ಕೊಟ್ಟರು ಇನ್ನು ಅದುವಿಲ್ಲ ಇದುವಿಲ್ಲ
ದೊಡ್ಡವರ ತಪ್ಪನ್ನು ಎಣಿಸಬೇಕೇ?
ಬಡವರ ಗೋಳನ್ನು ಗಣಿಸಬೇಕೇ?[೩೫] (ರಂ ರಾ ನಿಡಗುಂದಿ : ಅ ಹ ಹ... ವರದಕ್ಷಿಣೆ)

ಈ ಕವಿತೆಯ ಶೀರ್ಷಿಕೆಯೇ ವ್ಯಂಗ್ಯದಿಂದ ಕೂಡಿದೆ. ಸಮಾಜಿಕ ಅನಿಷ್ಟ ಪದ್ಧತಿ ಎಂದು ಪರಿಗಣಿಸುವ ವರದಕ್ಷಿಣೆಯನ್ನು ಕವಿ ವ್ಯಂಗ್ಯದಿಂದ ವಿಡಂಬನಾತ್ಮಕವಾಗಿ ಕಂಡಿದ್ದಾರೆ. ವರದಕ್ಷಿಣೆಯು ಕೇವಲ ಮೇಲ್ವರ್ಗಗಳಲ್ಲಿ ಇದ್ದುದು ಎಲ್ಲ ವರ್ಗಗಳಿಗೂ ವ್ಯಾಪಿಸುತ್ತಿರುವುದು ಈ ಭಾಗ ಕವಿಗಳಿಗೆ ಚಿಂತೆಗೀಡು ಮಾಡಿದೆ. ಉಳ್ಳವರ ಮತ್ತು ಇಲ್ಲದವರ ನಡುವಿನ ಅಂತರವನ್ನು ಇಂತಹ ಪದ್ಧತಿಗಳು ಹೆಚ್ಚಿಸುತ್ತವೆಯೇ ಹೊರತು ಕಡಿಮೆಗೊಳಿಸಲಾರವು. ಹಾಗಾಗಿ ಅದನ್ನು ಹತೋಟಿಯಲ್ಲಿಡಲು ಪ್ರಯತ್ನಸಬೇಕೆಂಬ ಸೂಕ್ಷ್ಮತೆಯನ್ನು ಕವಿ ಇಲ್ಲಿ ನೀಡಿದ್ದಾರೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಬಡವ-ಶ್ರೀಮಂತ ಎಂಬ ಬೇಧಗಳಿದ್ದು ಅವರ ಆಹಾರ ಪದ್ಧತಿಯನ್ನು ಲೇಖಕಿಯೊಬ್ಬರು ತಮ್ಮ ಕಾವ್ಯದಲ್ಲಿ ಈ ರೀತಿ ಹಿಡಿದಿಟ್ಟಿದ್ದಾರೆ.

'ನೂರಾರು ಎಕರೆ ಜಮೀನು
ಉಣ್ಣುವ ಬೆಣ್ಣೆ ತುಪ್ಪದ
ಕಲಾವಂತಿಕೆ ಒಂದೆಡೆ
ನಟ್ಟು ಕಡೆದು ನಾರು ಹೊಸೆದು
ಉತ್ತಿ ಬಿತ್ತಿಯೂ ಬೆವರ
ಮಜ್ಜಿಗೆಯಲ್ಲಿ ಬಾಯಿ ಚಪ್ಪರ ಇನ್ನೊಂದೆಡೆ'[೩೬] (ಶೈಲಜಾ ಉಡುಚಣ : ಶ್ರಮ ಏವ ಜಯತೆ) ಉಳ್ಳವರ ಮತ್ತು ಇಲ್ಲದವರ ಆಹಾರ ಪದ್ಧತಿಗಳ ನಡುವಿನ ಅಂತರವನ್ನು ಈ ಕವಿತೆ ಹೇಳುತ್ತದೆ. ಸಮಾಜದಲ್ಲಿ ಅಸಮಾನತೆ ಎನ್ನುವುದು ತಿನ್ನುವ ಆಹಾರವನ್ನೂ ಆವರಿಸಿಕೊಂಡಿದೆ. ಬಡಜನರ ನೋವಿಗೆ ಕಾವ್ಯವು ಮಿಡಿಯಲು ಪ್ರಯತ್ನಿಸುತ್ತದೆ. ಸಮಾಜದಲ್ಲಿ ಸಮಾನತೆ ತರಲು ಬಯಸಿದ್ದ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ ಮುಂತಾದವರ ನಿಲುವು ಇದೇ ಆಗಿದೆ. 'ಇವನಾರವ ಎಂದೆನಿಸದೆ ಇವ ನಮ್ಮವ ಎಂದೆನಿಸಯ್ಯ' ಎಂಬ ಶರಣರ ಮಾತಿನಲ್ಲಿ ಮನುಷ್ಯನ ಮೇಲಿನ ಅಪಾರ ಪ್ರೀತಿಯನ್ನು ಧ್ವನಿಸುತ್ತದೆ. ಈ ಧ್ವನಿಯಲ್ಲಿ ಆಪ್ತತೆಯಿದೆ. ಜಾತಿ, ಧರ್ಮಗಳ ನಡುವಿನ ಕಂದರವನ್ನು ಮುಚ್ಚುವ, ಮೇಲು-ಕೀಳು ಎಂಬುದನ್ನು ಅಳಿಸುವ, ಸಮಾನತೆಯನ್ನು ಬಿತ್ತುವ ಪ್ರೀತಿ ತುಂಬಿದೆ.

**೬.೨. ಸ್ತ್ರೀ ಸ್ವಾತಂತ್ರ್ಯ**

೧೨ನೇಯ ಶತಮಾನದಲ್ಲಿ ನಡೆದ ಶರಣರ ಆಂದೋಲನದ ಫಲವಾಗಿ ಅನೇಕ ಸ್ತ್ರೀಯರು

ಪುರುಷರ ಜೊತೆಯಲ್ಲಿ, ಪುರುಷ ಸಮಾನವಾಗಿ ಯಾವುದೇ ಹಿಂಜರಿಕೆ ಕೀಳರಿಮೆ ಇಲ್ಲದೆ ಸಾಂಸ್ಕೃತಿಕ ರಂಗದಲ್ಲಿ ಭಾಗವಹಿಸುವಂತಾಯಿತು. ಈ ಹಿಂದೆ ಕನ್ನಡ ಸಾಂಸ್ಕೃತಿಕ ವಲಯದಲ್ಲಿ ಮಹಿಳೆಯರು ಬಹಿರಂಗವಾಗಿ ಕಾಣಿಸಿಕೊಂಡದ್ದು ತೀರಾ ಕಡಿಮೆಯೇ. ೨೦ನೇ ಶತಮಾನದಲ್ಲಿ ಸ್ವಾತಂತ್ರ್ಯ ಸಿಗುವವರೆಗೂ ಸಾಂಸ್ಕೃತಿಕ ವಲಯದಲ್ಲಿ ಮಹಿಳೆಯರು ಕಾಣಿಸಿಕೊಂಡದ್ದೂ ಅಷ್ಟಕ್ಕಷ್ಟೆ. ನವೋದಯ, ನವ್ಯ ಸಾಹಿತ್ಯ ಚಳವಳಿಯ ಸಂದರ್ಭದಲ್ಲಿ ಮಹಿಳೆಯರು ಹಿನ್ನೆಲೆಗೆ ಉಳಿದಿದ್ದರು. ಈ ಶತಮಾನದ ಕೊನೆಯ ಕಾಲು ಶತಮಾನದಲ್ಲಿ ಗಣನೀಯ ಪ್ರಮಾಣದಲ್ಲಿ ಮಹಿಳೆಯರು ಎಲ್ಲ ರಂಗಗಳಲ್ಲೂ ಮುನ್ನೆಲೆಗೆ ಬಂದಿದ್ದಾರೆ. ಇದರಿಂದ ಈ ಹೊತ್ತಿನಲ್ಲಿ ಮಹಿಳೆಯರ ಸ್ಥಾನಮಾನಗಳು ಸುಧಾರಿಸಿವೆಯೇ ಹೊರತು 'ಸ್ವಾತಂತ್ರ್ಯ' ಸಿಕ್ಕಿಲ್ಲ. ಭಾರತದಂತಹ ದೇಶದಲ್ಲಿ ಮಹಿಳೆಯರಿಗೆ ನಿಜವಾದ ಸ್ವಾತಂತ್ರ್ಯ ಲಭ್ಯವಾಗುವುದು ಸುಲಭವಲ್ಲ ಎನಿಸುತ್ತದೆ. ಆದರೆ ೬೦ರ ದಶಕದಿಂದ ಇಚೆಗೆ ಮಹಿಳೆಯರು ತಮತಮಗೆ ಇಷ್ಟವಾದ ರಂಗದಲ್ಲಿ ಬೆಳೆಯಲು ಕೆಲಮಟ್ಟಿಗೆ ಅವಕಾಶಗಳು ದೊರಕಿವೆ.

ಚರಿತ್ರೆಯಲ್ಲಿ ಕಾಣಿಸುವ ಮಹಿಳೆಯರನ್ನು ಹಿನ್ನೆಲೆಯಾಗಿಟ್ಟುಕೊಂಡು ಮಹಿಳಾ ಸ್ವಾತಂತ್ರ್ಯವನ್ನು ಅಳೆಯಲು ಬರುವುದಿಲ್ಲ. ಅಕ್ಕಮಹಾದೇವಿಯಂಥ ಒಬ್ಬಿಬ್ಬರಿಗೆ ಅದು ಸಾಧ್ಯವಾಗಿರಬಹುದು. ಅಕ್ಕನ ಸ್ವಾತಂತ್ರ್ಯವಾದರೂ ಈ ಶತಮಾನದ ಅರ್ಥದ ಸ್ವಾತಂತ್ರ್ಯವಲ್ಲ. ೨೦ನೇ ಶತಮಾನದಲ್ಲಿ ಈ ದೇಶದ ಪ್ರಧಾನಿ ಮಹಿಳೆಯೇ ಆಗಿದ್ದಳು. ಅದರಿಂದ ಮಹಿಳೆಯರು ಉನ್ನತ ಸ್ಥಾನಮಾನಗಳನ್ನು ಹೊಂದುವ ಅವಕಾಶವನ್ನು, ಶಕ್ತಿಯನ್ನು ಪಡೆದಿದ್ದರು ಎಂದು ಗ್ರಹಿಸಿದರೆ ತಪ್ಪಾಗುತ್ತದೆ. ೨೧ನೇ ಶತಮಾನಕ್ಕೆ ಕಾಲಿಡಲಿರುವ 'ಆಧುನಿಕ ಭಾರತ'ದಲ್ಲೂ ಸ್ತ್ರೀಯರ ಸ್ಥಾನಮಾನಗಳು ತೃಪ್ತಿಕರವಾಗಿಲ್ಲ. ಇನ್ನು ಚರಿತ್ರೆಗೆ ಹೋಗಿ ನೋಡುವುದು, ಹುಡುಕುವುದು ಕಷ್ಟವೇ. ಸ್ತ್ರೀಯರಿಗೆ 'ಸ್ವಾತಂತ್ರ್ಯ' ಸಿಗಬೇಕಾದರೆ ಆರ್ಥಿಕ ನೆಲೆಯಲ್ಲಿ ಮೂಲಭೂತ ಬದಲಾವಣೆಗಳು ಆಗಬೇಕು. ಪುರುಷ ಪ್ರಧಾನ ಸಮಾಜದ ನಿಲುವುಗಳು ಸಡಿಲಗೊಳ್ಳಬೇಕು. ಅಂದಾಗ ಮಾತ್ರ ಸ್ತ್ರೀ ಸಮಾನತೆ ಸಾಧ್ಯ.

'ಮನುಸ್ಮೃತಿ'ಯ ಸೂತ್ರದಂತೆ ಸ್ತ್ರೀ ಇಂದಿಗೂ ಪರಾವಲಂಬಿಯಾಗಿದ್ದಾಳೆ. ಅಡಿಗೆ ಮನೆಗೆ ಮಾತ್ರ ಸೀಮಿತ ಎಂಬುದು ನಿಜವಾದರೂ ಅಲ್ಲಿಯೂ ಅವಳಿಗೆ ಸ್ವಾತಂತ್ರ್ಯವಿತ್ತೆ? ಅಲ್ಲಿಯೂ ಪುರುಷ ನಿಯಂತ್ರಣ ಇದ್ದೇ ಇರುತ್ತಿತ್ತು. ಇದರಿಂದಾಗಿ ಮುದುಡಿಕೊಂಡಿದ್ದ ಸ್ತ್ರೀಯರಿಗೆ ಇಂದಿನ 'ಆಧುನಿಕ' ಯುಗದಲ್ಲಿಯಾದರೂ ಸಿಕ್ಕ ಅವಕಾಶಗಳನ್ನು ಉಪಯೋಗಿಸಿಕೊಂಡು 'ಹಾಯಾಗಿ ಕಾಲು ಚಾಚ'ಲು ಬಯಸಿದ್ದಾಳೆ. ಹೈದರಾಬಾದ್ ಕರ್ನಾಟಕ ಮಧ್ಯಮವರ್ಗಕ್ಕೆ ಸೇರಿದ ಕವಯತ್ರಿಯರು ಕರ್ನಾಟಕದ ಉಳಿದ ಕವಿಗಳಂತೆ ಸ್ವಾತಂತ್ರ್ಯದ ಅಪೇಕ್ಷೆಗಳನ್ನು ವ್ಯಕ್ತ ಮಾಡಿರುವುದು ಕಂಡು ಬರುತ್ತದೆ.

ಗುಂಪು ಗುಂಪುಗಳಲಿ
ದಬ್ಬಿ ತಿರುಗುಣಿಯಲಿ

ತುಳಿದು ನಡು ನೀರಿನಲಿ
ಕೈಯ ಬಿಡಬೇಡಿ
ನಾನು ಬಾಳಲು ಬಂದಿದ್ದೇನೆ.

ಮನುಷ್ಯ ನಾನು
ದುಃಖ ಸುಖಗಳ ನಂಜಿನಲಿ
ತುಸು ಜೀವನದ
ಗಳಿಗೆಗಳನ್ನು
ಚಪ್ಪರಿಸಬೇಕೆಂದಿರುವೆ'[೩೭] (ಶೈಲಜಾ ಉಡುಚಣ : ನಾನು ಮನುಷ್ಯ) ಈ ಕವಿತೆಯು ಸ್ತ್ರೀ ಸ್ವಾತಂತ್ರ್ಯವನ್ನು ಒತ್ತಿ ಹೇಳುತ್ತದೆ. ಪ್ರತಿಯೊಬ್ಬ ಸ್ತ್ರೀಯರಿಗೆ ತಮ್ಮಗೇ ಆದ ಆಸೆ ಆಕಾಂಕ್ಷೆಗಳು ಇರುತ್ತವೆ. ಅವುಗಳನ್ನು ಪೂರೈಸಿಕೊಳ್ಳಲು ಮನಸ್ಸು ಹಂಬಲಿಸುತ್ತದೆ. ಆದರೆ ಅವಕಾಶ ಇರುವುದಿಲ್ಲ. ಬಾಲ್ಯ, ಯೌವನ, ಮುಪ್ಪಿನಲ್ಲಿ ಒಬ್ಬೊಬ್ಬರ ಆಶ್ರಯದಲ್ಲಿ ಬೆಳೆದು ಬದುಕುವ ಅವಕಾಶವನ್ನು ಮಾತ್ರ ಪುರುಷ ಪ್ರಧಾನ ಸಮಾಜ ಅವಳಿಗೆ ಕಲ್ಪಿಸಿದೆ. ಇದರಿಂದ ಬಿಡುಗಡೆ ಹೊಂದಲು, ತನ್ನ ಕನಸಿನ ಲೋಕದಲ್ಲಿ ಬದುಕಲು ಅವಳು ಹಂಬಲಿಸುತ್ತಲೇ ಬಂದಿದ್ದಾಳೆ. ಸ್ತ್ರೀಯರ ಅಸಹಾಯಕತೆ ಈ ಕವಿತೆಯಲ್ಲಿ ವ್ಯಕ್ತವಾಗಿದೆ. ಆದರೂ ಅವಳು 'ಸ್ವತಂತ್ರ'ವಾಗಿ ಮತ್ತು ಸಬಲೆಯಾಗಿ ಬದುಕಲು ನಿರಂತರ ಹೋರಾಟ ನಡೆಸಿದ್ದಾಳೆ. ಚರಿತ್ರೆಯುದ್ದಕ್ಕೂ ಮಹಿಳೆ ಪುರುಷನ ಅಧಿಕಾರವನ್ನು ಪ್ರಶ್ನಿಸುತ್ತಲೇ ಬಂದಿದ್ದಾಳೆ. ಇಂಥ ನಿಲುವು ಆರ್ಥಿಕವಾಗಿ ಗಟ್ಟಿಯಾದಾಗ ಮಾತ್ರ ತಾಳಲು ಸಾಧ್ಯ. ಪುರುಷನ ಅಧೀನದಲ್ಲಿ ಬದುಕುತ್ತ, ದಮನಕ್ಕೆ ಒಳಗಾಗುತ್ತ ಬಂದಿರುವ ಸ್ತ್ರೀಯನ್ನು ಪುರಾಣಗಳು ಮಾತ್ರ ವೈಭವೀಕರಿಸುತ್ತ ಬಂದಿವೆ. ಅತ್ಯುನ್ನತ ಸ್ಥಾನವನ್ನು ಸ್ತ್ರೀಗೆ ಕೊಟ್ಟಿವೆ. ಆದರೆ ಬದುಕಿನಲ್ಲಿ ಅವಳು ಕನಿಷ್ಟ ಸ್ಥಾನವನ್ನು ಅನುಭವಿಸುವುದು ವಿಪರ್ಯಾಸದ ಸಂಗತಿಯಾಗಿದೆ. ಸ್ತ್ರೀಯನ್ನು ಗೌರವಿಸುವ ಸ್ಥಾನದಲ್ಲಿ ದೇವರು ನೆಲೆಗೊಂಡಿರುತ್ತಾನೆ ಎಂದು ಪುರಾಣಗಳು ಹೇಳುತ್ತವೆ. ಸಮಾಜದಲ್ಲಿ ಮಾತ್ರ ಯಾವ ಬಗೆಯ ಸ್ವಾತಂತ್ರ್ಯವನ್ನು ಕಾಣದೆ ಸ್ತ್ರೀಯು ನರಳುತ್ತಿದ್ದಾಳೆ.

**೬.೩. ಕಾವ್ಯದಲ್ಲಿ ಮಹಾಪುರುಷರ ನೆನಪು**

ಮನುಷ್ಯನ ದುಃಖಕ್ಕೆ ಇರುವ ಮೂಲ ಕಾರಣಗಳನ್ನು ಶೋಧಿಸಿ ಅದರಿಂದ ಬಿಡುಗಡೆ ಹೊಂದುವ ದಾರಿಯನ್ನು ತೋರಿಸುವ ಶಕ್ತಿ ಕವಿತೆಗೆ ಇದೆ. ಮನುಷ್ಯನ ದುಃಖಕ್ಕೆ ಹಲವು ಕಾರಣಗಳಿವೆ. ಚರಿತ್ರೆಯ ಕಾಲಾವಧಿಯಲ್ಲಿ ಮನುಷ್ಯನ ದುಃಖಕ್ಕೆ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕವಾಗಿ ಆದ ಸ್ಥಿತ್ಯಂತರಗಳು ಕಾರಣವಾಗುತ್ತ ಬಂದಿವೆ. ಆದರೂ ಕೆಳವರ್ಗದವರನ್ನು ಆಳುತ್ತ ಬಂದಿರುವುದು ಕಾಣುತ್ತದೆ. ಸಾಂಸ್ಕೃತಿಕವಾಗಿ ಅವರನ್ನು ಹಿನ್ನೆಲೆಗೆ ಸರಿಸಿ, ಅವರ ದುಡಿಮೆಯಿಂದಲೇ ಬದುಕುತ್ತ ಬಂದ ಮೇಲ್ವರ್ಗದವರು ಶೋಷಕರಾಗಿರುವುದು ಚರಿತ್ರೆಯುದ್ದಕ್ಕೂ ಕಾಣುತ್ತದೆ. ಕೆಳವರ್ಗದವರಿಗೆ ಸಮಾಜದಲ್ಲಿ ಯಾವ ಅಧಿಕಾರ, ಸ್ಥಾನಮಾನಗಳು

ಕನಿಷ್ಠವಾಗಿಯೂ ಸಿಗದಂತೆ ವ್ಯವಸ್ಥಿತವಾಗಿ ನೋಡಿಕೊಳ್ಳಲಾಗಿದೆ. ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಮುಂತಾದ ಮಾನವತಾವಾದಿಗಳು ಇತಿಹಾಸದ ಉದ್ದಕ್ಕೂ ನೊಂದು ಬೆಂದವರ, ಅಪಮಾನಗೊಂಡವರ, ಕೀಳರಿಮೆಯಿಂದ ಬಳಲುವವರ, ಅಸಹಾಯಕರನ್ನು ಪ್ರೀತಿಯಿಂದ ಅಪ್ಪಿಕೊಂಡವರು. ಸಾಮಾಜಿಕವಾಗಿ ಹಿಂಸೆಗೆ ಒಳಗಾದವರ ಕಣ್ಣೀರನ್ನು ಒರೆಸಿದವರು. ಜೀವವಿರುವ 'ಮನುಷ್ಯ' ಎಂಬ ಅರಿವನ್ನು ಮೂಡಿಸಿ, ಅವರಲ್ಲಿ ಸ್ವಾಭಿಮಾನ ಸೃಷ್ಟಿಸಿ ಅವರ ಕತ್ತಲ ಬದುಕಿಗೆ ಬೆಳಕನ್ನು ತುಂಬುಲು ಪ್ರಯತ್ನಿಸಿದವರು. ಇಂಥವರು, ಈ ಸ್ಥಿತಿಗೆ ಕಾರಣವಾದ ಜಾತಿ, ಧರ್ಮ, ಜನಾಂಗದವರನ್ನು ಪ್ರಶ್ನಿಸಿ ಸಾಮಾಜಿಕ ವ್ಯವಸ್ಥೆಯನ್ನು ಕದಡಿದರು. ಜಾತಿಯನ್ನು ಅಳಿಸಿ, ಧರ್ಮವನ್ನು ಮನುಷ್ಯನ ನೆಮ್ಮದಿಗೆ ಒಗ್ಗಿಸಿ, ತಾರತಮ್ಯದ ಬದುಕನ್ನು ನಿರಾಕರಿಸಿದರು. ಸಮಾಜದಲ್ಲಿ ಸಮಾನತೆಯನ್ನು ತರಲು ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್, ಲೋಹಿಯಾ, ಜೆ.ಪಿ., ಪೆರಿಯಾರ್ ಮುಂತಾದ ಧಾರ್ಮಿಕ, ರಾಜಕೀಯ ನಾಯಕರು ಸಮಾಜ ಪರಿವರ್ತನೆಗೆ ಶ್ರಮಿಸಿದ್ದಾರೆ. ಇಂಥ ಮಹಾನ್ ಚೇತನಗಳನ್ನು ಇಲ್ಲಿನ ಲೇಖಕರು ತಮ್ಮ ಸಾಹಿತ್ಯ ಚಳವಳಿಗೆ ಬುನಾದಿಯನ್ನಾಗಿ ಮಾಡಿಕೊಂಡಿದ್ದಾರೆ. ಮಾರ್ಕ್ಸ್, ಲೆನಿನ್, ನೆಲ್ಸನ್ ಮಂಡೇಲಾ ಮುಂತಾದವರ ಚಿಂತನೆಗಳನ್ನು ಚಳವಳಿಗೆ ಹಿನ್ನೆಲೆಯನ್ನಾಗಿ ಸ್ವೀಕರಿಸಿದರು. ಮನುಷ್ಯನ ಒಳಿತಿಗೆ ಶ್ರಮಿಸಿದ ಚೇತನಗಳನ್ನು ತಮ್ಮ ಬೆಂಬಲಕ್ಕೆ ಶಕ್ತಿಯನ್ನಾಗಿ ಮಾಡಿಕೊಂಡರು. ಇದರಿಂದಾಗಿಯೇ ಬಂಡಾಯ–ದಲಿತ ಬರಹಗಾರರು ಬಸವ, ಗಾಂಧಿ, ಅಂಬೇಡ್ಕರ್, ಜೆ.ಪಿ.ನೆಲ್ಸನ್ ಮಂಡೇಲಾ, ಮೊಲಾಯಿಸ್ ಮುಂತಾದವರನ್ನು ಕುರಿತು ಕವಿತೆಗಳನ್ನು ಬರೆಯಲು ಸಾಧ್ಯವಾಗಿದೆ.

ಗಾಂಧೀಜಿಯನ್ನು ಕುರಿತು ಕವಿತೆಯನ್ನು ಬರೆಯದ ಕವಿಯಿಲ್ಲ ಅನ್ನುವಷ್ಟರ ಮಟ್ಟಿಗೆ ಅವರ ಮೇಲೆ ಕವನಗಳಿವೆ. ಈ ಸಾಹಿತ್ಯ ಚಳವಳಿಯ ಸಂದರ್ಭದಲ್ಲಿ ಬಹುತೇಕ ಕವಿಗಳು ಗಾಂಧಿಯ ಮೇಲೆ ಬರೆದಿದ್ದಾರೆ. ಗಾಂಧಿಯನ್ನು ಕುರಿತು ಬರೆಯುವುದು ಎಂದರೆ ಇಂಡಿಯಾದ ರಾಜಕೀಯ, ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಬರೆದಂತೆ. ಗಾಂಧೀಜಿ ಗಳಿಸಿಕೊಟ್ಟ ಸ್ವಾತಂತ್ರ್ಯ ಈಗ ಯಾರ ಕೈಯಲ್ಲಿದೆ? ಸ್ವಾತಂತ್ರ್ಯಾ ನಂತರದಲ್ಲಿ ಭಾರತದ ಪರಿಸ್ಥಿತಿ ಏನಾಗಿದೆ? ಗಾಂಧೀಜಿಯವರ ತತ್ವಗಳ ಗತಿ ಏನಾಗಿದೆ? ಗಾಂಧೀಜಿ ಯಾರಿಗೆ ಮತ್ತು ಯಾಕೆ ಬೇಕು? ಎಲ್ಲಿಯವರೆಗೆ ಬೇಕು? ಬ್ರಿಟೀಶರ ಬಂಧನದಲ್ಲಿದ್ದ ಭಾರತವನ್ನು ಸ್ವತಂತ್ರಗೊಳಿಸಿ ಯಾರ ಕೈಗೆ ಕೊಟ್ಟರು? ಪ್ರಸ್ತುತ ಭಾರತದಲ್ಲಿ ಗಾಂಧೀಜಿಯವರ ಸ್ಥಾನಮಾನಗಳೇನು? ಮುಂತಾದ ಪ್ರಶ್ನೆಗಳು ಹೈದರಾಬಾದ್ ಕರ್ನಾಟಕದ ಬರಹಗಾರರನ್ನು ಕಾಡಿವೆ. ಬೆರಗು, ವ್ಯಂಗ್ಯ ಕಂಡರೂ ಅಂತಿಮವಾಗಿ ವಿಷಾದ ಎಲ್ಲ ಕವಿತೆಗಳಲ್ಲಿ ಮಡುಗಟ್ಟಿ ನಿಂತಿದೆ.

ಒಂದರ್ಥದಲ್ಲಿ ಗಾಂಧೀಜಿಯವರು ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟರು ಎಂಬುದು ನಿಜ. ಅದಷ್ಟೇ ಅವರ ಕನಸಾಗಿರಲಿಲ್ಲ. ಅವರು ಸ್ವರಾಜ್ಯದ ಕನಸು ಕಂಡಿದ್ದರು. ಅಸ್ಪೃಶ್ಯರ ಉದ್ಧಾರದ ಕನಸು ಕಂಡಿದ್ದರು. ಅವರು ಸಮಾಜದಲ್ಲಿ ತತ್ವರಹಿತ ರಾಜಕೀಯ, ದುಡಿಮೆಯಿಲ್ಲದ ಸಂಪತ್ತು, ಜಾತಿ ಆಚರಣೆ ಮಾಡುವ ಸಮಾಜ, ತ್ಯಾಗ ಇಲ್ಲದ ಪೂಜೆ ಇರಬಾರದೆಂದು

ಹೇಳಿದ್ದರು. ಅವರ ಕನಸುಗಳಿಗೆ ಜೀವ ಬರಲಿಲ್ಲ. ಬದಲಾಗಿ ಯಾವುದನ್ನು 'ಸಾಮಾಜಿಕ ಪಾತಕಗಳು' ಎಂದು ಅವರು ತಿರಸ್ಕರಿಸಿದ್ದರೋ ಅವೆಲ್ಲವು ಇಂದಿಗೂ ರಾರಾಜಿಸುತ್ತಿವೆ. ಅವಿಲ್ಲದೆ ಸಾಮಾಜಿಕ, ರಾಜಕೀಯ ಬದುಕೇ ಇಲ್ಲ ಎಂಬುವಷ್ಟು ತುಂಬಿಕೊಂಡಿವೆ. ವ್ಯಂಗ್ಯವೆಂದರೆ ಈ ಹೀನ ಕಾರ್ಯಗಳು ಗಾಂಧೀಜಿ ಫೋಟೋದ ಸಾಕ್ಷಿ ಎಂಬಂತೆ ಹಗಲು ಬೆಳಕಿನಲ್ಲಿ ನಡೆಯುತ್ತವೆ. ಜಾತಿ ವ್ಯವಸ್ಥೆಯನ್ನು ಆಚರಿಸುತ್ತಿರುವ ಇಂದಿನ ಸಂದರ್ಭದಲ್ಲಿ ಮನುಷ್ಯ ಅವುಗಳನ್ನು ಮೀರಿ ನಿಲ್ಲಬೇಕೆನ್ನುವ ಆಶಯದ ಕವನವು ಇಲ್ಲಿ ಮುಖ್ಯವೆನಿಸುತ್ತದೆ.

'ದೇಹವೆರಡು ಜೀವ ಒಂದಾಗಿ
ಬದುಕಿದವರ ಹಲವು ಹತ್ತು ಕಥೆ
ರಾಮ–ರಹೀಮರ ಅವಳಿ ಜೀವಕ್ಕೆ
ಒಂದೇ ದೇಹವಾಗಿದ್ದರು ಗಾಂಧೀಜಿ.
ಒಡಲೊಳಗಿರುವ – ರಾಮ
ಖುರಾನ ಪಟಿಸುತ್ತಿದ್ದ,
ರಹೀಮ– ಕೈಮುಗಿದು
'ಗೀತೆ'ಯೋದುತ್ತಿದ್ದ,'[೩೮] (ಶಿವಶರಣಪಾಟೀಲ ಜಾವಳಿ : ರಾಮ–ರಹೀಮರ ಕಥೆ)

ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರನ್ನು ಕುರಿತಾದ ಈ ಕವನದಲ್ಲಿ ಅವರ ವ್ಯಕ್ತಿತ್ವದ ದರ್ಶನವಿದೆ. ಜಾತಿ, ಮತ ಬೇಧವೆಣಿಸುವ ಇಂದಿನ ಜನರಿಗೆ ಕವಿ ಇಲ್ಲಿ ಸೌಹಾರ್ದತೆಯಿಂದ ಬಾಳಲು ಕರೆ ನೀಡಿದಂತಿದೆ. ವಿವಿಧ ಜಾತಿ, ಮತ ಪಂಥಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡು ಪರಕೀಯರನ್ನು ಭಾರತ ಬಿಟ್ಟು ತೊಲಗುವಂತೆ ಮಾಡಿದ ಮಹಾತ್ಮರ ಆದರ್ಶಗಳನ್ನು ಇಂದು ನಾಯಕರೆನಿಸಿಕೊಂಡವರು, ಎನಿಸಿಕೊಳ್ಳುವವರು ಪಾಲಿಸಿದರೆ ಯಾವುದೇ ಚಳವಳಿ, ಹೋರಾಟಗಳನ್ನು ಸಫಲವಾಗುತ್ತವೆ ಎಂದು ಇಲ್ಲಿ ತಿಳಿಯಬಹುದು.

'ಈಗೆದ್ದ ಈ–ಗಾಲಿಧೂಳಿಯಲಿ
ನಿನ್ನ ಮುಖ–ಕಾಣದಾಗಿದೆ
ಗಾಂಧಿ
ನಮಗಾವ ಹಾದಿ'[೩೯] (ಗಾಂಧಿ: ಚೆನ್ನಣ್ಣ ವಾಲೀಕಾರ) ಭಾರತ ಸ್ವಾತಂತ್ರ್ಯಾ ನಂತರ ಆದ ಅನೇಕ ಬದಲಾವಣೆಗಳು ಇಲ್ಲಿನ ಜನರನ್ನು ತಲ್ಲಣಿಸಿವೆ. ರಾಜಕೀಯ ಅಗೋಚರತೆ, ದಕ್ಷ ನಾಯಕತ್ವದ ಕೊರತೆಯನ್ನು ಕಂಡು ಕವಿ ಈ ರೀತಿ ಹೇಳಿದ್ದಾರೆ. ಗಾಂಧೀಜಿ ಮತ್ತು ಅವರ ತತ್ವಗಳು ಎಲ್ಲರಿಗೂ ಬೇಕು. ಪ್ರತಿಯೊಬ್ಬ ರಾಜಕೀಯ ವ್ಯಕ್ತಿಗಳು ಅಧಿಕಾರ ಸಿಗುವವರೆಗೆ ಮಾತ್ರ ಗಾಂಧಿ ಭಕ್ತನಾಗಿರುತ್ತಾರೆ. ಅವರ ತತ್ವಗಳ ಅನುಯಾಯಿ ಆಗಿರುತ್ತಾರೆ. ಗಾಂಧೀಜಿ ಅವತಾರದಂತೆ ವರ್ತಿಸುತ್ತಾರೆ. ಅಧಕಾರ ಸಿಕ್ಕ ನಂತರ ತಮ್ಮ ಕರಾಳ ರೂಪವನ್ನು ತೋರಿಸಿಬಿಡುತ್ತಾರೆ. ಇಂದು ಭಾರತದ ರಾಜಕಾರಣಿಗಳಲ್ಲಿ ನಿರ್ದಿಷ್ಟ ತತ್ವಕ್ಕಾಗಿ ಅಧಿಕಾರ ಹಿಡಿಯುವುದೇ ಮಾಯವಾಗಿದೆ.

ಕೇವಲ ಅಧಿಕಾರವನ್ನು ಅನುಭವಿಸುವುದಕ್ಕಾಗಿ ಬಗೆಬಗೆಯ ವೇಷಗಳನ್ನು ತೊಟ್ಟು ಜನರ ಮುಂದೆ ಬರುತ್ತಾರೆ. ಇಲ್ಲಿನ ಲೇಖಕರು ಗಾಂಧಿಯನ್ನು ಸಮಗ್ರ ನೈತಿಕತೆಯ ಪರಿಪೂರ್ಣ ರಾಜಕಾರಣದ ಪ್ರತಿಮೆಯಾಗಿ ಸ್ವೀಕರಿಸಿರುವುದು ಮುಖ್ಯವಾಗಿ ಕಂಡು ಬರುತ್ತದೆ. ಮಹಾತ್ಮಾ ಗಾಂಧೀಜಿಯವರು ಸುಖಿ ರಾಜ್ಯದ ಕನಸು ಕಂಡು ಅದಕ್ಕಾಗಿ ಶ್ರಮಿಸಿ ಜೀವವನ್ನೇ ಬಲಿಕೊಟ್ಟರು. ಆದರೆ ಈಗ ಗಾಂಧೀಜಿಯವರ ಕನಸು ಒಡೆದು ಚೂರಾಗಿ ಹೋಗಿದೆ. ನೆಮ್ಮದಿ, ಸುಖ, ಸ್ವಾತಂತ್ರ್ಯ ಎಂಬುದು ಭಾರತದಲ್ಲಿ ಉಳಿದಿಲ್ಲ.

ಈ ವಿಚಾರಗಳು ಗಾಂಧಿಯ ಬಗ್ಗೆ ಮಾತ್ರವಲ್ಲ. ಬಸವಣ್ಣ, ಅಂಬೇಡ್ಕರ್ ಬಗ್ಗೆಯೂ ಇದೆ. ದಲಿತರ ಸ್ವಾಭಿಮಾನದ ಸಂಕೇತವಾಗಿ ಹುಟ್ಟಿ ಬಂದಿದ್ದ ಅಂಬೇಡ್ಕರರು ದಲಿತ ವರ್ಗದಲ್ಲಿ ಹುಟ್ಟಿದ್ದರಿಂದ ಅವಮಾನ, ನೋವು ಸ್ವತಃ ಅನುಭವಿಸಿದವರಾದ್ದಾರೆ. ದಲಿತರ ನಾಡಿಮಿಡಿತ ಬಲ್ಲವರಾಗಿದ್ದ ಅವರು ಶೋಷಿತರಲ್ಲಿ ಸ್ವಾಭಿಮಾನವನ್ನು ಬಿತ್ತಿದರು. ಜೀವನದುದ್ದಕ್ಕೂ ದಲಿತರ ಏಳಿಗೆಗಾಗಿ ದುಡಿದರು. ಭಾರತೀಯರ ದುರಂತವೆಂದರೆ ಯಾವುದೇ ಮಹಾವ್ಯಕ್ತಿಯ ತತ್ವ ಚಿಂತನೆಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡು ಬದುಕುವ ಬದಲು ಅವರನ್ನು ದೇವರನ್ನಾಗಿ ಪೂಜಿಸಲು ತೊಡಗುವುದು. ಇದಕ್ಕೆ ನಿದರ್ಶನಗಳು ಚರಿತ್ರೆಯುದ್ದಕ್ಕೂ ಸಿಗುತ್ತವೆ. ಮಹಾವ್ಯಕಿಗಳ ಚಿಂತನೆಗಳಿಗೆ ಗೌರವ ಸಿಗುವ ಬದಲು ಬರೀ ವ್ಯಕ್ತಿಗೆ ಗೌರವ ಸಿಗುವುದರಿಂದ ಯಾರಿಗೂ ಪ್ರಯೋಜನವಿಲ್ಲ. ದೇವರ ಅಸ್ತಿತ್ವವನ್ನೇ ತಿರಸ್ಕರಿಸಿದ ವ್ಯಕ್ತಿಗಳನ್ನೇ ದೇವರನ್ನಾಗಿ ಮಾಡುವ ಗುಣ ಈ ದೇಶದಲ್ಲಿ ಬೆಳೆದು ಬಂದಿದೆ. ಬುದ್ಧನನ್ನು ದೇವರನ್ನಾಗಿ ಪರಿವರ್ತಿಸಿದ್ದರ ಹಿಂದೆ ವೈದಿಕ ಧರ್ಮದ ಕುತಂತ್ರವಿದೆ ಎಂಬುದು ಎಲ್ಲರಿಗೆ ತಿಳಿದ ವಿಷಯವೇ. ಅದರಂತೆಯೇ ಮಹಾವ್ಯಕ್ತಿಗಳನ್ನು ದೇವರ ಸ್ಥಾನಕ್ಕೆ ಏರಿಸಿರುವುದರ ಹಿಂದೆ ಅನೇಕ ಕಾಣದ ಕೈಗಳು ಇರುತ್ತವೆ.

ದಲಿತ–ಬಂಡಾಯ ಸಾಹಿತ್ಯ ಚಳವಳಿಗೆ ನೆಲ್ಸನ್ ಮಂಡೇಲಾ, ಬೆಂಜಾಮಿನ್ ಮೊಲಾಯಿಸ್ ಮುಖ್ಯ ವಸ್ತುವಾಗಿ ಕಾಣುತ್ತಾರೆ. ಇವರ ಹೋರಾಟ ಎಂತವರಿಗೂ ಸ್ಫೂರ್ತಿಯನ್ನು ನೀಡುತ್ತದೆ. ಗಾಂಧಿಯಂತೆ ಮಂಡೇಲಾ ತನ್ನ ಕಪ್ಪು ಬಂಧುಗಳ ಬಿಡುಗಡೆಗಾಗಿ ಹೋರಾಡಿದವರು. ೨೭ವರ್ಷಗಳ ಕಾಲ ಬಿಳಿಯರ ಸೆರೆಮನೆಯಲ್ಲಿದ್ದರೂ ಹೋರಾಟದ ಕಾವಿಗೆ ಮುಪ್ಪು ತಂದುಕೊಳ್ಳದೆ ತನ್ನ ಜನರನ್ನು ಬಿಡುಗಡೆ ಮಾಡಿದ ಮಂಡೇಲಾ ಮಹಾವ್ಯಕ್ತಿಯಾಗಿ ಕಂಡಿದ್ದಾನೆ. ದಕ್ಷಿಣ ಆಫ್ರಿಕಾದಲ್ಲಿ ಬಿಳಿಯರ ಕ್ರೌರ್ಯಕ್ಕೆ ಕಪ್ಪು ಜನ ನಡೆಸಿದ ಹೋರಾಟ, ಅಲ್ಲಿ ನಡೆದ ದಾರುಣ ಹತ್ಯೆಗಳು, ಅಮಾನವೀಯ ವರ್ತನೆಗಳೆಲ್ಲವೂ ಇಲ್ಲಿಯ ನೆಲದಲ್ಲಿ ನಡೆದಂತೆ, ಆ ಸಾವು–ನೋವು ನಮ್ಮದೆಂಬಂತೆ ಕಾವ್ಯ ಅನುಭವಿಸಿ ಮಿಡಿದಿದೆ. ಮೊಲಾಯಿಸನ ಸಾವು, ರೂಪಾಕನ್ವರಳ ಬಲಿ ನಮ್ಮ ಸಹೋದರ–ಸಹೋದರಿಯರದಾಗಿ ಪರಿಣಮಿಸಿದೆ. ಭೂಪಾಲದ ಅನಿಲ ದುರಂತ, ಕಿಲಾರಿ ದುರಂತ, ಪಂಜಾಬ್, ಕಾಶ್ಮೀರಗಳಲ್ಲಿ ನಡೆಯುವ ಹತ್ಯೆ, ಚಂಡಮಾರುತಗಳಿಗೆ ಬಲಿಯಾಗುವ ಜನ, ಮೆರವಣಿಗೆ ಮುಂತಾದ ಪ್ರಕರಣಗಳಲ್ಲಿ ಅಮಾಯಕರ ಸಾವಿಗೆ ಈ ಕಾವ್ಯ ಸ್ಪಂದಿಸಿದೆ. ಸಾಧ್ಯವಾದ ಕಡೆ ನ್ಯಾಯಕ್ಕಾಗಿ ಹೋರಾಡಿದೆ. ಇದೆಲ್ಲದರ ಮಧ್ಯೆ ಮಾನವನು ವಿಶ್ವಮಾನವ

ಕಲ್ಪನೆಯಿಂದ ಜೀವಿಸಬೇಕು ಎಂದು ಇಲ್ಲಿನ ಕವಿಗಳು ಆಶಿಸಿದಂತೆ ಕೆಲವು ಕವನಗಳನ್ನು ಬರೆದಿದ್ದಾರೆ. ಈ ಭಾಗದ ಕವಿಯೋರ್ವರು ವಿಶ್ವಮಾನವತೆಯನ್ನು ಸಾರಿದ ವಿಶ್ವಕವಿ ರವೀಂದ್ರನಾಥ ಟ್ಯಾಗೋರರ ಕುರಿತ ಕವನವೊಂದನ್ನು ರಚಿಸಿದ್ದಾರೆ. ಅದು ಇಂತಿದೆ :

ಕವಿತಾ ವಿಲಾಸದೋಳ್ ಕಂಡಂತೆ ಕುಣಿದಾಡಿ
ತಣಿದು ಮರೆಯಾದಯೇಜ ವಿಶ್ವಕವಿಯೆ

ರವಿಗೆ ಕಾಣದ ಮಾತು
ಕವಿಯ ಕಣ್ಣಿಗೆ ಬಿತ್ತು
ರವಿ ಕವಿಗೆ ಸಿಕ್ಕಿತ್ತು
ನಿನ್ನರಿವು ಸೊತ್ತು

ನೀನು ರವಿಯಾಗಿಲ್ಲ ಕವಿಯು ಮತ್ತಾಗಿಲ್ಲ
ರವಿ ಕವಿಗಳೆಲ್ಲರಿಗೆ ದಾರಿ ತೋರಿಸಿ ನಡೆದ
ಮಾರ್ಗಮಲ್ಲ

ರವಿಯ ಕಳೆವನು
ಜಗದ ಹೊರ ಅಂಧಕಾರ
ನಿನ್ನರಿವು ಕಳೆಯಿತ್ತು
ಆಂತರ್ಯ ತಿಮಿರ
ಓ ವಿಶ್ವಕವಿ ರವೀಂದ್ರನಾಥ ಮೂರ್ತಿ
ನಿನಗೀಗ ಬಂದಿಹುದು ಸಾವಲ್ಲ ಶಾಂತಿ–ವಿಶ್ರಾಂತಿ'[೨೦] ವಿ.ಎಂ ಗುಂಡಾರಾಧ್ಯ ಅವರು ವಿಶ್ವಕವಿ ರವೀಂದ್ರನಾಥ ಟ್ಯಾಗೋರ್ ಕುರಿತು ಬರೆದ ಕವನವಿದು. ರವಿ ಕಾಣದ್ದನ್ನು ಕವಿ ಕಂಡ ಎಂಬ ಮಾತಿನಂತೆ ವಿಶ್ವಕವಿ ರವೀಂದ್ರನಾಥ ಟ್ಯಾಗೋರ್ ಅವರ ವ್ಯಕ್ತಿತ್ವವನ್ನು ಕವಿ ಹೊಗಳಿರುವುದು ಈ ಕವಿತೆಯಲ್ಲಿದೆ. ಭಾರತೀಯ ಸಾಹಿತ್ಯಕ್ಕೆ ಮೌಲ್ಯಗಳ ದರ್ಶನ ನೀಡಿದ ಕವಿ ರವೀಂದ್ರರು ಎಂದಿಗೂ ಆದರ್ಶಪ್ರಾಯರಾಗಿ ಕಾಣುತ್ತಾರೆ.

೨೦ನೆಯ ಶತಮಾನ ದಾಟುವ ಹಂತದಲ್ಲಿದ್ದಾಗ ಯಾವುದು ನಡೆಯಬಾರದೋ ಅದು ನಡೆದು ದೇಶವನ್ನು ಭಯದಲ್ಲಿ ಮುಳುಗಿಸಿತು. ಕಾವ್ಯ ರಚನೆಯಂಥ 'ಅಭಿವ್ಯಕ್ತಿ ಸ್ವಾತಂತ್ರ್ಯ'ವನ್ನು ಕಸಿದು ದಕ್ಷಿಣ ಆಫ್ರಿಕಾದ ಕವಿ ಮೊಲಾಯಿಸನನ್ನು ಗಲ್ಲಿಗೇರಿಸಿದಾಗ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುವ ಕವಿಗಳು ನಿಟ್ಟುಸಿರುಬಿಟ್ಟರು. ಸತ್ತು ಹೋದ ರೂಪಕನ್ವರಳ ಸ್ಥಿತಿಯನ್ನು ಕಂಡು ಸ್ತ್ರೀಯರು ತಲ್ಲಣಗೊಂಡರು. ಈ ಸಾವುಗಳು ಆಧುನಿಕ ಜಗತ್ತುಗಳಿಗೆ ಎಸೆದ ಸವಾಲುಗಳಾಗಿ ಪರಿಣಮಿಸಿದವು. ಈ ಎರಡು ಸಾವಿಗೆ ಕಾರಣವಾದ ಕ್ರೂರ ವ್ಯವಸ್ಥೆಗೆ ಇನ್ನು ಮುಪ್ಪುಬಂದಿಲ್ಲ ಎಂಬುದು ಆತಂಕದ ಸಂಗತಿಯಾಗಿದೆ. ಮನುಷ್ಯನ ಕ್ರೌರ್ಯದ ನಿರಂತತೆಯನ್ನು ಸೂಚಿಸುತ್ತದೆ.

ವಿಶ್ವದ ಅನೇಕ ರಾಷ್ಟ್ರೀಯ ನಾಯಕರು ತಮ್ಮವರಿಂದಲೇ ಕೊಲೆಗೀಡಾದ ಘಟನೆಗಳು ಚರಿತ್ರೆಯಲ್ಲಿ ಅನೇಕವಿವೆ.

ಗಾಂಧೀಜಿ ಹತರಾಗಿ ಹೋದ ಮೇಲೆ
ಲೋಕದಲಿ ಮಹಾತ್ಮರ ಕಥೆಗೆ
ತೆರೆ ಬಿದ್ದಿತೆಂದು ಭಾವಿಸಿರಲು
ದಕ್ಷಿಣಾಫ್ರಿಕೆಯ ಕರಿನೆಲದಲ್ಲಿ
ಮೊಳೆತು ಚಿಗುರೊಡೆದೊಡೆದು
ಶ್ವೇತ ಶೃಂಖಲೆಯ ಸೆರೆಮನೆಯ ಅಂಗಳದಲ್ಲೆ
ನೀನು ಬಿಡುಗಡೆಯ ಜ್ಞಾನಕ್ಕೆ
ಬೋಧವೃಕ್ಷವಾಗಿ ಬೆಳೆದು ನಿಂತಿದ್ದಕ್ಕೆ
ನಾನು ಬೆರಗುಪಟ್ಟಿದ್ದೇನೆ ಮಂಡೇಲಾ

ಕಪ್ಪು ಜನಗಳ ದಾಸ್ಯದ ದುಃಖಕ್ಕೆ ಬಿಕ್ಕುತ್ತಲೇ
ಗೋದಿನಾಗರದ ಹಲ್ಲು ಕೀಳಲು
ಕೈ ಹಾಕಿರುವ ನಿನ್ನ ಸಾಹಸಕೆ
ಇದೋ ನನ್ನ ಶ್ಲಾಘನೆ[೪೧] (ಶಿವಶರಣ ಪಾಟೀಲ್ ಜಾವಳಿ : ಮಂಡೇಲಾರೊಡನೆ) ದಕ್ಷಿಣ ಆಫ್ರಿಕಾದ ಮಹಾತ್ಮಾ ಮಂಡೇಲಾರನ್ನು ಕುರಿತಿರುನ ಈ ಕಾವ್ಯವು ಅವರ ವ್ಯಕ್ತಿತ್ವವನ್ನು ಅನಾವರಣಗೊಳಿಸುತ್ತದೆ. ವರ್ಣಭೇದ ನೀತಿಯಿಂದ ತತ್ತರಿಸಿದ್ದ ಆಫ್ರಿಕಾದ ಜನತೆಗೆ ಜೀವಿಸುವ ಶಕ್ತಿ ತುಂಬಿದ್ದು ಮಂಡೇಲಾರೆ. ಬಿಳಿಯರ ಕ್ರೌರ್ಯಗಳನ್ನು ಧೈರ್ಯದಿಂದ ಎದುರಿಸಿ ತಮ್ಮ ಕಪ್ಪು ಬಂಧುಗಳನ್ನು ದಾಸ್ಯದಿಂದ ವಿಮೋಚಿಸಿದ್ದು ಈ ಮಾಹಾತ್ಮನೆ. ಜಗತ್ತಿನ ಯಾವುದೋ ಒಂದು ಮೂಲೆಯಲ್ಲಿ ಮಾಡಿದ ಒಂದು ಒಳ್ಳೆಯ ಕಾರ್ಯವು ಅದು ಮಾದರಿಯಾಗಲು ಹೆಚ್ಚಿನ ದಿನಗಳು ಬೇಕಿಲ್ಲ. ಅಂತೆಯೆ ಅವರ ಮಾದರಿಯ ತತ್ವವಿಚಾರಗಳು ಇಲ್ಲಿನ ಕವಿಗಳಿಗೆ ಹಿಡಿಸಿವೆ. ಅದರಿಂದಾಗಿಯೇ ಮಂಡೇಲಾ ಕಾವ್ಯದಲ್ಲಿ ಮತ್ತೆ ಮತ್ತೆ ಬರುವಂತಾಗಿದ್ದಾರೆ.

೨೦ನೇ ಶತಮಾನದಲ್ಲಿ ಪ್ರಾರಂಭವಾದ ನವೋದಯ ಕಾವ್ಯ ಗೇಯತೆಯಿಂದ ಕೂಡಿತ್ತು. ಅದು ಹಾಡಲು ಬರುತ್ತಿತ್ತು. ಭಾವ ಪ್ರಧಾನ ಕಾವ್ಯವಾದ್ದರಿಂದ ಈ ಕಾವ್ಯ ಸುಗಮ ಸಂಗೀತಕ್ಕೆ ಸುಲಭವಾಗಿ ಅಳವಡುತ್ತಿತ್ತು. ಈ ಕಾಲದ ಅನೇಕ ಕವಿತೆಗಳು ಸಂಗೀತದಿಂದಾಗಿ ಉಳಿದುಕೊಂಡಿವೆ. ನಂತರದ ನವ್ಯಕಾವ್ಯವು ಇದನ್ನು ಕಳೆದುಕೊಂಡಿತು. ಗೇಯತೆ, ಸಂಗೀತದ ಸಂಬಂಧಗಳನ್ನು ಕಡಿದುಕೊಂಡು ಆಂತರಿಕ ಲಯದೊಂದಿಗೆ ಸಂಬಂಧವಿರಿಸಿಕೊಂಡು ಬೆಳೆಯಿತು. ಕಾವ್ಯ ಜನಸಾಮಾನ್ಯರಿಂದ ದೂರ ಸರಿದದ್ದು ಈ ಕಾವ್ಯದಿಂದ. ಬಂಡಾಯ ದಲಿತ ಕಾವ್ಯವು ಆಶಯದಲ್ಲಿ 'ಜನಪರ'ವಾಗಿದ್ದು ಜನಸಾಮಾನ್ಯರಿಗೆ ತಲುಪುವ ಗುರಿಯನ್ನು ಹೊಂದಿದೆ. ಆದರೆ ಅಕ್ಷರಸ್ಥರೇ ಕಡಿಮೆಯಿರುವ ಸಮಾಜದಲ್ಲಿ ಕವಿತೆಯನ್ನು ಓದುವ ವರ್ಗ ಕಡಿಮೆ. ಕವಿತೆಯ

ರಚನೆ ಮತ್ತು ಅದರ ಓದು ಎರಡು ಕ್ರಿಯೆಗಳು ಬೌದ್ಧಿಕ ಚಟುವಟಿಕೆಗಳಾಗಿ ಪರಿಣಮಿಸಿವೆ. ಜನಸಾಮಾನ್ಯರ, ಕೆಳವರ್ಗದವರ, ಅಕ್ಷರವಂಚಿತರ ಬವಣೆಗಳನ್ನು, ಆಶೆ-ಆಕಾಂಕ್ಷೆಗಳನ್ನು ಕುರಿತು ಈ ಕಾವ್ಯ ಇರುವುದರಿಂದ ಇವರೆಲ್ಲರಿಗೆ ತಲುಪಿಸುವ ಜವಾಬ್ದಾರಿಯನ್ನು ಇಟ್ಟುಕೊಂಡಿದೆ. ಇದರಿಂದಾಗಿ ಜನಪದ ಕಾವ್ಯ ರೂಪಗಳನ್ನು ಈ ಭಾಗದ ಕವಿಗಳು ಬಳಸಿಕೊಂಡಿದ್ದಾರೆ. ದುಡಿಯುವ ಜನರಿಗೆ ಜನಪದ ಕಾವ್ಯ ರೂಪಗಳನ್ನು ದುಡಿಮೆಯ ಜೊತೆ ಜೊತೆಗೆ ಕೇಳುತ್ತ, ಹಾಡುತ್ತಾ ಬದುಕುತ್ತಿರುತ್ತಾರೆ. ಹೀಗಾಗಿ ಜನಪದ ಮಟ್ಟುಗಳು ಅವರಿಗೆ ರುಚಿಸುತ್ತವೆ. ಅನೇಕ ಕವಿಗಳು ತಮ್ಮ ಆಶಯಗಳನ್ನು ದುಡಿವ ಜನಗಳಿಗೆ ಪರಿಚಿತವಿರುವ ಜನಪದ ಕಾವ್ಯ ರೂಪಗಳಲ್ಲಿ ಅಳವಡಿಸಿ ಹಾಡಲು ಬರುವಂತೆ ರಚಿಸಲು ಪ್ರಯತ್ನಿಸಿದ್ದಾರೆ.

ಒಟ್ಟಾರೆಯಾಗಿ ಸ್ವಾತಂತ್ರ್ಯಪೂರ್ವ ಹೈದರಾಬಾದ್ ಕರ್ನಾಟಕದ ಆರಂಭದ ಕಾವ್ಯವು ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ವಿಷಯಗಳನ್ನು ಒಳಗೊಂಡು ರಚಿತವಾಗಿದೆ. ಪ್ರಾಚೀನ ಕಾಲದಿಂದಲೂ ಕನ್ನಡ ಸಾಹಿತ್ಯವನ್ನು ಬೆಳೆಸಿದ ಈ ಪ್ರಾಂತ್ಯವು ಅನೇಕ ಪ್ರಭುತ್ವಗಳಿಂದ ತನ್ನ ಮೂಲ ಭಾಷೆಯನ್ನೆ ಕಳೆದುಕೊಳ್ಳುವಂತ ಸಂದರ್ಭವನ್ನು ಎದುರಿಸಿದೆ. ಅದಕ್ಕಾಗಿ ಹೋರಾಡಿದೆ. ೨೦ನೇ ಶತಮಾನದಲ್ಲಿ ವಸಾಹುತುಶಾಹಿಯ ಪ್ರಭಾವದಿಂದ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸಾಹಿತ್ಯವು ಬೆಳೆಯಿತು. ಆದರೆ ಹೈದರಾಬಾದ್ ಕರ್ನಾಟಕವು ಸಾಹಿತ್ಯ ಕ್ಷೇತ್ರವನ್ನು ಕೂಸಿನಂತೆ ಪಿಳಿಪಿಳಿ ಕಣ್ಣು ಬಿಟ್ಟು ನೋಡುತ್ತಿತ್ತು. ಅದಕ್ಕೆ ಸರಿಯಾದ ಶಿಕ್ಷಣ, ಮಾರ್ಗದರ್ಶನ, ಬೆಂಬಲಗಳ ಕೊರತೆ ಇತ್ತು. ಅದಕ್ಕಾಗಿ ಕನ್ನಡವನ್ನು ಕಟ್ಟುತ್ತಿದ್ದ ಬಿ.ಎಂ,ಶ್ರೀ ಅವರಂಥ ಮಹನಿಯರ ಮಾರ್ಗದರ್ಶನವನ್ನು ಕೇಳುತ್ತ ಇಲ್ಲಿನ ನವೋದಯ ಕಾವ್ಯ ಹುಟ್ಟಿತು. ಸಮಾಜದಲ್ಲಿ ಕಾಣಿಸುವ ಅಸಮಾನತೆ, ಅನ್ಯಾಯ, ವೈರುಧ್ಯಗಳಿಗೆ ನೊಂದು ಇಲ್ಲನ ಲೇಖಕರು ಸಾಹಿತ್ಯ ರಚಿಸತೊಡಗಿದರು. ಮುಖ್ಯವಾಗಿ ಕಾವ್ಯ ಪ್ರಕಾರವನ್ನು ಆಯ್ದುಕೊಂಡು ಅನೇಕ ಕವನಗಳನ್ನು ಬರೆದಿದ್ದಾರೆ. ರೈತರ ಬಗೆಗೆ, ವಿದ್ಯಮಾನಗಳ ಬಗೆಗೆ, ಜನರ ಸಣ್ಣತನಗಳ ಕುರಿತು ಮನಸ್ಸಿಗೆ ನಾಟುವಂತೆ ಕವಿತೆಗಳನ್ನು ರಚನೆಯಾಗಿವೆ. ಒಟ್ಟಾರೆಯಾಗಿ ಈ ಭಾಗದ ಕವಿಗಳು ಬಿಡಿಬಿಡಿಯಾದ ಅನುಭವದ ಚಿತ್ರಗಳನ್ನು ಕಾವ್ಯವಾಗಿಸಿ ಹೈದರಾಬಾದ್ ಕರ್ನಾಟಕದ ನೈಜ ಚಿತ್ರಣವನ್ನು ಕಾವ್ಯದಲ್ಲಿ ಹಿಡಿದಿಡಲು ಪ್ರಯತ್ನಿಸಿರುವುದು ಪ್ರಮುಖವಾಗಿ ಕಾಣುತ್ತದೆ.

**ಕೊನೆ ಟಿಪ್ಪಣಿಗಳು**


೧. ಮುತ್ತುಗಾರ ಸ್ವಾಮಿ, ಮುತ್ತುಗಾರ, ಪ್ರಸ್ತಾವನೆ, ಪು-೪.

೨. ಮುತ್ತುಗಾರ ಸ್ವಾಮಿ, ಮುತ್ತುಗಾರ, ಪ್ರಸ್ತಾವನೆ, ಪು-೩.

೩. ಹೈದರಾಬಾದದ ಕನ್ನಡಿಗರು, (ಸಂ) ಮೊಗ್ಗಿನ ಮಾಲೆ, ಪು-೧,

೪. ಹೈದರಾಬಾದದ ಕನ್ನಡಿಗರು, ಬಿ.ಎಂ.ಶ್ರೀ, ಮೊಗ್ಗಿನ ಮಾಲೆ, ಮುನ್ನುಡಿ ಭಾಗದಿಂದ,

೫. ಶಾಂತರಸ (ಸಂ), ಮುಸುಕು ತೆರೆ, ಪು-೧೯.

೬. ಅದೇ, ಪು-೨೯-೩೧.

೭. ಅದೇ, ಪು–೪೩–೪೪.

೮. ಅದೇ, ಪು–೪೪.

೯. ಅದೇ, ಪು–೫.

೧೦. ಅದೇ, ಪು–೭.

೧೧. ಅದೇ, ಪು–೪೧.

೧೨. ಅದೇ, ಪು–೧.

೧೩. ಅದೇ, ಪು–೨೨.

೧೪. ಅದೇ, ಪು–೨೪.

೧೫. ಅದೇ, ಪು–೩೦.

೧೬. ಸಿದ್ಧಯ್ಯ ಪುರಾಣಿಕ, ರಾಘವೇಂದ್ರಾಚಾರ್ ಇಟಗಿ (ಸಂ), ಶ್ರೀಕಾರ, ಪು–೩೮.

೧೭. ಹೈದರಾಬಾದದ ಕನ್ನಡಿಗರು, (ಸಂ) ಮೊಗ್ಗಿನ ಮಾಲೆ, ಪು–೭.

೧೮. ಸಿದ್ಧಯ್ಯ ಪುರಾಣಿಕ, ರಾಘವೇಂದ್ರಾಚಾರ್ ಇಟಗಿ (ಸಂ), ಶ್ರೀಕಾರ, ಮುನ್ನುಡಿಯಿಂದ.

೧೯. ಹನುಮಂತಾಚಾರ್ಯ ಉಪಾಧ್ಯಾಯ, ಶುಭೋದಯ, ಪು–೧೨.

೨೦. ಅದೇ, ಪು–೨೦.

೨೧. ಸಿದ್ಧಯ್ಯ ಪುರಾಣಿಕ, ರಾಘವೇಂದ್ರಾಚಾರ್ ಇಟಗಿ (ಸಂ), ಶ್ರೀಕಾರ, ಪು–೨೮.

೨೨. ಶಾಂತರಸ, ಬಯಲಸೀಮೆಯ ಬಿಸಿಲು, ಪು–೪೨.

೨೩. ಅದೇ, ಪು–೪೨.

೨೪. ಶಾಂತರಸ, ಬೆನ್ನ ಹಿಂದಿನ ಬೆಳಕು, ಪು–೨೦.

೨೫. ಅದೇ, ಪು–೧೩೦.

೨೬. ಅದೇ, ಪು–೧೫೯.

೨೭. ಅದೇ, ಪು–೧೯೩.

೨೮. ಅದೇ, ಪು–೪೧.

೨೯. ಶಾಂತರಸ, ಬಯಲ ಸೀಮೆಯ ಬಿಸಿಲು, ಪು–೭.

೩೦. ಕಾವ್ಯಾನಂದ, ಕಾವ್ಯನಂದರ ಆಯ್ದ ಕವನಗಳು, ಪು–೩೪.

೩೧. ಶಿವಶರಣಪಾಟೀಲ ಜಾವಳಿ, ಕಾಲದ ನೆರಳು, ಪು–೩೦.

೩೨. ಅದೇ, ಪು–೧೦.

೩೩. ಶಾಂತರಸ, ಬೆನ್ನ ಹಿಂದಿನ ಬೆಳಕು, ಪು–೨೩೪.

೩೪. ಕಾವ್ಯಾನಂದ, ಕಾವ್ಯನಂದರ ಆಯ್ದ ಕವನಗಳು, ಪು–೮.

೩೫. ರಂ ರಾ ನಿಡಗುಂದಿ : ಅ ಹ ಹ... ವರದಕ್ಷಿಣೆ, ಪು–೧–೨.

೩೬. ಶೈಲಜಾ ಉಡುಚಣ, ಕಪ್ಪು ನೆಲ ಸೊಕ್ಕಿದ ಸೂರ್ಯ, ಪು–೧೮.

೩೭. ಶಾಂತರಸ, ಬೆನ್ನ ಹಿಂದಿನ ಬೆಳಕು, ಪು-೧೧೧.

೩೮. ಶಿವಶರಣಪಾಟೀಲ ಜಾವಳಿ, ಕಾಲದ ನೆರಳು, ಪು-೫೨.

೩೯. ಚೆನ್ನಣ್ಣ ವಾಲೀಕಾರ, ಮರದ ಮೇಲಿನ ಗಾಳಿ, ಪು-೨೦.

೪೦. ಶಾಂತರಸ, ಮುಸುಕು ತೆರೆ, ಪು-೨೬.

೪೧. ಶಿವಶರಣ ಪಾಟೀಲ್ ಜಾವಳಿ, ಕಾಲದ ನೆರಳು, ಪು-೫೦.

# ಅಧ್ಯಾಯ ೭

## ಕಥಾ ಸಾಹಿತ್ಯ : ವಸ್ತು, ಭಾಷೆ, ಪ್ರಭಾವ ಮತ್ತು ಪ್ರೇರಣೆ

೭.೧. ದೇಶ–ಪ್ರಾಂತ್ಯ ವಿಭಜನೆಗಳ ಸಂದರ್ಭದ ತಲ್ಲಣಗಳು

೭.೨. ರಜಾಕಾರರ ದಾಳಿ ಮತ್ತು ಜನಸಮುದಾಯಗಳು

೭.೩. ಜಮೀನ್ದಾರಿ ವ್ಯವಸ್ಥೆ ಮತ್ತು ಕೆಳವರ್ಗದವರು

೭.೪. ಭೂ ಮಾಲೀಕರು ಮತ್ತು ಉಳುವ ರೈತರು

೭.೫. ಕೌಟುಂಬಿಕ ಬದುಕಿನ ಸಮಸ್ಯೆಗಳು

೭.೬. ಹಿಂದೂ–ಮುಸ್ಲೀಂ ಸಂಬಂಧಗಳು

## ಅಧ್ಯಾಯ ೭

# ಕಥಾ ಸಾಹಿತ್ಯ : ವಸ್ತು, ಭಾಷೆ, ಪ್ರಭಾವ ಮತ್ತು ಪ್ರೇರಣೆ

೧೯ನೆಯ ಶತಮಾನದಲ್ಲಿ ಪಾಶ್ಚಿಮಾತ್ಯ ದೇಶಗಳಲ್ಲಿ ವೈಜ್ಞಾನಿಕ, ಕೈಗಾರಿಕಾ ಕ್ರಾಂತಿಯಿಂದ ರಾಜಕೀಯ, ಧಾರ್ಮಿಕ ಮತ್ತು ಸಾಮಾಜಿಕವಾಗಿ ಸ್ಥಿತ್ಯಂತರಗಳಾದ ಪರಿಣಾಮವಾಗಿ ಸಮಾಜದಲ್ಲಿ ಬಂಡವಾಳಗಾರರು, ಶ್ರಮಿಕರು ಎಂಬ ಎರಡು ಪ್ರಮುಖ ವರ್ಗಗಳು ಕಾಣಿಸಿಕೊಂಡವು. ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಗಳಿಂದ ಅನೇಕ ಬಿಕ್ಕಟ್ಟುಗಳು ತಲೆದೋರಿದ್ದವು. ಆ ಸಂದರ್ಭದಲ್ಲಿ 'ವರ್ಗರಹಿತ ಸಮಾಜ'ದ ನಿರ್ಮಾಣಕ್ಕಾಗಿ ಕಾರ್ಲ್‌ಮಾರ್ಕ್ಸ್‌ನ ಚಿಂತನೆಯ ಬರಹಗಳು ಉದಯಿಸಿದವು. ಹೊಸ ಚಿಂತನೆಗಳಿಂದ ಸಮಾಜದಲ್ಲಿ ವಿವಿಧ ಬದಲಾವಣೆಗಳು ಆಗತೊಡಗಿದವು. ರಷ್ಯಾದಲ್ಲಿ ೧೯೧೭ರ ಕ್ರಾಂತಿಯ ನಂತರ ಸಾಮ್ಯವಾದ ಕಲ್ಪನೆ ಮೂಡಿತು. ಇದರಿಂದಾಗಿಯೇ ಜಗತ್ತಿನ ಅನೇಕ ಬರಹಗಾರರಲ್ಲಿ ಹೊಸ ಆಲೋಚನಾ ಕ್ರಮಗಳು ಹುಟ್ಟಿಕೊಂಡವು. ಸಮಾಜಕ್ಕೆ ಸ್ಫೂರ್ತಿ ನೀಡುವುದೇ ಕಲೆ ಮತ್ತು ಸಾಹಿತ್ಯದ ಉದ್ಧೇಶ ಎಂಬ ಲೆನಿನ್‌ನ ಅಭಿಪ್ರಾಯವು ಅಂದಿನ ಸಾಹಿತ್ಯ ರಚನೆಗೆ ಮುಖ್ಯ ಪ್ರೇರಣೆಯಾಯಿತು.

ಹೈದರಾಬಾದ್ ಕರ್ನಾಟಕವು ೧೯೪೮ರ ಅಂತ್ಯದವರೆಗೆ 'ಹೈದರಾಬಾದ್ ಸಂಸ್ಥಾನ'ದಲ್ಲಿ ಉಳಿದಿತ್ತು. ಇದರಿಂದಾಗಿ ಈ ಭಾಗವು ವಸಾಹತುಶಾಹಿಯ ಅನುಭವಕ್ಕೆ ನೇರವಾಗಿ ಒಳಗಾಗಲಿಲ್ಲ. ಬೇರೆ ಭಾಗದ ಜನರಿಗಿರುವ ಸಾಧ್ಯತೆಗಳು ಈ ಭಾಗದ ಜನರಿಗಿರಲಿಲ್ಲ. ಪಶ್ಚಿಮದಿಂದ ಹರಿದು ಬರುವ ಹೊಸ ಜ್ಞಾನಕ್ಕೆ ಮನಸ್ಸು ಒಡ್ಡಲು ಅವಕಾಶಗಳು ಸಿಗಲಿಲ್ಲ. ೧೭ನೆಯ ಶತಮಾನದಿಂದಲೇ ಈ ಪ್ರದೇಶದಲ್ಲಿ ಕನ್ನಡ ಹಿನ್ನೆಲೆಗೆ ಸರಿಯತೊಡಗಿತ್ತು. ಬರವಣಿಗೆಯಿಂದಲೂ ಸಂಪೂರ್ಣ ಹಿಂದೆ ಸರಿದಿತ್ತು ಎಂದರೆ ತಪ್ಪಾಗಲಿಕ್ಕಿಲ್ಲ. ೨೦ನೆಯ ಶತಮಾನದ ಆರಂಭದಲ್ಲಿ ಅಕ್ಷರ ಕಲಿತವರ ಸಂಖ್ಯೆಯೇ ಅತ್ಯಲ್ಪವಾಗಿದ್ದ ಆ ದಿನಗಳಲ್ಲಿ, ಕಲಿವವರೆಲ್ಲ ತಮ್ಮ ಲೌಕಿಕ

ಪ್ರಯೋಜನಗಳಿಗಾಗಿ ಉರ್ದು ಭಾಷೆಯನ್ನು ಕಲಿಯಲಾರಂಭಿಸಿದ್ದರು. ಹೀಗಾಗಿ ೨೦ನೇ ಶತಮಾನದ ಅರ್ಧ ಭಾಗದವರೆಗೆ ಕನ್ನಡ ಕಲಿಕೆ ರಾಜಕೀಯವಾಗಿ ಸ್ಥಗಿತವಾಗಿತ್ತು. ಮಠಗಳಲ್ಲಿ ಅಯ್ಯನವರ ಶಾಲೆಗಳಲ್ಲಿ ಉಳಿದಿದ್ದ ಕನ್ನಡ ೧೯೪೮ರ ನಂತರ ಚಿಗುರತೊಡಗಿತು. (ಇಂಥ ಸಂದರ್ಭದಿಂದಾಗಿ ನವೋದಯ ಸಾಹಿತ್ಯ ಚಳುವಳಿಯು ಈ ಭಾಗದವರನ್ನು ಅಷ್ಟಾಗಿ ತಟ್ಟಲಿಲ್ಲ) ಇದೇ ಸಂದರ್ಭದಲ್ಲಿಯೇ ಪ್ರಗತಿಶೀಲ ಸಾಹಿತ್ಯ ಚಳುವಳಿಯ ಪ್ರಚಾರ-ಸಂಚಾರ ಈ ಭಾಗದಲ್ಲಿ ನಡೆದಿದ್ದಕ್ಕೂ ಸರಿಹೋಗಿ, ಅಕ್ಷರಸ್ಥರಾಗುತ್ತಿದ್ದ ಈ ಪ್ರಾಂತ್ಯದ ಜನರು ಈ ಚಳವಳಿಯಿಂದ ಪ್ರೇರಿತರಾಗಿ ಓದು-ಬರಹ ಪ್ರಾರಭಿಸಿದ್ದು ತಡವಾಗಿಯೆ ಎನ್ನಬಹುದು.

'ಕುಸುರೆಳ್ಳು'(೧೯೩೬), ಒಂದೇ ಒಂದು ಕಥೆಯುಳ್ಳ 'ಹಾಳುಕಾಗದ' (೧೮೫೩),'ಓರೆಗಲ್ಲು' (೧೯೫೩), ಹಾಗೂ 'ಸನ್ಮಾನ' (೧೯೬೮) ಎಂಬ ಕಥಾ ಸಂಕಲನಗಳು ಈ ಭಾಗದ ಆರಂಭ ಕಾಲದ ಕಥಾ ಸಂಕಲನಗಳಾಗಿ ಕಾಣುತ್ತವೆ. ರಾಮಚಂದ್ರ, ವೆಂಕಟೇಶ, ದಾಸ, ಆಶ್ರಿತ, ಜಿ.ಕೆ ಸಾಗರ, ಲಿಂಗಸಗೂರು ವಿಠ್ಠಲರಾವ, ರಾಘು, ರುಕ್ಮಿಣೀಕಂದ, ನರಸಿಂಹ ಕಠಾವಿ, ಕುಮಾರಿ ಸುಶೀಲಾ ಬಾಡಗಂಡಿ, ವಾಗೀಶ್ವರ ನಾರಾಯಣ, ಎಚ್.ಜಿ.ಕುಲಕರ್ಣಿ, ಶ್ಯಾಮಪ್ರಸಾದ ಮುದ್ಗಲ್, ಶಾಂತಾ ಚಿಂಚೋಳಿ, ಗುರುನಾಥ ರೆಡ್ಡಿ ಪರ್ವತಾಬಾದ, ವಸುಂಧರಾ ಕಲಬುರ್ಗಿ, ಅನಂತ ಹರಸೂರು, ಮುಂತಾದವರ ಕಥೆಗಳು ಈ ಸಂಕಲನಗಳಲ್ಲಿ ಇವೆ. ಇವರು ಹೆಚ್ಚಿನ ಕಥೆಗಳನ್ನು ಬರೆದ ದಾಖಲೆಗಳಿಲ್ಲ. ಇವರೆಲ್ಲ ಸ್ವಾತಂತ್ರ್ಯಪೂರ್ವದಲ್ಲಿ ಈ ಪ್ರದೇಶದವರಿಗೆ ಕನ್ನಡ ಸಾಹಿತ್ಯ-ಸಂಸ್ಕೃತಿಯ ಕೇಂದ್ರವಾದಂತಿದ್ದ ಹೈದರಾಬಾದ್ ನಗರದಲ್ಲಿ ವಿದ್ಯಾರ್ಥಿಗಳಾಗಿದ್ದವರು. ಹೈದರಾಬಾದ್ ಕರ್ನಾಟಕದ ಗುಲಬರ್ಗಾಕ್ಕೆ ಅ.ನ.ಕೃ. ಬರುವರೆಂದು ತಿಳಿದ ಈ ಭಾಗದ ಲೇಖಕರು, ಅವರಿಗೆ ಅರ್ಪಿಸಲು ತಮ್ಮ ತಮ್ಮ ಕಥೆಗಳನ್ನು ಒಂದೇ ಕೃತಿಯಲ್ಲಿ ಸಂಕಲಿಸಿ, ಅದಕ್ಕೆ 'ಸನ್ಮಾನ' ಎಂದು ಹೆಸರಿಟ್ಟು ಅದನ್ನು ಅವರಿಗೆ ಅರ್ಪಿಸಿರುವುದೇ ಸಾಕ್ಷಿಯಾಗಿದೆ. ಈ ಎರಡು ಸಂಕಲನದ ಕಥೆಗಳು ಪ್ರಗತಿಶೀಲ ಸಾಹಿತ್ಯದ ಅಶಯಗಳನ್ನು ಹೊಂದಿವೆ. ಇದಕ್ಕೂ ಮುನ್ನ ರಾಯಚೂರು ಭಾಗದಿಂದ ೧೯೪೭ರಲ್ಲಿ ಹೊರಬಂದ 'ಮುಸುಕು ತೆರೆ' ಎಂಬ ಸಂಕೀರ್ಣ ಕೃತಿಯಲ್ಲಿಯೇ ಪ್ರಗತಿಶೀಲರ ಪ್ರಭಾವ ಒಡೆದು ಕಾಣುತ್ತಿತ್ತು. ಇದೇ ಸಮಯದಲ್ಲಿ ಬಂದ ಎ.ಬಿ.ಮುತ್ತಾಳರ 'ಕಳಚಲಿದೆ ರತ್ನ' (೧೯೫೧) ಕಥಾ ಸಂಕಲನ ಈ ಭಾಗದ ಜನಜೀವನದ ಹೆಚ್ಚಿನ ಪುರಾವೆಗಳನ್ನು ಒದಗಿಸುತ್ತದೆ.

ರುಕ್ಮಿಣೀಕಂದರ 'ಹಾಳುಕಾಗದ' ಕತೆಯು ಮಧ್ಯಮ ವರ್ಗದ ಕುಟುಂಬದ ಚಟುವಟುಕೆಗಳನ್ನು ಒಳಗೊಂಡಿದೆ. ಇಲ್ಲಿ ಅನಕ್ಷರತೆಯಿಂದ ಸಂಬಂಧಗಳ ಮಧ್ಯೆ ಬಿರುಕುಂಟಾದ ಅವಸ್ಥೆಯನ್ನು ಹೆಣೆಯಲಾಗಿದೆ. ಪ್ರಬಂಧ ರೂಪದ ಈ ಕಥೆಯಲ್ಲಿ ಏಕರೂಪಿಯಾದ ನಿರೂಪಣೆ ಕಾಣುತ್ತದೆ. ಇದರಲ್ಲಿ ಕಥಾನಾಯಕ ರಘುಪತಿಯು ಈ ಕತೆಯನ್ನು ಹೇಳುತ್ತ ಹೋಗುತ್ತಾನೆ. ಅವನು ತನ್ನ ಚಿಕ್ಕಮ್ಮನ ಮನೆಗೆ ಹೋದಾಗ ಅವರ ಸೊಸೆ ರೂಪವತಿಯನ್ನು ಕಾಣುತ್ತಾನೆ. ಮೊದಲ ಭೇಟಿ ಮತ್ತು ಮದುವೆಯಾಗಿರುವದರಿಂದ ಅವಳೊಂದಿಗೆ ಮಾತುಕತೆ ಅಷ್ಟಕಷ್ಟೆ ಇರುತ್ತದೆ. ಕೆಲ

ದಿನಗಳ ನಂತರ ಸಲುಗೆಯಿಂದ ಮಾತಾಡುತ್ತ ಅವರ ಸಂಬಂಧ ಅಣ್ಣ ತಂಗಿ ಸಂಬಂಧವಾಗಿ ಬೆಳೆಯುತ್ತದೆ. ರಘುಪತಿ ತನ್ನ ಊರಿಗೆ ಹೋಗುವಾಗ ಅವಳಿಗೆ ಒಂದು ರೂಪಾಯಿಯನ್ನು ಕಾಣಿಕೆಯಾಗಿ ನೀಡುತ್ತಾನೆ. ಒಲ್ಲದ ಮನಸ್ಸಿನಿಂದ ಅವಳು ಪಡೆಯುತ್ತಾಳೆ. ತಮ್ಮ ಈ ಸಹೋದರ ವಾತ್ಸಲ್ಯ ಮುಂದೆ ಪತ್ರದ ಮೂಲಕ ಮುಂದುವರೆಯುತ್ತದೆ. ಹಾಗೆ ವಿನಿಮಯವಾಗುತ್ತಿದ್ದ ಒಂದು ಪತ್ರದಲ್ಲಿನ ವಿಷಯ ಅರ್ದಂಬರ್ಧ ಓದಿದವನಿಂದ ತನ್ನ ರೂಪವತಿಯ ಅತ್ತೆಗೆ ತಿಳಿಯುತ್ತದೆ. ಇದು ರೂಪವತಿ ಮತ್ತು ರಘುಪತಿಯರ ಮಧ್ಯೆ ಕಲ್ಪಿತ ಸಂಬಂಧಕ್ಕೆ ದಾರಿ ಮಾಡಿಕೊಡುತ್ತದೆ. ಮುಂದೆ ಪತ್ರ ವ್ಯವಹಾರ ನಿಂತು ಬಹಳ ದಿನಗಳ ನಂತರ ಧಿನಮಣಿ ಎಂಬ ಗೆಳೆಯನಿಂದ ರಘುಪತಿ ವಿಷಯ ತಿಳಿಯುತ್ತಾನೆ. ಒಂದು ಹಾಳುಕಾಗದ ಸಂಬಂಧಗಳನ್ನು ಕೆಡಿಸಿತು ಎಂಬ ವ್ಯಥೆಯಲ್ಲಿ ಅವನು ಉಳಿಯುತ್ತಾನೆ. ಅನಕ್ಷರತೆಯು ಒಳ್ಳೆಯ ಸಹೋದರ ಸಂಬಂಧವನ್ನು ಹಾಳು ಮಾಡುತ್ತದೆ ಎಂಬುದು ಇಲ್ಲಿ ಗಮನಿಸಬೇಕಾದ ಅಂಶವಾಗಿದೆ. ಸ್ತ್ರೀ ಕೇಂದ್ರಿತವಾದ ಈ ಕಥೆಯು ಸಮಾಜದಲ್ಲಿನ ಸಂಬಂಧಗಳನ್ನು ತಿಳಿಸುತ್ತದೆ.

'ಕುಸುರೆಳ್ಳು' ಹೈದರಾಬಾದ ತರುಣ ತಂಡದವರಿಂದ ೧೯೩೬ರಲ್ಲಿ ಪ್ರಕಟವಾಯಿತು. ಇದರಲ್ಲಿ ಹಲವು ಬಗೆಯ ಕಥೆಗಳಿವೆ. ಕಥೆ, ಪ್ರಬಂಧಗಳ ಸಮ್ಮಿಶ್ರಣವು ಇದರಲ್ಲಿ ಕಾಣಬಹುದು. ಅವಿಧವಾನವಮಿ ಎಂಬ ರಾಮಚಂದ್ರರ ಕಥೆಯು ಹೆಂಡತಿಯನ್ನು ಕಳೆದುಕೊಂಡ ವಿಧುರನೊಬ್ಬನ ಪ್ರಾಮಾಣಿಕತೆಯನ್ನು, ಅವನ ಘಾಸಿಗೊಂಡ ಮನಸ್ಸಿನ ಚಿತ್ರಣವನ್ನು ಒಳಗೊಂಡಿದೆ. ದಾಂಪತ್ಯ ಜೀವನದ ಆರಂಭದ ದಿನಗಳ ಪ್ರೇಮ, ಸರಸದೊಂದಿಗೆ ಆರಂಭವಾಗುವ ಈ ಕತೆ ಮುಗಿಯುವುದು ದುರಂತದಲ್ಲಿ. ಹೆಂಡತಿ ಮೇಲೆ ಅಪಾರ ಪ್ರೀತಿ ಹೋದಿದ್ದ ಕಥಾ ನಾಯಕ ಅವಳ ಅಗಲಿಕೆಯ ನೋವನ್ನು ಸಹಿಸದಾಗುತ್ತಾನೆ. ಇಬ್ಬರು ಮಕ್ಕಳ ಜೊತೆಗೆ ಅವಳ ನೆನಪಿನಲ್ಲಿಯೇ ಜೀವನ ಸಾಗಿಸುತ್ತಾನೆ. ಒಂದು ದಿನ ಕನಸಿನಲಿ ಅವನ ಮಡದಿ ಒಂದು ಸೀರೆ ಕೊಡಿಸಿರಿ ಎಂದು ಕೇಳುತ್ತಾಳೆ. ನಿದ್ದೆಯಿಂದ ಎಚ್ಚರಗೊಂಡು ನೋಡಿದರೆ, ಮನೆಯ ಕೆಲಸದವಳು ತನ್ನ ಪಾಡಿಗೆ ತಾನು ಕೆಲಸ ಮಾಡುತ್ತಿದ್ದಾಳೆ. ಆಗ ಅವನು ತನ್ನ ಮಗ ಮೂರ್ತಿಯನ್ನು ಕರೆದು ಮನೆಗೆಲಸ ಮಾಡುವವಳಿಗೆ ಸೀರೆ ಕೊಡಿಸಲು ಹೇಳುತ್ತಾನೆ. ಕೊನೆಗೆ ತನ್ನ ಹೆಂಡತಿಯ ಭಾವಚಿತ್ರವನ್ನು ನೋಡಿ ಸಾಂತ್ವನಗೊಳಿಸುತ್ತಾನೆ. ಇಲ್ಲಿ ಮನಸ್ಸಿನ ದೃಢತೆ ವಹಿಸಿದ ಕಾರ್ಯ ಮಹತ್ವದ್ದೆನಿಸುತ್ತದೆ.

ಕುಸುರೆಳ್ಳು ಸಂಕನಲದಲ್ಲಿ 'ಹಾಳುಬಾಳು' 'ದೇವರನ್ಯಾಯ' ಕಥೆಗಳಲ್ಲಿ ಸಮಾಜ ಮತ್ತು ವ್ಯಕ್ತಿಯ ನಡುವಿನ ಸಂಬಂಧದ ಚಿತ್ರಣಗಳಿವೆ. 'ಜೀವನ', 'ನನ್ನ ತಂಗಿ' ಎಂಬ ಕಥೆಗಳು ಸಹೋದರ ವಾತ್ಸಲ್ಯವನ್ನು ಎತ್ತಿ ತೋರಿಸುತ್ತವೆ. ಇಲ್ಲಿನ ಕಥೆಗಳಲ್ಲಿ ಸುಖ-ದುಃಖ, ಪಾಪ-ಪುಣ್ಯ, ನೀತಿ-ಅನೀತಿಗಳ ಚಿತ್ರಣಗಳ ಜೊತೆಗೆ ಮಾನವ ಸಂಬಂಧಗಳ ಚಿತ್ರಣವನ್ನು ಕಾಣುಬಹುದಾಗಿದೆ. ಸಾಮಾನ್ಯ ಸಂಸಾರದಲ್ಲಿರುವ ಪ್ರೀತಿ, ಗೌರವಗಳನ್ನು 'ನೌಕರಿ' ಎಂಬ ಕಥೆಯು ಹೇಳುತ್ತದೆ. ಈ ಕಥೆಯಲ್ಲಿ ರಾಘಣ್ಣ ಶಾಮುವಿನ ಗೆಳೆಯ. ಅವರಿಬ್ಬರೂ ಒಬ್ಬರಿಗೊಬ್ಬರು ಸ್ನೇಹದಿಂದ ಕಾಣುತ್ತಿದ್ದರು. ಶಾಮುವಿನ ತಾಯಿ ಅವನಿಗೆ ಎಷ್ಟು ಪ್ರೀತಿಯಿಂದ ಕಾಣುತ್ತಿದ್ದಳೋ ರಾಘಣ್ಣನಿಗೂ ಅಷ್ಟೇ ಪ್ರೀತಿಯಿಂದ ಕಾಣುತ್ತಿದ್ದಳು. ಶಾಮುವಿನ ಹೆಂಡತಿ ರಾಘಣ್ಣನಿಗೆ ತಂಗಿ

ಸಮಾನಳು. ರಾಘಣ್ಣ ನೌಕರಿಗೆ ಹೋಗುವಾಗ ಈ ಕುಟುಂಬ ಅತ್ಯಂತ ಒಲ್ಲದ ಮನಸ್ಸಿನಿಂದ ಕಳುಹಿಸಿಕೊಟ್ಟಿತ್ತು. ಕೊನೆಗೆ ರಾಘಣ್ಣ ನೌಕರಿಗೆ ರಾಜೀನಾಮೆ ಕೊಟ್ಟು ಮನೆಗೆ ಬಂದಾಗ ಮಾತೃ ಸಮಾನಳಾದ ಶಾಮುವಿನ ತಾಯಿ 'ಅಯ್ಯ ರಾಘಣ್ಣ! ನಮ್ಮಪ್ಪ ಬಂದನಲ್ಲ!! ಎಷ್ಟು ಸೊರಗೇದ ನೋಡ್ರಿ ನನ ಕೂಸು!!! ಈ ನೌಕರಿ ಹಾಳಾಗ' ಎಂದು ಹೇಳುತ್ತಾಳೆ. ಇಲ್ಲಿನ ಕರುಣೆ, ಸ್ನೇಹ ಪ್ರೇಮಗಳೆ ಕುಟುಂಬಗಳ ಮಧ್ಯೆ ಬಾಂಧವ್ಯ ಬೆಸೆಯಲು ಕಾರಣವಾಗಿವೆ. ಈ ಕಥೆಗಳು ಸಮಾಜದ ಮೇಲ್ವರ್ಗದ, ವಿದ್ಯಾವಂತರಿಂದ ರಚಿತವಾದವುಗಳೆಂದು ಈ ಮೇಲಿನ ಕೆಲವು ಮಾತುಗಳಿಂದ ತಿಳಿಯಬಹುದು. ಸಮಾಜದ ಕೆಳ ಸಮುದಾಯಗಳಿಗೆ ಅಕ್ಷರಭ್ಯಾಸದ ಅವಕಾಶ ಇರಲಿಲ್ಲ ಎಂಬ ಅಂಶವನ್ನು ಇದರಿಂದ ಗ್ರಹಿಸಬಹುದು.

ಹೈದರಾಬಾದ್ ಕರ್ನಾಟಕದ ಕಥೆಗಾರರಲ್ಲಿ ೪೦ರ ದಶಕದ ನಂತರ ಬಂದ ಶಿವಲೆಂಕ, ಸಿದ್ಧಯ್ಯ ಪುರಾಣಿಕ, ದೇವೇಂದ್ರ ಕುಮಾರ ಹಕಾರಿ, ಪಂಚಾಕ್ಷರಿ ಹಿರೇಮಠ, ಶಾಂತರಸ, ಚಂದ್ರಕಾಂತ ಕುಸನೂರು, ಜಯತೀರ್ಥ ರಾಜಪುರೋಹಿತ, ಜಿ.ವಿ. ವಿಸಾಜಿ ಮುಂತಾದವರು ಪ್ರಮುಖರಾಗಿ ಕಾಣುತ್ತಾರೆ. ಇವರ ಕಥೆಗಳಲ್ಲಿ ಮಧ್ಯಮ ಮತ್ತು ಕೆಳವರ್ಗದ ಜನರ ತಲ್ಲಣಗಳು, ಕನಸುಗಳು, ಆಸೆ–ಆಕಾಂಕ್ಷೆಗಳು, ಭಾವುಕ–ರಂಜಕ ನೆಲೆಯಲ್ಲಿ ಅಭಿವ್ಯಕ್ತಗೊಂಡಿವೆ. ಅವು ಪ್ರಗತಿಶೀಲ ಸಾಹಿತ್ಯದ ಆಶಯಗಳಿಗೆ ಅನುಗುಣವಾಗಿ ಪ್ರಕಟವಾಗಿರುವುದು ಗಮನಿಸಬೇಕಾದ ಅಂಶವಾಗಿದೆ. ಅದರಲ್ಲೂ ಕಲಾವಿದರನ್ನು ಕುರಿತ ಕಥೆಗಳೂ ವಿಶೇಷವಾಗಿವೆ. ಮೇಲೆ ಹೆಸರಿಸಿದ ಕಥೆಗಾರರಲ್ಲಿ ಶಾಂತರಸ, ಜಯತೀರ್ಥ ರಾಜಪುರೋಹಿತರು ಹೆಚ್ಚು ಕಥೆಗಳನ್ನು ಬರೆದವರು. ಉಳಿದವರೆಲ್ಲ ಪ್ರಾರಂಭದ ಉತ್ಸಾಹವನ್ನು ಉಳಿಸಿಕೊಳ್ಳಲಿಲ್ಲ. ದಾಖಲೆಗೋಸ್ಕರ ಎಂಬಂತೆ ಒಂದೊಂದು ಕಥಾ ಸಂಕಲನವನ್ನು ಪ್ರಕಟಿಸಿ ವಿರಮಿಸಿದರು.

ಸಾಹಿತಿ–ಕಲಾವಿದರನ್ನು ಕುರಿತು, ಪ್ರಾರಂಭದ ಕಥೆಗಾರರು ಅನೇಕ ಕಥೆಗಳನ್ನು ಬರೆದಿದ್ದಾರೆ. ಆದರ್ಶ ಕಲಾವಿದ, ಸಾಹಿತಿಯ ಜೀವನ, ನಾನು ಕವಿಯಾಗಿದ್ದರೆ (ಸಗರ ಕೃಷ್ಣಾಚಾರ್ಯ), ಇಂದಿರೆ (ಎ.ಬಿ.ಮುತ್ತಾಳ), ಕವಿಯ ಬಾಳೊಂದು (ಸುಶೀಲಾ ಬಾಡಗಂಡಿ), ಶಾಂತರಸರ 'ನಾಟ್ಯರಾಣಿ', 'ಬಯಲಾಟ', ಜಯತೀರ್ಥ ರಾಜಪುರೋಹಿತರ 'ಕತೆಗಾರ್ತಿ', ಸೂಗಯ್ಯ ಹಿರೇಮಠ 'ಚಿತ್ರಾನ್ನ' ಮುಂತಾದವು. ಸಾಹಿತಿ–ಕಲಾವಿದರಿಂದ ಸಾಮಾಜಿಕ ಬದಲಾವಣೆ ಸಾಧ್ಯವೆಂಬ ಪ್ರಗತಿಶೀಲರ ಆಶಯಕ್ಕೆ ಪ್ರೇರಕವಾಗುವಂತೆ ಈ ಕಥೆಗಳು ಇವೆ. ಈ ಕಥೆಗಳು ಸಾಹಿತಿ–ಕಲಾವಿದರ ಆದರ್ಶ, ಕನಸು, ತ್ಯಾಗ ಮುಂತಾದ ಮೌಲ್ಯಗಳನ್ನು ಪ್ರತಿಪಾದಿಸುತ್ತವೆ. ಇವರ ಬದುಕು ಸಾರ್ವಜನಿಕರಿಗೆ ಭವ್ಯವಾಗಿ ಕಾಣುತ್ತದೆ. ಆದರೆ ವೈಯಕ್ತಿಕ ಬದುಕು ಮಾತ್ರ ಬವಣೆಗಳಿಂದ ತುಂಬಿ ದುರಂತದೆಡೆಗೆ ತಲುಪುತ್ತಿರುತ್ತದೆ. ಅಂತಹ ಚಿತ್ರಗಳು ಕಥೆಗಳಲ್ಲಿ ಮೂಡಿವೆ. ಸಾಮಾಜಿಕ ಬದುಕಿನಲ್ಲಿ ಇಂಥ ಕಲಾವಿದರ ಸ್ಥಾನಮಾನಗಳು ಹೇಗಿರುತ್ತವೆ ಮತ್ತು ಕಲಾವಿದರೇ ತಮ್ಮ ಕಲಾಬದುಕಿನ ಬಗ್ಗೆ ತಳೆವ ನಿಲುವು ಎಂಥದ್ದು? ಎಂಬುದನ್ನು ವ್ಯಕ್ತಪಡಿಸಲು ಪ್ರಯತ್ನಿಸುತ್ತವೆ.

ಶಾಂತರಸ 'ನಾಟ್ಯರಾಣಿ' ಕಥೆಯು ಕಲೆ ಮತ್ತು ವ್ಯಕ್ತಿಯ ಅಸ್ತಿತ್ವದ ಪ್ರಶ್ನೆಯನ್ನು ಎತ್ತುತ್ತದೆ. ಸಾಮಾಜಿಕ ಸಂದರ್ಭದಲ್ಲಿ ಪುರುಷನಾದರೆ ಅವನ ಸ್ಥಾನಮಾನಗಳೆ ಬೇರೆಯಾಗಿರುತ್ತವೆ. ಒಂದು ಕಾಲದಲ್ಲಿ ನಾಟಕಗಳಲ್ಲಿ ಮಹಿಳೆಯರ ವೇಷಗಳನ್ನು ಪುರುಷರೆ ಹಾಕಿ ಅಭಿನಯಿಸುತ್ತಿದ್ದರು. ಇದು ಮಹಿಳೆಯ ಸ್ಥಾನಮಾನದ ಪ್ರಶ್ನೆಯನ್ನು ತೋರಿಸುತ್ತದೆ. ಒಂದು ವೇಳೆ ಮಹಿಳೆ ನಾಟಕಗಳಲ್ಲಿ ಅಭಿನಯಿಸಿದರೆ ಅವಳ ಕಲೆಯನ್ನು ಪುರಸ್ಕರಿಸಿದಂತೆ, ಸಮಾಜದಲ್ಲಿ ಸಾಮಾಜಿಕವಾಗಿ ಅವಳನ್ನು ಪುರಸ್ಕರಿಸುವುದಿಲ್ಲ. ಅಂಥವರ ಬದುಕು ಅನೇಕ ಬಿಕ್ಕಟ್ಟುಗಳನ್ನು ಎದುರಿಸಬೇಕಾಗುತ್ತದೆ. ಈ ಕಥೆಯಲ್ಲಿ, ಕಲಾವಿದೆ ಸುಂದರಿ ತನ್ನ ಗಾಯನ, ಅಭಿನಯದಿಂದ ಕಲಾ ಪ್ರಪಂಚದಲ್ಲಿ ಉನ್ನತ ಸ್ಥಾನವನ್ನು ಗಳಿಸಿದ್ದಾಳೆ. ಆದರೆ ಸಾಮಾಜಿಕ ಸನ್ನಿವೇಶದಲ್ಲಿ ಅವಳ ಸ್ಥಾನಮಾನ ಎರಡನೆಯ ದರ್ಜೆಯದಾಗಿರುತ್ತದೆ. ಸಾಮಾಜಿಕ ಸನ್ನಿವೇಶದಲ್ಲಿಯೂ ಅವಳಿಗೊಂದು ಬದುಕಿರುತ್ತದೆ. ಈ ಬದುಕಿಗೆ ಅಸ್ತಿತ್ವ ಕಲ್ಪಿಸಿಕೊಳ್ಳಲು ಆ ಕಲಾವಿದೆ ನಿರಂತರವಾಗಿ ತಾತ್ವಿಕ ಸಂಘರ್ಷ ನಡೆಸಬೇಕಾಗುತ್ತದೆ. ಸುಂದರಿಯ ಗಾಯನ ಮತ್ತು ಅಭಿನಯ ರಸಿಕರಿಗೆ ಬೇಕು. ಜೊತೆಗೆ ಅವಳ ದೇಹವೂ ಬೇಕು. ಎರಡನೆಯದನ್ನು ಕಲಾವಿದೆ ನಿರಾಕರಿಸಿದರೆ ಪುರುಷ ಸಮಾಜ ಸುಮ್ಮನಿರುವುದಿಲ್ಲ. ಅವಳ ಕಲೆಯನ್ನು ಅನುಭವಿಸಿದಂತೆ, ಅವಳ ದೇಹವನ್ನೂ ಅನುಭವಿಸಲು ಪ್ರಯತ್ನಿಸುತ್ತಿತ್ತು. ಸಮಾಜ ಕೊನೆಗೂ ಅವಳ ಕಲೆಯನ್ನು ಸನ್ಮಾನಿಸಿದಂತೆ ಅವಳ ಬದುಕನ್ನು ಗೌರವಿಸುವ ಗುಣವನ್ನು ತೋರಿಸಲಿಲ್ಲ. ಸುಂದರಿ ತನ್ನ ಅಸ್ತಿತ್ವವನ್ನು ಸ್ಥಾಪಿಸಲಾಗದೆ ಸಾವನಪ್ಪುತ್ತಾಳೆ.

ಚೆನ್ನಣ್ಣ ವಾಲೀಕಾರ 'ಕೆಸರಲ್ಲಿ ಕೆಸರಾಗಿ ಹೋದ ಕಮಲ' ಕಥೆಯೂ ಇಂಥ ಪರಂಪರೆಗೆ ಸೇರಿದೆ. ಕಲಾವಿದೆ ಒಬ್ಬಳನ್ನು ಪ್ರಗತಿಪರನಾದಂಥ ವ್ಯಕ್ತಿ ಅವಳಿಗೆ ಆಶ್ರಯ ನೀಡಲು ಪ್ರಯತ್ನಿಸುತ್ತಾನೆ. ಈ ಕಲಾವಿದರು 'ಉಳ್ಳವರ' ಸೂಳೆಯಾಗಿ ಬದುಕಬೇಕು. ಇಲ್ಲದಿದ್ದರೆ ಅವರಿಗೆ ಅಂಥ ಅಸ್ತಿತ್ವ ಇರುವುದಿಲ್ಲ. ಈ ಕಥೆಯಲ್ಲಿ ವಿಜ್ಜಮ್ಮನನ್ನು ಅವಳ ಬದುಕಿನ ಹಿನ್ನೆಲೆಯನ್ನು ಅರಿತ ಮಾಸ್ತಾರ ಅವಳನ್ನು ಮದುವೆಯಾಗಿ ಅವಳ ಬದುಕಿಗೊಂದು ಅಸ್ತಿತ್ವ ನೀಡಬೇಕೆಂದು ಪ್ರಯತ್ನಿಸುತ್ತಾನೆ. ಆದರೆ ವಿಜ್ಜಮ್ಮಳನ್ನು ಅವಳಿಂದಲೆ ಬದುಕುವ ಅವಳ ಮನೆಮಂದಿಯೇ ಬಿಡುವುದಿಲ್ಲ. 'ಉಳ್ಳವನ' ಸೂಳೆಯಾಗಿ ಇರಲು ಒತ್ತಾಯಿಸುತ್ತಾರೆ. ಜೊತೆಗೆ ವಿಜ್ಜಮ್ಮಳನ್ನು ಇಟ್ಟುಕೊಂಡ ವೀರನಗೌಡ ಎಂಬ ಜಮೀನ್ದಾರ ಅವಳನ್ನು ಬಿಡುವುದಿಲ್ಲ. ಅವಳ ಬಾಳಿಗೆ ಬೆಳಕು ನೀಡಲು ಪ್ರಯತ್ನಿಸಿದ ಮಾಸ್ತಾರ ಜೀವಭಯವನ್ನು ಎದುರಿಸಬೇಕಾಗಿ ಬರುತ್ತದೆ.

ಈ ಕಥೆಗಳ ವ್ಯತ್ಯಾಸವೆಂದರೆ ಕಲಾವಿದೆಯನ್ನು ಪುರುಷ ಸಮಾಜ ನೋಡುವ ಬಗೆಯನ್ನು ಮತ್ತು ಅವಳ ಸ್ಥಿತಿಯನ್ನು ಮಾತ್ರ 'ನಾಟ್ಯರಾಣಿ' ತೋರಿಸುತ್ತದೆ. ಇನ್ನೊಂದು ಕಥೆ ಮಹಿಳೆಗೆ ಅಸ್ತಿತ್ವ ಕೊಡಲು ಪ್ರಯತ್ನಿಸುತ್ತದೆ. ಇದು ಸಮಾಜದಲ್ಲಿನ ವೈರುಧ್ಯವೆಂದೆ ಹೇಳಬಹುದು. ಕಲಾವಿದರು ಈ ಸಮಾಜದಲ್ಲಿ ವಿಶಿಷ್ಟ ವ್ಯಕ್ತಿತ್ವವುಳ್ಳವರು. ಅವರ ನೋವು ಸಂಕಟಗಳು ಉಳಿದ ಜನರ ನೋವು ಸಂಕಟಗಳಿಗಿಂತ ಭಿನ್ನವಾಗಿರುತ್ತವೆ. ಅಂಥ ಭಿನ್ನ ನಿಲುವಿನ ಕಥೆಗಳನ್ನು ಬರೆಯುವಲ್ಲಿ ಹೈದರಾಬಾದ್ ಕರ್ನಾಟಕದ ಲೇಖಕರು ಸಾಮಾಜಿಕ ಜವಾಬ್ದಾರಿಯನ್ನು

ಹೊಂದಿದ್ದಾರೆ. ಅವರು ಪ್ರಗತಿಶೀಲ ಚಳವಳಿಯ ಭಾವುಕ ನಿಲುವುಗಳಿಂದ ಪ್ರೇರಣೆ ಪಡೆದಂತೆ ಕಾಣುತ್ತದೆ.

**೭.೧. ದೇಶ-ಪ್ರಾಂತ್ಯ ವಿಭಜನೆಗಳ ಸಂದರ್ಭದ ತಲ್ಲಣಗಳು**

೨೦ನೇ ಶತಮಾನದಲ್ಲಿ ಜಾಗತಿಕ ಮಟ್ಟದಲ್ಲಿ ಎರಡು ಮಹಾಯುದ್ಧಗಳು ಸಂಭವಿಸಿವೆ. ಅವುಗಳಿಂದ ಜನ ಸಮುದಾಯಗಳು ಕಂಡರಿಯದ ನೋವು-ಸಾವಿಗೆ ಒಳಗಾಗಿವೆ ಅದರಿಂದಾಗಿ ಜನಸಮುದಾಯಗಳು ಜೀವನೋತ್ಸಾಹ ಕಳೆದುಕೊಂಡು ತಲ್ಲಣಿಸಿವೆ. ಜಾಗತಿಕವಾಗಿ ಆದ ಆ ಅವಘಡಕ್ಕೆ ಮರುಗಿವೆ. ಮುಂದೆ ಇದರಿಂದ ಉಂಟಾದ ಪರಿಣಾಮಗಳು ತಲೆಮಾರಿನಿಂದ ತಲೆಮಾರಿಗೆ ಶಾಪವಾಗಿ ಅಂಟಿಕೊಂಡವೆ. ಆದರೂ ದೇಶಗಳು ಪಾಠ ಕಲಿಯಲಿಲ್ಲ. ಯುದ್ಧಗಳು ಸಂಭವಿಸುತ್ತಲೇ ಹೋಗಿವೆ. ಈ ಯುದ್ಧದಷ್ಟೇ ಅನರ್ಥಕಾರಿಯಾದದ್ದು ದೇಶ ವಿಭಜನೆಯ ಕೆಲಸ. ಜಾತಿ, ಮತ, ಧರ್ಮ, ಭಾಷೆ, ನಾಡು ಮುಂತಾದ ಹೆಸರುಗಳಲ್ಲಿ ಅಂಧವಾಗಿ ವರ್ತಿಸುವ ರಾಜಕೀಯದಿಂದ ಗಲಭೆ ಉಂಟಾಗಿ ದೇಶವೇ ಆತಂಕಕ್ಕೆ ಒಳಗಾಗುವುಹು ಈ ದೇಶ ವಿಭಜನೆಯಿಂದ. ಭಾರತ-ಪಾಕಿಸ್ಥಾನಗಳು ವಿಭಜನೆಯಾದಾಗ ಜನಸಮುದಾಯಗಳು ಅನೇಕ ಬಿಕ್ಕಟ್ಟುಗಳನ್ನು ಎದುರಿಸುವಂತಾಯಿತು. ಅದರಿಂದ ಜನಸಾಮಾನ್ಯರ ಮನೆ, ಮಠ, ಆಸ್ತಿ ಹಾನಿಗೊಳಗಾದವು. ಅವರಿಗೆ ತಾವು ನಿಂತ ನೆಲವೇ ಅಪರಿಚಿತವೆನಿಸುತ್ತದೆ. ಕುಟುಂಬಗಳು ಅಸ್ತವ್ಯಸ್ತವಾಗಿ ಹೋಗುತ್ತವೆ. ಇಂಥ ಸಂದರ್ಭದ ತಲ್ಲಣಗಳನ್ನು ಹೇಳುವ ಕಥೆಗಳು ಕೆಲವಿವೆ. ಒರೆಗಲ್ಲು (ದೇವೇಂದ್ರ ಕುಮಾರ ಹಕಾರಿ), ನಿರಾಶ್ರಿತೆ (ಶಿವಲೆಂಕ ರಾಯಚೂರು), ಟೊಳ್ಳು ಬುರುಜು (ಸರಿತಾ ಕುಸುಮಾಕರ), ಮುಂದೇನು ಮತ್ತು ಜಾನ್ ಷಣ್ಮುಗನ್ (ಜಯತೀರ್ಥ ರಾಜಪುರೋಹಿತ) ಮುಂತಾದ ಕಥೆಗಳಲ್ಲಿ ದೇಶ ವಿಭಜನೆಯ ಹೊತ್ತಿನಲ್ಲಿ ಸಂಭವಿಸಿದ ಘಟನೆಗಳ ಚಿತ್ರಣವಿದೆ.

'ಒರೆಗಲ್ಲು' ಕಥೆಯಲ್ಲಿ ಭಾರತ ಪಾಕಿಸ್ತಾನ ಇಬ್ಭಾಗವಾದಾಗ, ದೇಶದಲ್ಲಿ ನಡೆದ ಮತೀಯ ಗಲಭೆಗೆ ಹಿಂದೂ ಕುಟುಂಬವೊಂದು ಕಠಿಣವಾದ ಬಿಕ್ಕಟ್ಟನ್ನು ಎದುರಿಸಬೇಕಾಗುತ್ತದೆ. ಸಮಯ ಸಾಧಕರ ಕ್ರೌರ್ಯಕ್ಕೆ ಮನೆಯ ಸದಸ್ಯರೆಲ್ಲ ಬಲಿಯಾಗಿ ಕಮಲೆ ಮಾತ್ರ ಉಳಿಯುತ್ತಾಳೆ. ಅವಳಿಗೆ ಮಹಮೂದ ಎಂಬ ವ್ಯಕ್ತಿ ಬೆನ್ನು ಬೀಳುತ್ತಾನೆ. ಅವನಿಂದ ಪಾರಾಗಲು ಹುಸೇನಬಿಯ ಸಹಾಯದಿಂದ, ತನ್ನ ಗಂಡ, ಅತ್ತೆ, ಮಾವರನ್ನು ಕರೆದುಕೊಂಡು, ಮನೆ-ಆಸ್ತಿಯನ್ನು, ತನ್ನ ಪ್ರೀತಿಯ ಲಾಹೋರ್ ಅನ್ನು ಬಿಟ್ಟು ಭಾರತಕ್ಕೆ ಬಂದು ನೆಲೆಸುತ್ತಾಳೆ. ಹಿಂದೂ ಕುಟುಂಬವೊಂದರಲ್ಲಿ ಆಶ್ರಯ ಪಡೆಯುತ್ತಾಳೆ. ಉಪಜೀವನಕ್ಕೆ ಅನ್ಯರ ಮನೆಯಲ್ಲಿ ಕೆಲಸಕ್ಕೆ ನಿಲ್ಲುತ್ತಾಳೆ. ಕೆಲಸಕ್ಕಿದ್ದ ಮನೆಯ ಒಡೆಯನ ಕಣ್ಣು ಕಮಲೆಯ ಮೇಲೆ ಬಿದ್ದು ಅವನಿಂದ ಅತ್ಯಾಚಾರಕ್ಕೆ ಒಳಗಾಗುವ ಸಂದರ್ಭ ಬಂದರೂ ಪಾರಾಗುತ್ತಾಳೆ.

ಶಿವಲೆಂಕ ರಾಯಚೂರು ಅವರ 'ನಿರಾಶ್ರಿತೆ' ಕಥೆಯಲ್ಲಿಯೂ ಜಾತಿಗಲಭೆಗಳ ಚಿತ್ರಣ ಇದೆ. ನವಖಾಲಿ ಊರಲ್ಲಿ ಜಾತಿಗಲಭೆಗೆ ಸಿಕ್ಕ ಹಿಂದೂಗಳು ಭಾರತಕ್ಕೆ ಬಂದು ನೆಲೆ

ಪಡೆಯುತ್ತಿದ್ದರು. ಕುಟುಂಬ ಒಂದರಿಂದ ತಪ್ಪಿಸಿಕೊಂಡ ಶೀಲ ಎಂಬ ಮಹಿಳೆ ಅನಿವಾರ್ಯವಾಗಿ ಜೋಶಿ ಎಂಬುವವನ ಮನೆಯಲ್ಲಿ ಕೆಲಸಕ್ಕೆ ನಿಂತು ನೆಲೆ ಪಡೆಯುತ್ತಾಳೆ. ಆದರೆ ಜೋಶಿಯಿಂದಲೇ ಅತ್ಯಾಚಾರಕ್ಕೆ ಬಲಿಯಾಗಿ ಸಾಯುತ್ತಾಳೆ. ಎಲ್ಲಿ ತಮ್ಮ ಮಾನರಕ್ಷಣೆಗೆ ಕುತ್ತು ಬಂದಿತ್ತೋ, ಅಲ್ಲಿಂದ ತಪ್ಪಿಸಿಕೊಂಡು ಬಂದು ಮಾನ ರಕ್ಷಣೆ ಮಾಡಿಕೊಂಡಿದ್ದರು. ಆದರೆ ರಕ್ಷಣೆ ನೀಡುವವರಿಂದಲೇ ಮಾನಾಪಹರಣಕ್ಕೆ ಒಳಗಾಗುವ ದುರಂತವನ್ನು ಈ ಕತೆಗಳು ಬಿಂಬಿಸಿವೆ.

ಕುಸುಮಾಕರ ದೇಸಾಯಿ ಅವರ 'ಟೊಳ್ಳು ಬುರುಜು' ಕಥೆಯಲ್ಲಿ ಇನ್ನೊಂದು ಮುಖವಿದೆ. ದಿಲ್ಲಿಯ ಟಾಂಗಾವಾಲ ರಾಮಸಿಂಗನಿಗೆ ತನ್ನ ಮನೆ–ಮಕ್ಕಳಿಂದ ಸಂಸಾರ ನಿಭಾಯಿಸುವುದು ಅಸಾಧ್ಯವಾಗಿರುತ್ತದೆ. ಹೇಗೆ ದುಡಿದರೂ ಟಾಂಗಾ ದಂಧೆಯಿಂದ ಎಲ್ಲರ ಹೊಟ್ಟೆ ತುಂಬುತ್ತಿರಲಿಲ್ಲ. ಅವನಿಗೆ ಒಂದು ಸಮಯದಲ್ಲಿ ಮುಸ್ಲೀಂ ಅಧಿಕಾರಿ ಸಿಗುತ್ತಾನೆ. ರಾಮಸಿಂಗನ ಪ್ರಾಮಾಣಿಕ ವ್ಯಕ್ತಿತ್ವ ಕಂಡು ನೌಕರಿ ಕೊಡಲು ನಿರ್ಧರಿಸುತ್ತಾನೆ. ಇನ್ನೇನು ನೌಕರಿ ಸಿಕ್ಕು ಸಂಸಾರ ಸುಧಾರಿಸುತ್ತದೆ ಎನ್ನುವ ಹೊತ್ತಿನಲ್ಲಿ ದೇಶ ವಿಭಜನೆಯಾಗುತ್ತದೆ. ಮತೀಯ ಗಲಭೆಗಳು ನಡೆದು ರಾಮಸಿಂಗನ ಅಧಿಕಾರಿ ಗೋರಾಸಾಬರು ಡೆಲ್ಲಿ ತೊರೆದು ಪಾಕಿಸ್ತಾನಕ್ಕೆ ಹೋಗಿಬಿಡುತ್ತಾರೆ. ರಾಮಸಿಂಗನ ನೌಕರಿಯೂ ತಪ್ಪಿ ಹೋಗುತ್ತದೆ. ಜಾತಿ ಗಲಭೆಗೆ ಸಿಕ್ಕ ಕುಟುಂಬವೊಂದರ ದುರಂತ 'ಮುಂದೇನು' ಎಂಬ ವ್ಯಥೆ ಕಥೆಯಲ್ಲಿದೆ. ಜಯತೀರ್ಥ ರಾಜಪುರೋಹಿತ 'ಮುಂದೇನು' ಎಂಬ ಕಥೆಯಲ್ಲಿ ಬಂಗಾಲ ಪ್ರಾಂತ್ಯದ ರಾಜಶಾಹಿ ಎಂಬ ಹಳ್ಳಿಯು ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಪೂರ್ವ ಪಾಕಿಸ್ತಾನಕ್ಕೆ ಸೇರುತ್ತದೆ. ಇದರಿಂದ ತಲೆದೋರಿದ ಬಿಕ್ಕಟ್ಟುಗಳು ನೆಹರೂ–ಲಿಯಾಕತ್ ಒಪ್ಪಂದದಿಂದ ಕಡಿಮೆಯಾಗಿ ವಾತಾವರಣ ಸುಧಾರಿಸುತ್ತದೆ. ಮುಂದೆ ಕಾಶ್ಮೀರದಲ್ಲಿ ಪಾಕಿಸ್ತಾನಿ ಹಸ್ತಕರ ಹಿಂಸಾ ಕೃತ್ಯಗಳಿಂದ ಸಾಮಾನ್ಯ ಜನ ಬಲಿಯಾಗಬೇಕಾಗುತ್ತದೆ. ರಾಜಶಾಹೀ ಗ್ರಾಮದ ಕಾಲೀಚರಣನು ತನ್ನ ಮಗಳು ಮತ್ತು ಅಳಿಯನೊಂದಿಗೆ ದುಡಿದು ಬದುಕುವ ವ್ಯಕ್ತಿ. ಭಯೋತ್ಪಾದಕರ ಕೃತ್ಯಕ್ಕೆ ಅಳಿಯ ಬಲಿಯಾದಾಗ, ತಂದೆ ಮಗಳನ್ನು ಕರೆದುಕೊಂಡು ಭಾರತದ ಕಡೆ ಬರುತ್ತಾನೆ. ಸರಕಾರದ ನೆರವಿನಿಂದ ನಿರಾಶ್ರಿತರ ಪುನರ್ವಸತಿಯಲ್ಲಿ ಆಶ್ರಯಪಡೆದು ಪುನಃ ನೆಮ್ಮದಿಯ ಬದುಕನ್ನು ಕಂಡಂತಾದರೂ ಮಗಳ ಭವಿಷ್ಯದ ಬಗೆಗಿನ ಕೊರಗಲ್ಲೇ ಸಾಯುತ್ತಾನೆ. ವಿಧವೆಯಾದ ಮಗಳು ತಂದೆ ಸತ್ತ ನಂತರ ಯುವಕನೊಬ್ಬನನ್ನು ಕೂಡಲು ಪ್ರಯತ್ನಿಸುತ್ತಾಳೆ.

ಇಂಥದೇ ಸಮಸ್ಯೆಯ ಇನ್ನೊಂದು ಕಥೆ 'ಜಾನ್ ಷಣ್ಮುಗನ್'ನಲ್ಲಿದೆ. ಮದ್ರಾಸ್ ಪ್ರಾಂತ್ಯದಿಂದ ಪೆರಿಯಾಸ್ವಾಮಿ ತನ್ನ ಕುಟುಂಬದೊಂದಿಗೆ ಬರ್ಮಾಕ್ಕೆ ವಲಸೆ ಹೋಗುವನು. ಅಲ್ಲಿ ಆಂಗ್ಲ ಕಲೆಕ್ಟರರ ಸ್ಫೂರ್ತಿಯಿಂದ ಕ್ರಿಶ್ಚಿಯನ್ ಮತಕ್ಕೆ ಸೇರುತ್ತಾನೆ. ಬರ್ಮಾದಲ್ಲಿ ಭಾರತೀಯ ವಲಸೆಗಾರರನ್ನು ಹಿಂದೂ ಧರ್ಮದಿಂದ ಮತಾಂತರಗೊಳಿಸುತ್ತಾನೆ. ಅವನ ಮಗ ರತ್ನಸ್ವಾಮಿಗೆ ತಂದೆಯ ಕಾರ್ಯ ಹಿಡಿಸುತ್ತಿರಲಿಲ್ಲ. ಎರಡನೆಯ ಮಹಾಯುದ್ಧದ ಪರಿಣಾಮವಾಗಿ ಬರ್ಮಾ ಜಪಾನಿಯರ ವಶಕ್ಕೆ ಸೇರಿತು. ಬ್ರಿಟೀಶರನ್ನು ಭಾರತ ಬಿಡಿಸುವ ಸಿದ್ಧತೆಯಲ್ಲಿದ್ದ ಆಜಾದ್

ಹಿಂದ್ ಸೇನೆಯನ್ನು ರತ್ನಸ್ವಾಮಿ ಸೇರಿದಾಗ ಅವನ ತಂದೆ ಕೋಪಗೊಳ್ಳುತ್ತಾನೆ. ತನ್ನ ಅನ್ನದಾತರಾದ ಬ್ರಿಟೀಶರ ಪರವಾಗಿದ್ದರಿಂದ ಮನೆಯಲ್ಲಿ ತಾತ್ವಿಕ ಘರ್ಷಣೆ ಉಂಟಾಯಿತು. ಕದನದಲ್ಲಿ ಮಗ ಸತ್ತನು. ಬ್ರಿಟೀಶರು ಮರಳಿ ನಡೆದರು. ಬರ್ಮಾಕ್ಕೂ ಸ್ವಾತಂತ್ರ್ಯ ಬಂತು. ಇವು ಪೆರಿಯಾಸ್ವಾಮಿಗೆ ಪ್ರತಿಕೂಲವಾಗಿ ಪರಿಣಮಿಸಿದ್ದರಿಂದ ಚಿಂತೆಯಲ್ಲಿ ಸಾಯುತ್ತಾನೆ. ಈ ಕುಟುಂಬದ ಉಳಿದ ಕುಡಿ ರತ್ನಸ್ವಾಮಿಯ ಮಗ ಜಾನ್ ಷಣ್ಮುಗನು ಷಿನ್ ಎಂಬ ಬರ್ಮಾದ ಹುಡುಗಿಯನ್ನು ಪ್ರೀತಿಸುತ್ತಿದ್ದನು. ಆದರೆ ವಲಸೆ ಬಂದ ಭಾರತೀಯರನ್ನು ಬರ್ಮಾ ಸರಕಾರ ಹೊರಹಾಕಲು ತೀರ್ಮಾನಿಸಿತು. ಷಿನ್‌ಳನ್ನು ಬಿಟ್ಟು ಜಾನ್ ಹೋಗಬೇಕಾಯಿತು. ಅವಳನ್ನು ಕರೆದರೂ ಅವಳು ಬರ್ಮಾ ಬಿಟ್ಟು ಹೋಗಲು ನಿರಾಕರಿಸುತ್ತಾಳೆ. ಅಲ್ಲಿಂದ ಜಾನ್ ತಮಿಳುನಾಡಿಗೆ ಬರುತ್ತಾನೆ. ವಲಸೆ ಹೋದವರನ್ನು ಪುನಃ ನಾಡಿನೊಳಗೆ ಕರೆದುಕೊಳ್ಳುವುದಿಲ್ಲ. ಆಗ ಜಾನ್ ಕರ್ನಾಟಕದಲ್ಲಿ ಬಂದಿರಬೇಕಾಯಿತು. ಇಂಥ ವಲಸೆಗಾರರಿಗೆ ಪುನರ್ ವಸತಿ ಮತ್ತು ಉದ್ಯೋಗವನ್ನು ಕಲ್ಪಿಸಲಾಯಿತು. ವಾಸ್ತವದ ಸಂಗತಿಯೆಂದರೆ ಅದೇ ಸಮಯದಲ್ಲಿ ಪ್ರಾರಂಭವಾಗಿದ್ದ ತುಂಗಭದ್ರಾ ಅಣೆಕಟ್ಟು ಯೋಜನೆಗೆ ಈ ವಲಸೆಯನ್ನು ಬಳಸಿಕೊಳ್ಳಲಾಯಿತು. ಅಂದು ತುಂಗಭದ್ರಾ ಅಣೆಕಟ್ಟು ಯೋಜನೆಯಲ್ಲಿ ದುಡಿಯಲು ನಿಂತ ಈ ವಲಸಿಗರ ಕುಟುಂಬಗಳು ಅಲ್ಲೇ ನೆಲೆಯೂರಿ ನಿಂತವು. ಕಾಲಿಚರಣ್ ಮತ್ತು ಜಾನ್ ಷಣ್ಮುಗನ್ ಇಬ್ಬರೂ ಕರ್ನಾಟಕಕ್ಕೆ ಬಂದು ನೆಲೆಯೂರುತ್ತಾರೆ. ಭಾರತದ ನೆರೆರಾಜ್ಯಗಳು ಇಂಥ ವಲಸಿಗರನ್ನು ಸಹನೆಯಿಂದ ನೋಡಲಿಲ್ಲವೆಂದು ಅದರಲ್ಲೂ ಜಾನ್ ತನ್ನ ತಮಿಳುನಾಡಿಗೆ ಹೋದರೂ ಈ ಹಿಂದೆ ವಲಸೆ ಹೋದವನೆಂದು ಹೊರ ಹಾಕಲಾಗುತ್ತದೆ. ಕರ್ನಾಟಕದ ಔದಾರ್ಯ ಮತ್ತು ಸಹಬಾಳ್ವೆಯ ಸಂಗತಿಯನ್ನು ತೋರಿಸಲು ಈ ಕತೆಗಳಲ್ಲಿ ಜಯತೀರ್ಥ ರಾಜಪುರೋಹಿತರು ಪ್ರಯತ್ನಿಸಿದ್ದಾರೆ.

ಸ್ವಾತಂತ್ರ್ಯಪೂರ್ವದಲ್ಲಿ ರಾಜಕೀಯ ಕಾರಣಗಳಿಂದ ನಡೆದ ಯುದ್ಧಗಳು ದೇಶ, ಪ್ರಾಂತ್ಯ ವಿಭಜನೆಗಳು, ಮತಾಂತರಗಳು ಮುಂತಾದ ಅನೇಕ ಘಟನೆಗಳಿಂದ ಜನಸಮುದಾಯಗಳು ಸಾವು ನೋವಿನ ಬಿಕ್ಕಟ್ಟುಗಳನ್ನು ಎದುರಿಸಿವೆ. ಜಾತಿ, ಧರ್ಮ, ಭಾಷೆ, ದೇಶಕ್ಕಾಗಿ ಅನೇಕ ಗಲಭೆಗಳು ನಡೆದು ಕುಟುಂಬಗಳು ಅಸ್ತವ್ಯಸ್ಥಗೊಂಡಿವೆ. ಈ ಬಗೆಯ ಮತೀಯ ಗಲಭೆಗಳ ಹಿಂದೆ ರಾಜಕೀಯ ಹಿತಾಸಕ್ತಿಯ ಕೈವಾಡ ಇರುತ್ತದೆ. ಈ ಮತೀಯ ಗಲಭೆಗಳಿಗೆ ಸಿಕ್ಕು ಅತಂತ್ರರಾಗಿ ಸಾವು ನೋವಿಗೆ ಗುರಿಯಾಗುವವರು ಎಲ್ಲ ಜಾತಿಗಳಿಗೆ ಸೇರಿದವರಾಗಿರುತ್ತಾರೆ. ಇಂಥ ಸಂದರ್ಭದಲ್ಲಿ ಜನಸಮುದಾಯಗಳ ತಲ್ಲಣ ಮತ್ತು ಅವಸ್ಥೆಗಳು ಈ ಪ್ರದೇಶದ ಕಥೆಗಾರರನ್ನು ಕಾಡಿದವು. ಯಾಕೆಂದರೆ ಹೈದರಾಬಾದ್ ಕರ್ನಾಟಕ ಪ್ರಾಂತ್ಯವೇ ಇಂಥ ಬಿಕ್ಕಟ್ಟುಗಳಿಗೆ ಸಿಕ್ಕು ತತ್ತರಿಸುತ್ತಿತ್ತು. ಇಲ್ಲಿ ಅನುಭವಿಸಿದ ನೋವು ಕೂಡ ಇಂಥ ಕತೆಗಳ ಸೃಷ್ಟಿಗೆ ಕಾರಣವಾಯಿತು.

### ೭.೨. ರಜಾಕಾರರ ದಾಳಿ ಮತ್ತು ಜನಸಮುದಾಯಗಳು

೧೯೪೭ರಲ್ಲಿ ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ಬಂದು, ಬ್ರಿಟೀಶರ ಸಹಮತದೊಂದಿಗೆ

ಸ್ವತಂತ್ರವಾಗಿದ್ದ ಅನೇಕ ಸಂಸ್ಥಾನಗಳೂ ಸ್ವತಂತ್ರ ಭಾರತದಲ್ಲಿ ಸೇರಿಕೊಂಡವು. ಆದರೆ 'ಹೈದರಾಬಾದ್ ಸಂಸ್ಥಾನ'ವನ್ನು ಆಳುತ್ತಿದ್ದ ನಿಜಾಮನು ಇದಕ್ಕೆ ಸಮ್ಮತಿಸದೆ ಸ್ವತಂತ್ರವಾಗಿಯೇ ಮುಂದುವರಿಯಲು ನಿಶ್ಚಯಿಸಿದ. ಸಂಸ್ಥಾನದ ಪ್ರಜೆಗಳು ನಿಜಾಮನ ಆಳ್ವಿಕೆಯನ್ನು ಒಪ್ಪದೆ ವಿಮೋಚನಾ ಹೋರಾಟ ಪ್ರಾರಂಭಿಸಿದರು. ನಿಜಾಮನ ಆಳ್ವಿಕೆಯನ್ನು ಸ್ಥಿರಗೊಳಿಸಲು ಬೆಂಬಲವಿತ್ತು ಅನೇಕ ಸಂಘ ಸಂಸ್ಥೆಗಳು ಹೈದರಾಬಾದಿನಲ್ಲಿ ಹುಟ್ಟಿಕೊಂಡವು. ಸಂಸ್ಥಾನದ ತುಂಬ ಅವು ವಿಸ್ತಾರಗೊಂಡವು. 'ಹೈದರಾಬಾದ್ ಸಂಸ್ಥಾನ' ಸ್ವತಂತ್ರವಾಗಿರಬೇಕು. ಅದನ್ನು ನಿಜಾಮರು ಆಳಬೇಕು ಎಂಬ ನಿಲುವು ಈ ಸಂಘಸಂಸ್ಥೆಗಳದಾಗಿತ್ತು. ಕಾಶಿಂರಜ್ವಿ ಎಂಬ ವ್ಯಕ್ತಿ ನಿಜಾಮನ ಬೆಂಬಲದೊಂದಿಗೆ 'ರಜಾಕಾರರ' ಒಂದು ಪಡೆಯನ್ನೇ ಕಟ್ಟಿದ್ದನು. ಅವನು ಎಲ್ಲ ಸಂಘ-ಸಂಸ್ಥೆಗಳ ಶಕ್ತಿಯನ್ನು ಬಳಸಿಕೊಂಡು ವಿಮೋಚನೆಗಾಗಿ ಹೋರಾಡುವವರ ಮೇಲೆ ದಾಳಿ ನಡೆಸಿದನು. ಅಲ್ಲದೇ ಸ್ಥಳೀಯ ಮುಸ್ಲೀಮರಲ್ಲಿ ಮತೀಯ ಭಾವನೆಯನ್ನು ಹೆಚ್ಚಿಸಿದನು. ರಾಜಕೀಯ ಬೆಂಬಲದಿಂದ ಸಂಸ್ಥಾನದಲ್ಲೆಲ್ಲ ಮತಾಂತರಕ್ಕೆ ಪ್ರಚೋದಿಸಿದನು. ವಿಮೋಚನೆಗಾಗಿ ಹೋರಾಡಲು ನಿಂತವರಿಗೆ ಹಿಂಸಿಸತೊಡಗಿದನು. ಇದರಿಂದ ಸಂಸ್ಥಾನದ ಪ್ರಜೆಗಳು ಹೋರಾಟವನ್ನು ಗಂಭೀರವಾಗಿ ಪರಿಗಣಿಸಿ ತೀವ್ರಗೊಳಿಸಿದರು. ರಜಾಕಾರರು ಇಡೀ ಸಂಸ್ಥಾನದ ತುಂಬ ಹಬ್ಬಿ ಜನರ ಮೇಲೆ ದೌರ್ಜನ್ಯ ನಡೆಸಿದರು. ಇದರಲ್ಲಿ ಪಠಾಣರು, ಮತೀಯ ಶಕ್ತಿಗಳು, ಸಮಯ ಸಾಧಕರು ಸೇರಿಕೊಂಡು ಹಳ್ಳಿಹಳ್ಳಿಗಳಲ್ಲಿ ಅಮಾಯಕರ ಮೇಲೆ ದಾಳಿ ನಡೆಸಿದರು. ದರೋಡೆ, ಹೆಂಗಸರ ಮೇಲೆ ಅತ್ಯಾಚಾರ, ಕೊಲೆಗಳು ದಿನನಿತ್ಯ ಸಾಮಾನ್ಯ ಎನಿಸಿದವು. ಜನರಿಗೆ ಬದುಕು ಜೀವನ್ಮರಣದ ಪ್ರಶ್ನೆಯಾಗಿ ಕಾಡಿತು. ಆಗ ಜನರು ಸಾಮೂಹಿಕ ಹೋರಾಟಕ್ಕೆ ನಿಂತರು. ಇಂಥ ಪರಿಸ್ಥಿತಿಯನ್ನು ಅರಿತು ಸ್ವತಂತ್ರ ಭಾರತದ ಸರಕಾರ ಈ ಸಂಸ್ಥಾನದ ಬಿಕ್ಕಟ್ಟನ್ನು ಪರಿಹರಿಸಲು ಸೈನ್ಯವನ್ನು ಕಳಿಸಿತು. ಈ ಸೈನ್ಯ ದಾಳಿಕೋರರನ್ನು ಬಗ್ಗುಬಡಿದು ಸಂಸ್ಥಾನದಲ್ಲಿ ಪರಿಸ್ಥಿತಿಯನ್ನು ತಿಳಿಗೊಳಿಸಿತು. ಇದು ತನ್ನ ಸ್ವರೂಪದಲ್ಲಿ 'ಹಿಂದೂ-ಮುಸ್ಲೀಂ' ಹೋರಾಟ ಎಂಬುದು ನಿಜವಾದರೂ, ಇದರ ಒಳಗೆ ಅನೇಕ ಶಕ್ತಿಗಳು ಸೇರಿದ್ದವು. ಎರಡೂ ಸಮುದಾಯಗಳು ಸಾವು-ನೋವನ್ನು ಅನುಭವಿಸಿದವು. ೧೯೪೮ ಸೆಪ್ಟೆಂಬರ್, ೧೭ರ ವರೆಗೆ ನಡೆದ ಈ ಗಲಭೆಯಿಂದ ಹೈದರಾಬಾದ್ ಕರ್ನಾಟಕ ನಲುಗಿ ಹೋಗಿತ್ತು.

೬೦ ವರ್ಷಗಳ ಹಿಂದೆ ಈ ಪ್ರದೇಶದಲ್ಲಿ ನಡೆದ ರಜಾಕಾರರ ದಾಳಿಗೆ ಅದರ ದೌರ್ಜನ್ಯಕ್ಕೆ ಸಿಕ್ಕು ಹಿಂಸೆಯನ್ನು ಅನುಭವಿಸಿದ ಹಳ್ಳಿಗಳಿಲ್ಲ. ಇಂದಿಗೂ ಈ ಸಂದರ್ಭದಲ್ಲಿ ಸಂಭವಿಸಿದ ಸಾವು-ನೋವುಗಳನ್ನು ಕುರಿತು ಜನ ನೆನಪಿಸಿಕೊಳ್ಳುತ್ತಾರೆ. ತಮ್ಮ ತಮ್ಮ ಹಳ್ಳಿಗಳಲ್ಲಿ ನಡೆದ ಘಟನೆಗಳನ್ನು ಪುರಾಣ ಕಾಲದ ಕಥೆಗಳಂತೆ ಹೇಳುತ್ತಾರೆ. ಈ ಭಾಗದ ಅನೇಕ ಸಾಹಿತಿಗಳೂ ಈ ಹೋರಾಟದಲ್ಲಿ ಪಾಲ್ಗೊಂಡಿದ್ದಾರೆ. ಕುತೂಹಲದ ವಿಷಯವೆಂದರೆ ಇಂಥ ಚಾರಿತ್ರಿಕ ಸನ್ನಿವೇಶವನ್ನು ಕುರಿತು ಗಂಭೀರವಾಗಿ ಬರೆಯಲಾರದೇ ಇರುವುದು. ಒಂದು ನಾಡಿನ ಜನಸಮುದಾಯಗಳನ್ನು ಕಲಕಿದಂಥ ಘಟನೆಗಳನ್ನು ಕುರಿತು 'ಮಾಡಿ ಮಡಿದವರು', 'ಚಿರಸ್ಮರಣೆ',

ಮುಂತಾದ ಕಾದಂಬರಿಗಳು ಕನ್ನಡದಲ್ಲಿ ಬಂದಿವೆ. ಆದರೂ ಹೈದರಾಬಾದ್ ಕರ್ನಾಟಕದ ಅನೇಕ ಲೇಖಕರು ರಜಾಕಾರ ದಂಗೆ ಕುರಿತು ಬರೆಯಲು ಪ್ರಯತ್ನಿಸಿದ್ದಾರೆ. ಇಂಥ ಚಾರಿತ್ರಿಕ ಸನ್ನಿವೇಶವನ್ನು ಕುರಿತು ತಕ್ಕಮಟ್ಟಿಗೆ ಶಿವಲೆಂಕ, ಶಾಂತರಸ, ರಾಜಪುರೋಹಿತ ಮುಂತಾದವರು ಪ್ರಯತ್ನಿಸಿದ್ದಾರೆ. ರಜಾಕಾರರ ದಾಳಿಯನ್ನೆ ಕೇಂದ್ರವಾಗಿಟ್ಟುಕೊಂಡು ಹಳೇ ಮೈಸೂರು ಪ್ರಾಂತ್ಯದ ಮಾಸ್ತಿ 'ಸುಶೀಲಾ, ರಜಾಕಾರ್', ಲಂಕೇಶ್ 'ದಾಳಿ' ಎಂಬ ಕಥೆಯನ್ನು ಬರೆದಿರುವುದು ಕುತೂಹಲ ಎನಿಸುತ್ತದೆ. ಇವರೆಲ್ಲರ ಕಥೆಗಳು ಈ ಚಾರಿತ್ರಿಕ ಸಂದರ್ಭವನ್ನು ಗ್ರಹಿಸಿದ ಕ್ರಮ ಮತ್ತು ಅದರ ಸ್ವರೂಪವನ್ನು ಅರಿಯಲು ಸಹಾಯಕವಾಗಿವೆ.

ಭಾರತದ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟ ಆಕಸ್ಮಿಕವಲ್ಲ. ಆದರೆ ಹೈದರಾಬಾದ್ ಕರ್ನಾಟಕ ವಿಮೋಚನೆಗಾಗಿ ನಿಜಾಂ ಆಳ್ವಿಕೆಯ ವಿರುದ್ಧದ ಹೋರಾಟದ ನಡುವೆ ಬಂದ ರಜಾಕಾರರು ಮತ್ತು ಅವರ ದಾಳಿ ಆಕಸ್ಮಿಕವಾದದ್ದು. ಈ ಆಕಸ್ಮಿಕ ಸಂದರ್ಭವನ್ನು ಉಪಯೋಗಿಸಿ ಕೊಂಡವರು ಸಮಯ ಸಾಧಕರು ಮತ್ತು ರಾಜಕೀಯ ಬೆಂಬಲ ಪಡೆದ ಮತೀಯ ಶಕ್ತಿಗಳು ಎಂಬುದನ್ನು ಈ ಕಥೆಗಳು ತಿಳಿಸುತ್ತವೆ. ಮುಸ್ಲೀಂ ಆಳ್ವಿಕೆಯನ್ನು ಕೊನೆಗೊಳಿಸಲು ಸಂಸ್ಥಾನದ ಪ್ರಜೆಗಳು ಹೋರಾಟ ನಡೆಸಿದರು ಎಂಬುದು ನಿಜ. ಆದರೆ ಅದನ್ನು 'ಹಿಂದು ಮತ್ತು ಮುಸ್ಲೀಂ ನಡುವಿನ ಹೋರಾಟ' ಎಂದರೆ ಸರಳೀಕರಣವಾಗುತ್ತದೆ. ಎಲ್ಲ ಮುಸ್ಲೀಮರು ನಿಜಾಮ್ ಆಳ್ವಿಕೆಯನ್ನು ಬೇಕು ಎನ್ನಲಿಲ್ಲ. ಎಲ್ಲ ಹಿಂದುಗಳು ನಿಜಾಮ್ ಆಳ್ವಿಕೆ ಬೇಡ ಎನ್ನಲಿಲ್ಲ ಎಂಬುದೇ ಬಹುಮುಖ್ಯ ಸಂಗತಿಯಾಗಿದೆ. ಇದಕ್ಕೆ ಚರಿತ್ರೆಯ ದಾಖಲೆಗಳಲ್ಲೂ ಸಾಹಿತ್ಯ ಕೃತಿಗಳಲ್ಲೂ ಬೇಕಾದಷ್ಟು ಆಧಾರಗಳಿವೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಅನೇಕ ಭೂ ಮಾಲೀಕರು ಬ್ರಿಟೀಶರ ಜೊತೆಗೆ ಇದ್ದಂತೆ ರಜಾಕಾರರ ದಾಳಿಯ ಸಂದರ್ಭದಲ್ಲಿಯೂ ನಿಜಾಮನ ಪರವಾಗಿದ್ದು ಸುರಕ್ಷವಾಗಿದ್ದರು. ಜನ ಸಾಮಾನ್ಯರು ಮಾತ್ರ ಬಲಿಯಾಗುತ್ತಿದ್ದರು.

ಶಿವಲೆಂಕ ರಾಯಚೂರು ಅವರ 'ಕತ್ತಲೆಯಲ್ಲಿ ಬೆಳಕು' ಕಥೆಯು ಈ ಚಾರಿತ್ರಿಕ ಸಂದರ್ಭದಲ್ಲಿ ಹೈದರಾಬಾದ್ ನಗರದಲ್ಲಿ ಜರುಗಿದ ಅನೇಕ ಸಂಗತಿಗಳ ಚಿತ್ರಣವನ್ನು ಒಳಗೊಂಡಿದೆ. ಒಂದೇ ಕಂಪನಿಯಲ್ಲಿ ದುಡಿಯುವ, ಅನೇಕ ಜಾತಿಗಳಿಗೆ ಸೇರಿದ ಕಾರ್ಮಿಕರ ಓಣಿಯಲ್ಲಿ ನಬಿಲಾಲನೂ ಗಂಗಾರಾಮನೂ ತಮ್ಮ ತಮ್ಮ ಕುಟುಂಬಗಳ ಜೊತೆಗಿದ್ದರು. ದುಡಿದು ತಿನ್ನುವ ಈ ಕಾರ್ಮಿಕರಿಗೆ ಹೈದರಾಬಾದ್ ನಗರದಲ್ಲಿ ಯಾವ ಚಳವಳಿ, ಹೋರಾಟ, ಗಲಭೆಗಳು ನಡೆದರೂ ಅವು ಅವುಗಳ ಪಾಡಿಗೆ ನಡೆಯುತ್ತಿದ್ದವು. ಅದರ ಬಿಸಿ ನೇರವಾಗಿ ತಟ್ಟುತ್ತಿರಲಿಲ್ಲ. ತಟ್ಟಿದರೂ ಅವರು ಅದರಲ್ಲಿ ಪಾಲ್ಗೊಳ್ಳುತ್ತಿರಲಿಲ್ಲ. ದುಡಿದರೆ ಮಾತ್ರ ಅನ್ನ ಕಾಣುವ ಈ ಜನರು ಅನಗತ್ಯವಾಗಿ ಯಾವುದರಲ್ಲೂ ಸೇರುತ್ತಿರಲಿಲ್ಲ. ನಿಜಾಮನ ಆಳ್ವಿಕೆಯ ಪರ-ವಿರುದ್ಧ ನಡೆದ ಹೋರಾಟದಲ್ಲಿ ನಬಿಲಾಲ ರಜಾಕಾರರ ಪಡೆಯಲ್ಲಿ ಸೇರುತ್ತಾನೆ. ತನ್ನ ಓಣಿಯ ಜನರಿಗೆ ಮತೀಯ ಭಾವನೆಗಳು ಕೆರಳುವಂತೆ ಮಾಡಲು ಪ್ರಯತ್ನಿಸುತ್ತಾರೆ. ಆದರೆ ಓಣಿಯ ಕಾರ್ಮಿಕರೆಲ್ಲ ನಬಿಲಾಲನ ವರ್ತನೆಯನ್ನು ಖಂಡಿಸಿ ಅವನನ್ನು ಓಣಿಯಿಂದ ಹೊರ ಹಾಕುತ್ತಾರೆ. ಅವನು ಬಿತ್ತಿದ್ದ

ಮತೀಯ ಭಾವನೆಗಳಿಗೆ ಪ್ರಚೋದನೆ ಸಿಗುವಂತೆ ನಗರದಲ್ಲೆಲ್ಲ ಅಂಥ ವಾತಾವರಣ ಮೂಡತೊಡಗಿತ್ತು. ಗಂಗಾರಾಮನಂತವರು ಅದನ್ನು ಸುಧಾರಿಸಲು ಹೋದರೂ ಓಣಿಯಲ್ಲಿ ಹಿಂದೂ–ಮುಸ್ಲೀಂ ಎಂಬ ಭಾವನೆ ಜಾಗೃತಿಯಾಗಿತ್ತು. ನಬಿಲಾಲ ಕಂಪನಿಯ ಮಾಲೀಕ ಮುಸ್ಲೀಮನಾಗಿದ್ದ ಕಾರಣ ಅವನನ್ನು ಬೆದರಿಸಿ, 'ರಾಜ್ಯ ನಮ್ಮದು, ಪ್ರಭುತ್ವ ನಮ್ಮದು' ಎಂದು, ಹಿಂದೂ ಕೂಲಿಕಾರರನ್ನು ಕೆಲಸದಿಂದ ಹೊರಹಾಕಲು ಒತ್ತಾಯಿಸುತ್ತಾನೆ. ಗಂಗಾರಾಮನಂಥ ಮುಸ್ಲೀಮೇತರರಿಗೆ ಅನ್ನದ ಬಿಕ್ಕಟ್ಟು ಎದುರಾಗುತ್ತದೆ. ಅನಿವಾರ್ಯವಾಗಿ ಹೋರಾಟಕ್ಕೆ ನಿಲ್ಲುತ್ತಾರೆ. ಹಿಂದೂ–ಮುಸ್ಲೀಂ ಕೂಲಿಕಾರರ ನಡುವೆ ಕಂಪೆನಿಯಲ್ಲಿ ಕದನವೆ ನಡೆದು ರಕ್ತ ಹರಿಯುತ್ತದೆ. ಸಾವು–ನೋವು ಸಂಭವಿಸಿ ಅದರಲ್ಲಿ ಕಂಪೆನಿಯ ಮಾಲಿಕನೆ ಗಾಯಗೊಂಡು ನೆಲಕ್ಕೆ ಉರುಳುತ್ತಾನೆ. ನಬಿಲಾಲ ತಪ್ಪಿಸಿಕೊಂಡು ಎಲ್ಲ ಕಾರ್ಮಿಕರು ಒಂದಾಗಿರುವಂತೆ ಮನವಿ ಮಾಡಿಕೊಳ್ಳುತ್ತಾನೆ. ರಜಾಕಾರರನ್ನು ಸಂಘಟಿಸಿದ ಚಾರಿತ್ರಿಕ ವ್ಯಕ್ತಿ ಕಾಶೀಂ ರಜ್ವಿಯನ್ನು ಪ್ರತಿನಿಧಿಸುವಂತೆ ಕಾಣುವ ನಬಿಲಾಲ ತನ್ನ ಸ್ವಾರ್ಥ ಮತ್ತು ಮತೀಯತೆಗಳಿಂದ ಜನಸಮುದಾಯವನ್ನೇ ಒಡೆದು, ಕೋಮು ಭಾವನೆಯನ್ನು ಕೆರಳಿಸಿ, ರಕ್ತಪಾತಕ್ಕೆ ಕಾರಣನಾಗುತ್ತಾನೆ. ಸಣ್ಣಪುಟ್ಟ ಘಟನೆಗಳಿಗೆ ಸಮಯ ಸಾಧಕರು ರಾಜಕೀಯವನ್ನು ತಗಲಿಸಿ ಗಲಭೆಗಳಿಗೆ ಬಿಸಿ ಮೂಡಿಸುವ ಹಾಗೂ ಇದರಿಂದ ಅಮಾಯಕರು ಬಲಿಯಾಗುವ ಸನ್ನಿವೇಶಗಳ ಚಿತ್ರಣ ಈ ಕಥೆಯಲ್ಲಿದೆ.

ಶಾಂತರಸರ 'ಬಡೇಸಾಬು ಪುರಾಣ' ಎಂಬ ಕಥೆ ಒಂದು ಹಳ್ಳಿಯನ್ನು ಕೇಂದ್ರವಾಗಿಟ್ಟು ಕೊಂಡಿದೆ. ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ರಜಾಕಾರರು ಹೇಗೆ ಹುಟ್ಟಿಕೊಂಡರು? ಅವರ ಗುರಿ ಯಾವುದಿತ್ತು? ಅದನ್ನು ತಲುಪಲು ನಡೆಸಿದ ಕಾರ್ಯಗಳ ಸ್ವರೂಪ ಎಂಥದ್ದು? ಅದರ ಪರಿಣಾಮವೇನಾಯಿತು ಎಂಬ ಚಿತ್ರಣ ಈ ಕಥೆಯಲ್ಲಿದೆ. ಊರಿಗೆ ಬಡೇಸಾಬನೆಂಬ ವ್ಯಕ್ತಿ ಹತ್ತಿ ವ್ಯಾಪಾರಕ್ಕೆ ಬಂದು ನೆಲೆಯೂರುತ್ತಾನೆ. ಆರ್ಥಿಕವಾಗಿ ಗಟ್ಟಿಯಾದಂತೆ, ಅಲ್ಲಿಯವರೆಗೆ ಗೌಡ, ಸಾಹುಕಾರರ ಹಿಡಿತದಲ್ಲಿದ್ದ ಕೆಳವರ್ಗದ ಜನ ಬಡೇಸಾಬನ ಕಡೆ ವಾಲುತ್ತಾರೆ. ದುಡಿದು ತಿನ್ನುವವರಿಗೆ ಬಡೇಸಾಬನ ಸಣ್ಣಪುಟ್ಟ ಆಮಿಷಗಳು ಆಕರ್ಷಿತವಾಗುತ್ತವೆ. ಬಡೇಸಾಬ ಇದ್ದಕ್ಕಿದ್ದ ಹಾಗೆ ತನ್ನ ಜಾತಿಯವರನ್ನೇ ಕರೆದು, 'ನಮ್ಮದು ಆಳುವ ಜಾತಿ, ರಾಜ ನಮ್ಮವ, ದೇಶ ನಮ್ಮದು, ನಾವು ಯಾರಿಗೂ ತಲೆ ಬಗ್ಗಿಸಬಾರದು, ನಮ್ಮ ಧರ್ಮ ಶ್ರೇಷ್ಠವಾದ ಧರ್ಮ, ಇದಕ್ಕಾಗಿ ಪ್ರಾಣ ಕೊಡಬೇಕು' ಎಂದು ಮತೀಯ ಭಾವನೆಯನ್ನು ಪ್ರಚೋದಿಸುವಂತೆ ಮಾತನಾಡುತ್ತಾನೆ. ಇದು ಒಡೆದು ಆಳುವ ನೀತಿಯೆಂದು ಮುಲ್ಲಾ ರಸೂಲ್ ಸಾಬನಿಗೆ ಅನ್ನಿಸುತ್ತದೆ. ಬಡೇಸಾಬನ ರಾಜಕೀಯ ಪ್ರೇರಿತ ಮಾತನ್ನು ಊರ ಮುಸ್ಲೀಮರು ಸ್ವೀಕರಿಸಲು ಸಿದ್ಧರಾಗಲಿಲ್ಲ. ಆದರೆ ಆರ್ಥಿಕವಾಗಿ ದುರ್ಬಲವಿರುವ ಅನೇಕರು ಬಡೇಸಾಬ ಕೊಡುವ ಅಲ್ಪಸ್ವಲ್ಪ ಸವಲತ್ತಿಗಾಗಿ ಅವನನ್ನು ಬೆಂಬಲಿಸುತ್ತಾರೆ. ಸಾಹುಕಾರ, ಗೌಡ ಮತ್ತಿತರರ ನಡುವಿನ ವೈಶಮ್ಯಗಳಿಂದ ತಮಗರಿವಿಲ್ಲದಂತೆ ಬಡೇಸಾಬನನ್ನು ಬೆಂಬಲಿಸುವುದು ಮಾಡುತ್ತಾರೆ. ಇದರಲ್ಲೂ ಒಡೆದು ಆಳುವ ಬಡೇಸಾಬನ ಕೈ ಇದ್ದೇ ಇರುತ್ತದೆ. ಇದರಿಂದ ಊರು ದುರ್ಬಲವಾಗುತ್ತ

ಹೋಗುತ್ತದೆ. ಬಡೇಸಾಬನ ಹೆಂಡ, ಸರಾಯಿ, ಮಾಂಸದ ವ್ಯಾಪಾರ ಆರಂಭವಾದಾಗ ಅದನ್ನು ಒಗ್ಗಟ್ಟಿನಿಂದ ಎದುರಿಸಲು ಯಾರಿಗೂ ಸಾಧ್ಯವಾಗುವುದಿಲ್ಲ. ಗೌಡ, ಸಾಹುಕಾರರ ಕೈಕೆಳಗಿರುವ ಜನರೆಲ್ಲ ಬಡೇಸಾಬನ ಕಡೆಗೆ ಹೋಗಿರುತ್ತಾರೆ. ಈ ಬದಲಾವಣೆ ಸಹಜವೆ ಅನಿಸುತ್ತದೆ. ಅಲ್ಲಿಯವರೆಗೆ ಗೌಡ, ಸಾಹುಕಾರನ ಅಧೀನದಲ್ಲಿದ್ದ ಆರ್ಥಿಕವಾಗಿ ದುರ್ಬಲವಿದ್ದ ಜನ ಈಗ ಬಡೇಸಾಬನ ಅಧೀನದಲ್ಲಿರುತ್ತಾರೆ. ಈ ಬದಲಾವಣೆ ಹಣ ಮತ್ತು ಅಧಿಕಾರವನ್ನು ಅವಲಂಬಿಸಿರುತ್ತದೆ. ಇಂದಿನ ರಾಜಕೀಯದವರು ಚುನಾವಣಾ ಸಂದರ್ಭದಲ್ಲಿ ಹಣದ ಆಮಿಷ ತೋರಿಸಿ ಆಕರ್ಷಿಸುವಂತೆ. ಕೊನೆಗೆ ಕರ್ಯನ ಹೆಂಡತಿಯನ್ನು ಬಡೇಸಾಬ ಇಟ್ಟುಕೊಂಡರೂ ಅವನು ಸುಮ್ಮನಿರುತ್ತಾನೆ. ಇದಕ್ಕಿಂತ ಮೊದಲು ಸಾಬಣ್ಣನ ಜತೆಗಿದ್ದ ಬುಡ್ಡಮ್ಮ ಬಡೇಸಾಬನ ಅಧೀನಕ್ಕೆ ಬಂದಿರುತ್ತಾಳೆ. ಊರಿನ ಸ್ವಾಭಿಮಾನವನ್ನೇ ನಾಶ ಮಾಡುವ ಹಂತಕ್ಕೆ ಬಡೇಸಾಬ ಬೆಳೆದಿದ್ದಾನೆಂದು ಜನಕ್ಕೆ ಗೊತ್ತಾಗುವ ಹೊತ್ತಿಗೆ ರಜಾಕಾರರ ದಾಳಿ ಆರಂಭವಾಗುತ್ತದೆ. ಊರಿನವರಲ್ಲ ಒಗ್ಗಟ್ಟಿನಿಂದ ಬಡೇಸಬನ ವಿರುದ್ಧ ಹೋರಾಡಲು ಅಣಿಗೊಳ್ಳುತ್ತಾರೆ.

ಬಡೇಸಾಬ ಊರಲ್ಲಿ ತಾನು ದುರ್ಬಲವಾಗುತ್ತಿದ್ದೇನೆ ಅನ್ನಿಸಿದಾಗ ರಜಾಕಾರನಾಗಿ ಪುನಃ ಚಾಲ್ತಿಗೆ ಬರುತ್ತಾನೆ. ಅನೇಕ ಕೆಳವರ್ಗದವರನ್ನು ರಜಾಕರರನ್ನಾಗಿ ಮಾಡುತ್ತಾನೆ. ಊರಲ್ಲಿ ತನ್ನ ಬಗ್ಗೆ ಅಸಮಾಧಾನ ಇಟ್ಟುಕೊಂಡಿದ್ದವರ ಮೇಲೆ ದೌರ್ಜನ್ಯ ನಡೆಸುತ್ತಾನೆ. ಇಂಥ ಸಂದರ್ಭದಲ್ಲಿ ಊರಿನ ಆಂತರಿಕ ರಾಜಕೀಯವು ಎದ್ದು ನಿಲ್ಲುತ್ತದೆ. ಹಳೆ ಜಗಳ, ವೈಷಮ್ಯಗಳು ತಮ್ಮ ಸೇಡಿಗೆ ನೆಲೆಯನ್ನು ಒದಗಿಸಿಕೊಳ್ಳುತ್ತವೆ. ಅತ್ಯಾಚಾರಗಳು, ದರೋಡೆ, ಲೂಟಿ, ಕೊಲೆ ನಡೆದು ಊರು ತಲ್ಲಣಿಸುತ್ತದೆ. ಇದರಲ್ಲಿ ಬಡೇಸಾಬನ ಪಾಲೆಷ್ಟು? ಸಮಯ ಸಾಧಕರ ಪಾಲೆಷ್ಟು? ಅಂತಿಮವಾಗಿ ಸಿಕ್ಕು ಹಾಕಿಕೊಂಡವನು ಬಡೇಸಾಬನೆ. ಅಲ್ಲಿಯವರೆಗೆ ನಡೆದ ದೌರ್ಜನ್ಯದ ಸೇಡು ಬಡೇಸಾಬನ ಮೇಲೆ ತಿರುಗುತ್ತದೆ. ರಾಮವ್ವ, ನಾಗಲಿಂಗಿ ಮೇಲೆ ಅತ್ಯಾಚಾರ ಮಾಡಿದ್ದು ಯಾರು? ಬಡೇಸಾಬನಿಂದ ಬಿಡುಗಡೆಯಾಗುತ್ತಿದ್ದಂತೆ ಬುಡ್ಡಮ್ಮನನ್ನು ದಕ್ಕಿಸಿಕೊಳ್ಳಲು ಸಾಬಣ್ಣ, ಸಾಹುಕಾರ, ಕುಲಕರ್ಣಿ, ಯಂಕಪ್ಪ ಯತ್ನಿಸುವುದು ಇದೆಲ್ಲ ಏನನ್ನು ತೋರಿಸುತ್ತವೆ? ರಜಾಕಾರರ ದಾಳಿಯಲ್ಲಿ ಹಳ್ಳಿ, ಹಳ್ಳಿಗಳಲ್ಲಿ ಸಮಯ ಸಾಧಕರೆಲ್ಲ ಸೇರಿಕೊಂಡು ತಮಗೆ ಬೇಕಾದದ್ದನ್ನು ಈಡೇರಿಸಿಕೊಂಡರು. ನಂತರ ವಾತಾವರಣ ತಿರುವು ಮುರುವು ಆದಾಗ ಬರೀ ಮುಸ್ಲಿಮರು 'ಹಿಂದೂ'ಗಳ ದಾಳಿಗೆ ಸಿಕ್ಕು ಸಾವಿಗೀಡಾದರು.

ಈ ಕಥೆಯಲ್ಲಿ ಕರ್ಯ, ಉಪ್ಪಾರ ಜಂಗಲೆಪ್ಪ, ನಿಂಗಿ, ಕಬ್ಬೇರ ನಾರಾಯಣ, ಬುಡ್ಡಮ್ಮರಂಥ ಮುಸ್ಲಿಮೇತರರು, ದಸ್ತಗೀರಿ, ಅಬ್ದುಲ್ಲಾ, ಸಲೀಂ, ಕಾಜಾಸಾಬರಂಥ ಮುಸ್ಲಿಮರು ಬಡೇಸಾಬನ ಜೊತೆ ಸೇರಿ ರಜಾಕಾರರಾಗಿ ಊರಲ್ಲಿ ಮನ ಬಂದಂತೆ ಮೆರೆಯುತ್ತಾರೆ. ಮುಸ್ಲಿಮರಿರಲಿ, ಮುಸ್ಲಿಮೇತರಿರಲಿ ಇವರೆಲ್ಲ ಕೆಳವರ್ಗದವರು ಮತ್ತು ದಲಿತರು. ತಮ್ಮ ಜೀವನಾವಧಿಯೆಲ್ಲ ಗೌಡ, ಸಾಹುಕಾರ, ದೇಸಾಯಿರಂಥ ಉಳ್ಳವರ ಜೀತದಾಳುಗಳಾಗಿ ದುಡಿದೇ ಬದುಕಿದವರು. ಸಾಮಾಜಿಕವಾಗಿ, ಆರ್ಥಿಕವಾಗಿ ದುರ್ಬಲರು. ಅನೇಕ ಕಾರಣಗಳಿಂದ ದಮನಕ್ಕೆ ಒಳಗಾದವರು.

ಉಳ್ಳವರ ಮೇಲೆ ಇವರ ಸಿಟ್ಟು ಸೂಕ್ತವಾಗಿ ಇದ್ದೇ ಇರುತ್ತಿತ್ತು. ರಜಾಕಾರರ ದಾಳಿ ಶುರುವಾದಾಗ ಈ ಶೋಷಿತರಿಗೆ ಅವಕಾಶ ಸಿಕ್ಕಂತಾಯಿತು. ಬಡೇಸಾಬನ ಕಡೆ ಸೇರಿ ತಮ್ಮ ಆಕ್ರೋಶವನ್ನು ಉಳ್ಳವರ ಮೇಲೆ ವ್ಯಕ್ತಪಡಿಸಲು ಉಪಯೋಗಿಸಿಕೊಂಡರು. ಇಂಥ ಸ್ಥಿತಿಗೆ ಸಮಾಜದ ಒಟ್ಟು ಪರಿಸ್ಥಿತಿಗಳು ಕಾರಣವಾಗಿರುತ್ತವೆ. ಈ ಪರಿಸ್ಥಿತಿಗಳೆ ಮನುಷ್ಯನನ್ನು ನಿಯಂತ್ರಿಸುತ್ತವೆ.

ಈ ಸಂದರ್ಭದಲ್ಲಿ ಸ್ಥಳೀಯ ಮುಸ್ಲೀಮರು ರಜಾಕಾರರಾಗಿ ಊರಲ್ಲಿ ದೌರ್ಜನ್ಯ ನಡೆಸಿರುವುದು ಸತ್ಯ. ಇವರೂ ಸಮಯ ಸಾಧಕರೆ. ಸಮಯ ಸಾಧಕತನಕ್ಕೆ ಜಾತಿ ಅಡ್ಡ ಬರುವುದಿಲ್ಲ. 'ಉರಿದ ಬದುಕು' (ಶಾಂತರಸ) ಕಥೆಯಲ್ಲಿ ತಲತಲಾಂತರದಿಂದ ಊರಲ್ಲಿಯೇ ಬಾಳಿದ ಮುಸ್ಲೀಮರ ಮನೆತನದ ಕಾಶೀಮಲಿ ರಜಾಕಾರರ ದಾಳಿಯಲ್ಲಿ ಸೇರಿಕೊಂಡು ತನಗೆ ಬೇಡಾದವರನ್ನೆಲ್ಲ ಹಿಂಸಿಸುತ್ತಾನೆ. ಅವನ ಆಹಂಕಾರಕ್ಕೆ ಮಿತಿ ಇರುವುದಿಲ್ಲ. ಅಧಿಕಾರ ಮತ್ತು ಹಣ ಬಂದಾಗ ಮನುಷ್ಯ ವಿವೇಕ ಕಳೆದುಕೊಂಡರೆ ಎಂಥ ಕ್ರೂರಿಯಾಗುತ್ತಾನೆ ಎನ್ನುವುದಕ್ಕೆ ಕಾಶೀಮಲಿ ವರ್ತನೆಯೇ ಸೂಕ್ತ ಉದಾಹರಣೆಯಾಗಿದೆ. ಕಾಶೀಮಲಿ ರಜಾಕಾರರ ಜೊತೆಗೆ ಬಂದು ಕೆಲಸೆರ ರಾಚಪ್ಪನನ್ನು ಕರೆಸಿ ತನ್ನ ಟೊಂಕದ ಕೆಳಗಿನ ಕೂದಲನ್ನು ತೆಗೆಯಲು ಹೇಳುತ್ತಾನೆ. ಸ್ವಾಭಿಮಾನಿಯಾದ ರಾಚಪ್ಪ ನಿರಾಕರಿಸಿದಾಗ ಅವನನ್ನು ಒದ್ದು ಸಾಯಿಸುತ್ತಾನೆ. ರಾಚಪ್ಪನ ಮಗ ತಿಪ್ಪಣ್ಣನನ್ನೂ ಕೊಲ್ಲಲು ಪ್ರಯತ್ನಿಸುತ್ತಾನೆ. ಆದರೆ ತಿಪ್ಪಣ್ಣ ನಬೆಮ್ಮಳ ಮನೆಯಲ್ಲಿ ಅಡಗಿ ರಕ್ಷಣೆ ಪಡೆಯುತ್ತಾನೆ. ಕಾಶೀಮಲಿಯನ್ನು ನಬೆಮ್ಮ ತನ್ನ ಮನೆಯಲ್ಲಿ ಬಿಟ್ಟುಕೊಡುವುದಿಲ್ಲ. ತಿಪ್ಪಣ್ಣನ ರಕ್ಷಣೆಗಾಗಿ ತನ್ನ ಜೀವವನ್ನೇ ಬಲಿ ಕೊಡುತ್ತಾಳೆ. ಅದೇ ತಿಪ್ಪಣ್ಣನಿಗೆ ಅವನ ತಂಗಿ ಅನ್ನವ್ವಳ ಮನೆಯಲ್ಲಿ ಆಶ್ರಯ ಸಿಕ್ಕಿರಲಿಲ್ಲ. ತಂಗಿಯ ಗಂಡನು ರಜಾಕಾರನಾಗಿರುತ್ತಾನೆ. ಮುಸ್ಲೀಮನಾದ ಕಾಶೀಮಲಿ ರಜಾಕರನಾಗಿ ಊರನ್ನು ಹಿಂಸಿಸುತ್ತಾನೆ. ಮುಸ್ಲೀಮಳಾದ ನಬೆಮ್ಮ ಮುಸ್ಲೀಮೇತರನಾದ ತಿಪ್ಪಣ್ಣನಿಗಾಗಿ ಪ್ರಾಣಕೊಡುತ್ತಾಳೆ. ಕಾಶೀಮಲಿಯೇ ಅವಳ ಜೀವ ತೆಗೆಯುತ್ತಾನೆ.

ಸಮಯ ಸಾಧಕರು ರಜಾಕಾರರ ದಾಳಿಯಲ್ಲಿ ತಮ್ಮ ಸಾಧಕತನದಿಂದ ಎಲ್ಲಿಗೆ ತಲುಪುತ್ತಾರೆ ಎಂಬುದನ್ನು ನಾಯಿ ಮತ್ತು ಪಿಂಚಣಿ ಹಾಗೂ ಸ್ವಾತಂತ್ರ್ಯವೀರ (ಶಾಂತರಸ) ಕಥೆಯಲ್ಲಿ ಕಾಣಬಹುದು. ರಜಾಕಾರರ ದಾಳಿಯಲ್ಲಿ ಸ್ವಾಭಿಮಾನಿಗಳು ಹೋರಾಡಿ ಸಾವಿಗೀಡಾದರು. ಹೋರಾಡುವ ಧೈರ್ಯವಿಲ್ಲದ ಆದರೆ ರಜಾಕಾರರ ಜತೆ ಸೇರಿ ಅವರ ಜತೆ ಗುರುತಿಸಿಕೊಳ್ಳಲು ಜನಕ್ಕಂಜಿ ಮಧ್ಯಂತರ ಉಳಿದುಕೊಂಡು, ಗಲಭೆ ತೀವ್ರವಾದಾಗ ತಲೆಮರೆಸಿಕೊಂಡಿದ್ದು, ವಾತಾವರಣ ತಿಳಿಯಾದಾಗ ಇದ್ದಕ್ಕಿದ್ದಂತೆ ಕಾಣಿಸಿಕೊಂಡು ಹೋರಾಡಲು ಅಲ್ಲಿಗೆ ಹೋಗಿದ್ದೆ, ಇಂಥ ಸಾಹಸ ಮಾಡಿ ರಜಾಕಾರರನ್ನು ಬಗ್ಗು ಬಡಿದೆ ಎಂದು ಹೇಳಿಕೊಂಡು ಮುನ್ನೆಲೆಗೆ ಬಂದು ಮೆರೆದ ಅವಕಾಶವಾದಿಗಳೂ ಇದ್ದಾರೆ. 'ನಾಯಿ ಮತ್ತು ಪಿಂಚಣಿ' ಕಥೆಯಲ್ಲಿ, ಸಂಗಪ್ಪನು ರಜಾಕಾರರ ದಾಳಿಯನ್ನು ಎದುರಿಸಿ ಸತ್ತು ಹೋದ. ಅವನ ಗೆಳೆಯ ರಂಗಪ್ಪ ನೇರವಾಗಿ ರಜಾಕಾರರ ಜೊತೆ ಸೇರಲು ಅವನಿಗೆ ಧರ್ಯವಿಲ್ಲ. ಅವನು ಊರ ಜನರಿಗೆ ಅಂಜಿತ್ತದ್ದನು. ರಜಾಕಾರರಿಂದ ತೊಂದರೆಗೆ ಸಿಲುಕಿದ ಸಂಗಪ್ಪನಿಗೆ ರಂಗಪ್ಪ ಸಹಾಯ ಮಾಡಲು ನಿಂತಂತೆ

ಮಾಡುವನು. ಬಿಕ್ಕಟ್ಟಿನ ಪ್ರಸಂಗವನ್ನು ಅರಿತು ತಲೆಮರೆಸಿಕೊಳ್ಳುತ್ತಾನೆ. ವಾತಾವರಣ ತಣ್ಣಗಾಗುವ ಹೊತ್ತಿಗೆ ಸಂಗಪ್ಪ ಹೋರಾಟದಲ್ಲಿ ಮರಣ ಹೊಂದಿದ್ದ. ತಲೆಮರಿಸಿಕೊಂಡಿದ್ದ ರಂಗಪ್ಪ ಊರಲ್ಲಿ ಕಾಣಿಸಿಕೊಂಡು, ತಾನು ಮಾಡಿದ ಸಾಹಸಗಳನ್ನು ಅತಿ ರಂಜನೀಯವಾಗಿ ಎಲ್ಲರಿಗೂ ಹೇಳುತ್ತಾನೆ ತನ್ನ ಚೇಲಾಗಳಿಂದ ತನ್ನ ಸಾಹಸಗಳನ್ನು ಪ್ರಚಾರ ಮಾಡಿಸಿ, ಸ್ವಾತಂತ್ರ್ಯ ಹೋರಾಟಗಾರನೆಂದು ಕೊನೆಗೆ ಕಾಂಗ್ರೆಸ್‌ಗೆ ಸೇರಿ ದೇಶಭಕ್ತನಂತೆ ಪ್ರಚಾರ ಗಿಟ್ಟಿಸಿಕೊಳ್ಳುತ್ತಾನೆ. ಕೊನೆಗೆ ಚುನಾವಣೆಗೆ ನಿಂತು ಎಂ.ಎಲ್.ಎ. ಆಗುತ್ತಾನೆ. 'ಸ್ವಾತಂತ್ರ್ಯವೀರ' ಕಥೆಯ ಪರಪ್ಪನೂ ರಂಗಪ್ಪನಂತೆ ಮುನ್ನೆಲೆಗೆ ಬಂದಿದ್ದು ಕಾಣುತ್ತದೆ. ರಂಗಪ್ಪ ತನ್ನ ಗೆಳೆಯ ಸಂಗಪ್ಪನ ಹೆಂಡತಿ ಈರವ್ವಳನ್ನು ಲೈಂಗಿಕವಾಗಿ ಬಳಸಿಕೊಂಡದ್ದನ್ನು ನೋಡಿದರೆ ಪರಪ್ಪ ತನ್ನ ಗೆಳೆಯ ಸಿದ್ದಪ್ಪನ ಹೆಂಡತಿಯನ್ನು ಅತ್ಯಾಚಾರ ಮಾಡಿ ಸಾವಿಗೆ ತಳ್ಳಿಬಿಡುತ್ತಾನೆ. 'ನಾಯಿ ಮತ್ತು ಪಿಂಚಣಿ' ಕತೆಯಲ್ಲಿ ಬರುವ ಮೌಲನಾಯಕ, 'ಸ್ವಾತಂತ್ರ್ಯವೀರ' ಕಥೆಯಲ್ಲಿ ಬರುವ ಅಲ್ಲಿಸಾಬ ಇವರು ಸ್ಥಳೀಯ ಸಮಯಸಾಧಕರೇ. ರಜಾಕಾರರ ದಾಳಿಯಲ್ಲಿ, ನೇರವಾಗಿ ರಜಾಕಾರರಾಗಿ ಊರಿನಲ್ಲಿ ತಮ್ಮ ಕ್ರೌರ್ಯ ಮೆರೆಯುತ್ತಾರೆ. ಆದರೆ ರಂಗಪ್ಪ, ಪರಪ್ಪನಂಥವರು ಅತ್ತ ಹೋರಾಡದೆ, ಇತ್ತ ರಜಾಕಾರರ ಜತೆ ಬಹಿರಂಗವಾಗಿ ಗುರುತಿಸಿಕೊಳ್ಳದೆ, ರಜಾಕರರ ಜೊತೆ ಹೋರಾಡಿದಂತೆ ಮಾಡುವುದು, ಅದೇ ರಜಾಕಾರರ ಜತೆ ಗುಪ್ತವಾಗಿ ಸಖ್ಯ ಹೊಂದಿ, ಸ್ವಾತಂತ್ರ್ಯಾನಂತರ ಸೇರಿ ದೇಶಭಕ್ತರಾಗಿ, ಅಧಿಕಾರದ ಗದ್ದುಗೆಯನ್ನೇರಿ ನಿಲ್ಲುತ್ತಾರೆ. ಆದರೆ ಮೌಲಾನಾಯಕ ಅಲ್ಲಿಸಾಬನಂಥ ಹುಂಬರು ಪ್ರತಿದಾಳಿಯಲ್ಲಿ ದುರ್ಮರಣಕ್ಕೆ ಒಳಗಾಗುತ್ತಾರೆ. ಬಂಧುಗಳಾದ ರಾಘಣ್ಣ, ಆನಂದತೀರ್ಥರಿಂದ ಆಶ್ರಯ ಸಿಗುವುದಿಲ್ಲ. ಊರಿನ ಮಾನ ಕಾಪಾಡಬೇಕಾದ ಗೌಡ ರಜಾಕಾರರ ಜತೆಗಿದ್ದಾನೆ. ಹೊನ್ನೂರ ಸಾಹೇಬ ಮತ್ತು ನಂಬಿಯಣ್ಣ ಅಂಥವರಿಂದ ರಾಜಣ್ಣ ರಕ್ಷಣೆ ಪಡೆಯುತ್ತಾನೆ. ಹೊನ್ನೂರ ಸಾಹೇಬ, ನಂಬಿಯಣ್ಣರು 'ನೀವು ಮೊದಲು ಮನಸೇರ್ರಿ. ಆಮ್ಯಾಲೆ ಉಳಿದುದ್ದೆಲ್ಲ. ಮಳಿ ಬರತಿದ್ರ ದನ ತೋಯ್ಯಾರ್ದಂತ ನಮ್ಮ ಬಗಲಾಗೆ ದನಾನ ಕರಕಂಬರೋರು ನಾವು' ಎನ್ನುವನು. ಸಮಯ ಸಾಧಕರು, ಧೂರ್ತರು ಮಾನವೀಯತೆ ಕಳೆದುಕೊಂಡು ಸಮಯದ ಲಾಭ ಪಡೆಯಲೆತ್ನಿಸುವ ಮುಖಗಳ ನಡುವೆ, ಇಂಥವರ ಮಾನವೀಯತೆಯೆ ರಾಜಣ್ಣನನ್ನು ಬದುಕಿಸುತ್ತದೆ.

ಜಯತೀರ್ಥ ರಾಜಪುರೋಹಿತರ 'ಸಯಿದಾ ಸುಮತಿಯಾದಳು' ಕಥೆಯಲ್ಲಿ, ಸುಮತಿ ಆಕಸ್ಮಿಕ ಎಂಬಂತೆ ಮಸ್ತಾನ ಆಲಿಯ ಜತೆ ಸಂಪರ್ಕ ಬೆಳೆಸುತ್ತಾಳೆ. ಒಮ್ಮೆ ಜಾರಿದ ಮೇಲೆ ಪಶ್ಚಾತ್ತಾಪದಿಂದ ಫಲವಿಲ್ಲ ಎಂದು ಆಲಿಗೆ ನಿಷ್ಠಳಾಗಿರುತ್ತಾಳೆ. ರಜಾಕಾರರ ದಾಳಿಯ ಸಂದರ್ಭದಲ್ಲಿ ಮತ್ತು ನಿಜಾಮನ ಆಳ್ವಿಕೆಯಲ್ಲಿ ಬಲವಂತವಾಗಿ ಮತಾಂತರ ಹೊಂದಿದವರನ್ನು ಪುನಃ 'ಹಿಂದೂ' ಮತಕ್ಕೆ ಮರಳಲು ಸಹಾಯ ಮಾಡಲು ಬಂದಾಗಲೂ ಸುಮತಿ ಆಲಿಗೆ ನಿಷ್ಠಳಾಗಿರುತ್ತಾಳೆ. ಆದರೆ ಆಲಿ ಪಾಕಿಸ್ತಾನಕ್ಕೆ ಭಾರತದ ಮುಖ್ಯ ದಾಖಲೆಗಳನ್ನು ಕಳಿಸುವ

ಗುಪ್ತ ಕೆಲಸಕ್ಕೆ ಇಳಿದಾಗ ಸುಮತಿ ಅವನ ಸಮಯಸಾಧಕತನಕ್ಕೆ ಬೇಸತ್ತು ಪೊಲೀಸರಿಗೆ ಅವನನ್ನು ಒಪ್ಪಿಸಿ ತಾನು ಮರಣ ಹೊಂದುತ್ತಾಳೆ.

ಈ ಎಲ್ಲಾ ಕಥೆಗಳನ್ನು ಗಮನಿಸಿದರೆ ರಜಾಕಾರರ ಸಂದರ್ಭದಲ್ಲಿ ನಡೆದ ಹೋರಾಟ ಯಾರ ನಡುವೆ ನಡೆಯಿತು? ಯಾಕೆ ನಡೆಯಿತು? ಪ್ರಶ್ನೆಗಳಿಗೆ ಉತ್ತರ ಸರಳವಾಗಿಲ್ಲ. ಮಾಸ್ತಾರ ಮಹಮ್ಮದನ ಕುಟುಂಬವನ್ನು, ಯಾಕೆ ರಕ್ಷಿಸಬೇಕಾಗಿತ್ತು. ಈರವ್ವ ರಂಗಪ್ಪನ ಜೊತೆ ಯಾಕೆ ಹೋರಾಡಬೇಕಾಯಿತು, ಚೆನ್ನವ್ವ ಯಾಕೆ ಅತ್ಯಾಚಾರಕ್ಕೆ ಬಲಿಯಾಗಬೇಕಾಯಿತು. ನಬೆಮ್ಮ ಯಾಕೆ ಜೀವ ಕೊಡಬೇಕಾಯಿತು. ನಂಬಿಯಣ್ಣ ರಾಜಣ್ಣನನ್ನು ಯಾಕೆ ಉಳಿಸಬೇಕಾಯಿತು. ಎಂಬ ಪ್ರಶ್ನೆಗಳು ಹುಟ್ಟುತ್ತವೆ.

ಈ ಪ್ರದೇಶದ ಪ್ರಜೆಗಳು ನಿಜಾಮನ-ರಜಾಕಾರರ ವಿರುದ್ಧ ಹೋರಾಡುವ ಸಂದರ್ಭ ನಿರ್ಮಾಣವಾದದ್ದು ನಿಜ. ಆದರೆ ಹಳ್ಳಿಹಳ್ಳಿಗಳಲ್ಲಿ ನಡೆದ ಈ ಹೋರಾಟದ ಸ್ವರೂಪವನ್ನು ನೋಡಿದರೆ, ಸ್ವಾತಂತ್ರ್ಯ ಹೋರಾಟ, ವಿಮೋಚನೆಯ ಹೋರಾಟ ಧೂರ್ತರಿಗೆ ನೆಪವಾಯಿತು. ಮನುಷ್ಯನ ಕೆಟ್ಟ ಗುಣಗಳು ಪ್ರಕಟವಾದವು. 'ಅವಕಾಶ' ಮನುಷ್ಯನ ಗುಣವನ್ನು ಹೊರಹಾಕಬಲ್ಲದು ಎಂಬುದಕ್ಕೆ ಈ ಸಂದರ್ಭವೇ ನಿದರ್ಶನವಾಗಿದೆ. ರಜಾಕಾರರು ಹಳ್ಳಿಗೆ ದಾಳಿ ಮಾಡುತ್ತಾರೆ. ಆದರೆ ರಜಾಕಾರರ ನಿರೀಕ್ಷೆಯಲ್ಲಿಯೇ ಊರು ದಾಳಿಯನ್ನು ಆವಾಹಿಸಿಕೊಳ್ಳುತ್ತದೆ. ಊರ ಜನರ ಮನಸ್ಸು ರಜಾಕಾರರು ಬರುವುದಕ್ಕಿಂತ ಮೊದಲೇ ದಾಳಿ ನಡೆದು ಹೋಗಿದೆಯೋ ಏನೋ ಎಂಬಂತಾಗಿರುತ್ತದೆ. ಹಳ್ಳಿ ಹಳ್ಳಿಗಳ ಜನಸಮುದಾಯಗಳ ಒಳಗೆ ನೂರಾರು ಜನ ರಜಾಕಾರರಿರುತ್ತಾರೆ. ಈ ರಜಾಕಾರರ ವಿರುದ್ಧವೇ ನಿರಂತರ ಹೋರಾಟ ನಡೆದಿರುತ್ತದೆ. ಸಾವು ನೋವು ಅನುಭವಿಸುವವರು ಮಾತ್ರ ದುರ್ಬಲರು, ಅಮಾಯಕರು.

**೭.೩. ಜಮೀನ್ದಾರಿ ವ್ಯವಸ್ಥೆ ಮತ್ತು ಕೆಳವರ್ಗದವರು**

ಚಂದ್ರಕಾಂತ ಕುಸನೂರು ಅವರ 'ಒಂದು ಊರಿನ ಕಥೆ' ಯಲ್ಲಿ ಬರುವ ಚೆನ್ನಪ್ಪಗೌಡ ಎರಡು ಸಾವಿರ ಎಕರೆ ಭೂಮಿಯ ಒಡೆಯ. ಸ್ವಾತಂತ್ರ್ಯ ಹೋರಾಟದಲ್ಲಿ ನೋಡುವವರಿಗೆ ತಟಸ್ಥ ನೀತಿಯನ್ನು ಅನುಸರಿಸಿದಂತೆ ಕಂಡರೂ ಗುಪ್ತವಾಗಿ ಬ್ರಿಟೀಶರ ಗೆಳೆತನ ಹೊಂದಿದ್ದನು. ಹತ್ತಾರು ಹಳ್ಳಿಗಳಲ್ಲಿ ಹಬ್ಬಿದ ಇವನ ಭೂಮಿಯನ್ನು ಉಳುವವರು, ದುಡಿಯುವವರು ಗೌಡನ ಅಧೀನದಲ್ಲಿದ್ದರು. ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳದಂತೆ ಆತ ತನ್ನ ಅಧೀನದಲ್ಲಿದ್ದ ಹಳ್ಳಿಗಳ ಜನರಿಗೆ ಎಚ್ಚರಿಸಿದ್ದನು. ಸ್ವಾತಂತ್ರ್ಯಾ ನಂತರ ನಿಜವಾದ ಹೋರಾಟಗಾರರನ್ನು ಪ್ರಚಾರ ಮಾಡಿಸಿ ಜನಸಾಮಾನ್ಯರ ನಂಬಿಕೆಯನ್ನು ಗಳಿಸಿಕೊಂಡು ಮುನ್ನೆಲೆಗೆ ಬಂದಿದ್ದನು. ಮಠದ ಸ್ವಾಮಿಗಳ ಉಪಯೋಗ ಪಡೆದು ಚೆನ್ನಪ್ಪಗೌಡನ ಹೆಂಡತಿ ಸಾವಿತ್ರಿ ಚುನಾವಣೆಯಲ್ಲಿ ಗೆದ್ದು ಎಂ.ಪಿ. ಆದಳು. ಸ್ವಾತಂತ್ರ್ಯಪೂರ್ವದಲ್ಲೂ, ಸ್ವಾತಂತ್ರ್ಯಾನಂತರದಲ್ಲೂ ಗೌಡ ತನ್ನ ಸ್ಥಾನಮಾನದಲ್ಲಿ ಯಾವುದೆ ಬದಲಾವಣೆ ಮಾಡಿಕೊಳ್ಳಲಿಲ್ಲ. ರಾಜಕೀಯ ಸ್ಥಿತ್ಯಂತರಗಳು ಗೌಡನ ಗೌಡಿಕೆಯನ್ನು ಅಲುಗಾಡಿಸಲಿಲ್ಲ. ಎರಡು ಸಾವಿರ ಎಕರೆ ಭೂಮಿಯನ್ನು ಉಳುತ್ತಿದ್ದ

ನೂರಾರು ರೈತರು 'ಉಳುವವನೇ ಭೂಮಿಯ ಒಡೆಯ' ಎಂಬ ಕಾಯ್ದೆ ಜಾರಿಯಾದ ಸುದ್ದಿ ಕೇಳಿ ಕನಸು ಕಂಡರು. ತಾವು ಉಳುತ್ತ ಬಂದಿರುವ ಭೂಮಿಯನ್ನು ಪಡೆಯಲು ಪ್ರಯತ್ನಿಸಿ ಗೌಡರಿಂದ ಸಾವು–ನೋವು ಅನುಭವಿಸಿದರು. ಉಳುವವನೇ ಭೂಮಿಯ ಒಡೆಯನೆಂದು ತಿಳಿದ ಶಾಂತಪ್ಪನೆಂಬ ರೈತ ಮುಖಂಡ ಗೌಡರ ಬಂದೂಕಿಗೆ ಬಲಿಯಾದನು. ಸರಕಾರದ ಮಂತ್ರಿಗಳು, ಜಿಲ್ಲೆಯ ಎಂ.ಪಿ.ಯಾದ ಸಾವಿತ್ರಿ ಮತ್ತು ಗೌಡರು ನಿರಾತಂಕವಾಗಿದ್ದರು. ಸ್ವತಂತ್ರ ಭಾರತದ ಸರಕಾರದಲ್ಲಿ ಜಮೀನ್ದಾರರು ಒಳ್ಳೆಯ ಸ್ಥಾನವನ್ನು ಪಡೆದುಕೊಂಡರು.

ಸ್ವಾತಂತ್ರ್ಯೋತ್ತರ ಕಾಲದ ರಾಜಕೀಯ, ಸಾಮಾಜಿಕ ಬದುಕಿನ ಬಿಕ್ಕಟ್ಟುಗಳು, ತಲ್ಲಣಗಳು ಈ ಕಥೆಗಳಲ್ಲಿ ವಿವರವಾಗಿ ಚಿತ್ರಿತವಾಗಿವೆ. ಸ್ವಾತಂತ್ರ್ಯ ಬಂದು ಅರವತ್ತು ವರ್ಷಗಳಾದರೂ ಹೈದರಾಬಾದ್ ಕರ್ನಾಟಕಕ್ಕೆ ಸಿಗಬೇಕಾದ ಕನಿಷ್ಟ ರಾಜಕೀಯ ಸೌಲಭ್ಯಗಳು ಸಿಗದೆ 'ಹಿಂದುಳಿದ ಪ್ರದೇಶ' ಎಂದು ಕರೆಸಿಕೊಂಡಿದೆ. ಇದಕ್ಕೆ ಅನೇಕ ಕಾರಣಗಳು ಇದರ ಒಡಲಲ್ಲೇ ಇವೆ. ಈ ಪ್ರದೇಶವನ್ನು ರಾಜಕೀಯವಾಗಿ ಬ್ರಿಟೀಶರು ಆಳಿದರು. ನಿಜಾಮರೂ ಆಳಿದರು ಎಂಬುದು ಹೆಸರಿಗೆ ಮಾತ್ರ. ಇಲ್ಲಿ ನಿಜವಾಗಿ ಆಳಿದ್ದು ಜಮೀನ್ದಾರರು. ಎರಡೆರಡು ಸಾವಿರ ಎಕರೆಯ ಭೂಮಿ ಹೊಂದಿದ್ದ ಜಮೀನ್ದಾರರಾದ ದೇಸಾಯಿ, ಗೌಡ, ನಾಯಕದೊರೆ ಇವರೇ ಜನಸಾಮಾನ್ಯರನ್ನು ಆಳಿದ್ದು. ಸ್ವಾತಂತ್ರ್ಯಪೂರ್ವದಲ್ಲಿ ಈ ಜಮೀನ್ದಾರರು ಜನಸಾಮಾನ್ಯರನ್ನು ಹೇಗೆ ನೋಡುತ್ತಿದ್ದರೋ, ಸ್ವಾತಂತ್ರ್ಯೋತ್ತರದಲ್ಲಿ ರಾಜಕೀಯ ಅಧಿಕಾರ ಪಡೆದ ಮೇಲೆಯೂ ಹಾಗೇ ನೋಡಿದರೇ ಹೊರತು ದೃಷ್ಟಿ ಬದಲಾಯಿಸಲಿಲ್ಲ. ಆಗ ಕೇವಲ ಜಮೀನ್ದಾರರಾಗಿದ್ದರು. ಈಗ ಅಧಿಕಾರ ಹಿಡಿದ ರಾಜಕಾರಣಿಗಳಾಗಿದ್ದಾರೆ. ಜನಸಾಮಾನ್ಯರಿಗೆ ಅವರು ಸ್ಪಂದಿಸುವ ಕ್ರಿಯೆಯಲ್ಲಿ ಯಾವ ಬದಲಾವಣೆಗಳಾಗಲಿಲ್ಲ, ಇದು ಈ ಪ್ರದೇಶದ ದುರಂತ. ಎಪ್ಪತ್ತರ ದಶಕದವರೆಗೆ ಈ ಪ್ರದೇಶದ ಜನಸಾಮಾನ್ಯರಲ್ಲಿ ರಾಜಕೀಯ ಪ್ರಜ್ಞೆ ಕಾಣಿಸಿಕೊಳ್ಳಲಿಲ್ಲ. ಭೂ ಸುಧಾರಣೆ ಕಾಯ್ದೆ ಬಂದರೂ ಈ ಪ್ರದೇಶದಲ್ಲಿ ಕೆಲವರು ರಾಜಕೀಯ ಸೇರತೊಡಗಿದರು. ಅಂಥವರು ರಾಜಕೀಯ ಸೇರಿದಾಗಲೂ ವೈಯಕ್ತಿಕವಾಗಿ ಅವರಿಗೆ ಅಧಿಕಾರ ಸಿಕ್ಕಿತೇ ವಿನಃ ಅವರ ಸಮುದಾಯಕ್ಕಲ್ಲ. ಆದರೂ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಕನಿಷ್ಟ ರಾಜಕೀಯ ಸೌಲಭ್ಯಗಳನ್ನು ಪಡೆಯುವ ಹಕ್ಕು ಹೊಂದಿದ್ದಾರೆಂಬ ಪ್ರಜ್ಞೆ ಬೆಳೆದುದು ತಡವಾಗಿಯೇ ಎಂದು ಕಾಣುತ್ತದೆ. ರಾಜಕೀಯ ವಲಯದಲ್ಲಿ ಸೇರಿ ಮುಂಚೂಣಿಗೆ ಬಂದ ನಾಯಕರಿಗೆ ಈ ಪ್ರದೇಶದ ರಾಜಕೀಯ, ಸಾಮಾಜಿಕ ಚರಿತ್ರೆಯ ಪ್ರಜ್ಞೆ ಬಂದಿದೆಯೇ? ಬಂದಿದ್ದರೆ ಸ್ವಾತಂತ್ರ್ಯ ಬಂದು ಅರವತ್ತು ವರ್ಷಗಳಾದರೂ ಈ ಪ್ರದೇಶ 'ಹಿಂದುಳಿದ ಪ್ರದೇಶ' ಎಂದು ಕರೆಸಿಕೊಳ್ಳುವ ಸ್ಥಿತಿಯಲ್ಲಿ ಖಂಡಿತ ಇರುತ್ತಿರಲಿಲ್ಲ.

ಸ್ವಾತಂತ್ರ್ಯಾನಂತರ ಜಮೀನ್ದಾರರು ಸ್ವತಂತ್ರ ಭಾರತದ ರಾಜಕೀಯದಲ್ಲಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡ ಮೇಲೆ ಜನಸಾಮಾನ್ಯರ ಪರಿಸ್ಥಿತಿ ಹೇಗಾಯಿತು ಎಂಬುದನ್ನು 'ಒಂದು ಊರಿನ ಕಥೆ' ಹೇಳುತ್ತದೆ. ಊರಿನಲ್ಲಿ ಶಾಲೆ ಬಂದು ಜನಸಾಮಾನ್ಯರು ಅಕ್ಷರ ಕಲಿತರೆ

ಅದರಿಂದ ಉಂಟಾಗುವ ಪರಿಣಾಮಗಳನ್ನು ನೆನೆಸಿಕೊಂಡ ಊರಾಳುವವರು, ಶಾಲೆಯನ್ನು ಊರೊಳಗೆ ಬರದಂತೆ ಮಾಡುತ್ತಾರೆ. ವಿದ್ಯೆ ಊರೊಳಗೆ ಎಲ್ಲಿಯವರೆಗೆ ಕಾಲಿಡುವುದಿಲ್ಲವೋ ಅಲ್ಲಿಯವರೆಗೆ ನಾವು ಸುರಕ್ಷಿತವಾಗಿ ಉಳಿಯುತ್ತೇವೆ ಎಂದು ಅರಿತ ಆಳುವವರು ಶಾಲೆಯನ್ನು ಓಡಿಸಿ 'ನಾವು ಮುಂದ್ ಬರ್ಬಾದಂತ ಸರಕಾರ ನಮ್ಮೂರಾಗ ಸಾಲೀ ತೆಗೀಲಿಕತ್ತರ' ಎಂದು ಆಧುನಿಕತೆಯನ್ನೇ ದೂರುತ್ತಾರೆ. ಈ ಚಿತ್ರಣ 'ಯಳವಂತಿ' (ಚಂದ್ರಕಾಂತ ಕುಸನೂರು) ಕಥೆಯಲ್ಲಿದೆ. ಅಪ್ಪಣ್ಣಗೌಡ ಮಾಡುವ ಅನೇಕ ಅನ್ಯಾಯಗಳಿಗೆ ಜನಸಾಮಾನ್ಯರು ಬೇಸತ್ತರೂ ಅವನನ್ನು ಎದುರಿಸುವ ಧೈರ್ಯ ಯಾರಿಗೂ ಬರುವುದಿಲ್ಲ. ಸಾಮೂಹಿಕ ಹೋರಾಟಕ್ಕೆ ಊರು ಪಕ್ವಗೊಳ್ಳಲು ಸಾಧ್ಯವಾಗುವುದಿಲ್ಲ. ಒಡೆದು ಆಳುವ ನೀತಿ ಪ್ರಭುತ್ವದ ಶಕ್ತಿಗೆ ಕರಗತವಾಗಿರುತ್ತದೆ. ಇದರಿಂದ ಜನಸಾಮಾನ್ಯರು ಮೂಕವಾಗಿ ನೋವನ್ನು ಅನುಭವಿಸುತ್ತಾರೆ.

ಚೆನ್ನಣ್ಣ ವಾಲೀಕಾರರ 'ಅಡಿ ಜಾತಿ' ಕಥೆಯಲ್ಲೂ ಇದೇ ತುಂಬಿದೆ. ಹಾಗೆ ನೋಡಿದರೆ ಈ ಕಥೆ ಲಮಾಣಿ ತಾಂಡಾವೊಂದು ಅಡವಿಯಿಂದ ಊರು ಸೇರಿಯೇ ನಾಶವಾದ ದುರಂತವನ್ನು ಹೇಳುತ್ತದೆ. ಜಯ್ರಾಮ ತಾಂಡದ ಹಿರಿಯನಾಗಿ ತನ್ನ ದೊಡ್ಡ ಕಳ್ಳುಬಳ್ಳಿಯ ಜತೆಗೆ ಇತರ ಕುಲಬಾಂಧವರೊಂದಿಗೆ ಅಡವಿಯಲ್ಲಿದ್ದು, ತಮ್ಮ ಪೂರ್ವಜರಿಂದ ಉಳಿದಿದ್ದ ಅಲ್ಪ ಸ್ವಲ್ಪ ಭೂಮಿಯನ್ನೇ ಉತ್ತಿ ಬಿತ್ತಿ ಬೆಳೆದು ಬದುಕಿದ್ದವನು. ಅಡವಿಯಲ್ಲಿದ್ದ ನಿರುಪದ್ರವಿ ಸಮುದಾಯ ಒಂದು ಸಂದರ್ಭದಲ್ಲಿ ಸಮೀಪದ ಸರಡಗಿ ಎಂಬ ಊರನ್ನು ಸೇರುತ್ತದೆ. ಇಲ್ಲಿಂದಲೇ ಜಯ್ರಾಮನ ತಲ್ಲಣಗಳು ಪ್ರಾರಂಭವಾಗುತ್ತವೆ. ಅವನ ಮಕ್ಕಳು, ಸೊಸೆಯರು, ಮೊಮ್ಮಕ್ಕಳು, ಅವನ ಕುಲದ ಮಂದಿ ಅಡವಿಯಿಂದ ಊರು ಸೇರಿದ್ದೇ ತಡ ಬದುಕಿನ ಲಯವನ್ನೇ ಬದಲಾಯಿಸಿಕೊಂಡು ಬಿಡುತ್ತಾರೆ. ರಸ್ತೆ, ಹೋಟೆಲ್, ವಾಹನ, ಇವುಗಳ ಸಂಪರ್ಕದಿಂದ ಈ ಜನರಿಗೆ ಹಣದ ಅವಶ್ಯಕತೆ ಬೀಳುತ್ತದೆ. ಇದರಿಂದ ಗಂಡಸರು ಬೇರೆ ಬೇರೆ ಸೆಳೆತಗಳಿಗೆ ಒಳಗಾಗುತ್ತಾರೆ. ಊರ ರಾಜಕೀಯವು ಇವರ ಮೇಲೆ ಇಲ್ಲದ ಒತ್ತಡ ಹೇರುತ್ತದೆ. ಜಯ್ರಾಮನು ತನ್ನ ಕಣ್ಣಮುಂದೆ ಬಳಗವೆಲ್ಲ ತನ್ನ ಕೈಮೀರಿ ಹೋಗುವುದನ್ನು ನೋಡಿ ವ್ಯಥೆಪಡುತ್ತಾನೆ. ಊರಲ್ಲಿ ಕುಲಕರ್ಣಿ ರಾಮ್ರಾಯ, ಮಾಲಿಗೌಡ, ಭೀಮ್ರಾಯ ಎಂಬ ಉಳ್ಳವರ ಮಧ್ಯ ಬದುಕುವ ಸಂದರ್ಭದಲ್ಲಿ, ಯಾರನ್ನಾದರೂ ಆಯ್ಕೆ ಮಾಡಿಕೊಳ್ಳುವ ಅನಿವಾರ್ಯ ಸ್ಥಿತಿ ಬರುತ್ತದೆ.

ಈ ನಡುವೆ ಊರಲ್ಲಿ ಒಂದು ಘಟನೆ ಸಂಭವಿಸುತ್ತದೆ. ಕುಲಕರ್ಣಿ ರಾಮ್ರಾಯನ ತಂಗಿ ವಿಧವೆ ಸರಳಾ ಜೀಪ್ ಡ್ರೈವರ್ ಹುಸೇನಿಗೆ ಬಸುರಾಗುತ್ತಾಳೆ. ಆ ಗೌಪ್ಯತೆ ಜನಕ್ಕೆ ತಿಳಿಯುವ ಮೊದಲೇ ಅವಳು ಸಾವಿಗೆ ಶರಣಾಗುತ್ತಾಳೆ. ಆ ಆರೋಪ ಹುಸೇನಿಯ ಮೇಲೆ ಬಂದಾಗ, ಅವನು ಅದರಿಂದ ತಪ್ಪಿಸಿಕೊಳ್ಳಲು ಜಯ್ರಾಮನ ಮೊಮ್ಮಗ ಕಾಶ್ಯಾನ ಮೇಲೆ ಹೊರಿಸಿಬಿಡುತ್ತಾನೆ. ದರ್ಪದ ಕುಲಕರ್ಣಿ ಹಿಂದೆ ಮುಂದೆ ನೋಡದೆ ನಿರಪರಾಧಿ ಕಾಶ್ಯಾನನ್ನು ಹೊರಿಸಿ ತಂದು, ತಂಗಿಯ ಹೆಣದ ಜತೆ ಸುಟ್ಟುಬಿಡುತ್ತಾನೆ. ಅಷ್ಟಕ್ಕೂ ಸಿಟ್ಟು ಇಳಿಯದೆ ತನ್ನ ತಂಗಿ ಮಾಡಿದ

ಅಪರಾಧದಿಂದ ಊರಲ್ಲಿ ಮಾನ ಕಳೆದುಕೊಳ್ಳುತ್ತಾನೆ. ಆ ಸಿಟ್ಟಿನಲ್ಲಿಯೇ ಜಯ್ರಾಮನ ಭೂಮಿಯನ್ನೇ ಕಸಿದುಕೊಂಡು ಬಿಡುತ್ತಾನೆ. ಜಯ್ರಾಮ ಆಕಸ್ಮಿಕವಾಗಿ ಒದಗಿದ ಈ ಪ್ರಹಾರದಿಂದ ತತ್ತರಿಸಿ ಹೋಗುತ್ತಾನೆ. ಕುಲಕರ್ಣಿಯ ಸಿಟ್ಟು ಚಿಂತಾಕ್ರಾಂತ ಜಯ್ರಾಮನನ್ನು ಸಾವಿಗೆ ತಳ್ಳುತ್ತದೆ. ಅವನ ಸೊಸೆಯಂದಿರು ವಯಸ್ಸಾಗಿದ್ದರೂ ಕಾಮುಕ ಕುಲಕರ್ಣಿ ಅವರನ್ನು ಬಿಡದೆ ಹೊರಿಸಿಕೊಂಡು ತಂದು ಭೋಗಿಸುತ್ತಾನೆ. ಕೊನೆಗೆ ಜಯ್ರಾಮನ ಮಂದಿ ಊರು ಬಿಟ್ಟು ಬಂಬಾಯಿಗೆ ಹೋಗುತ್ತಾರೆ. ಚೂಣ್ಯಾ ಮತ್ತು ಅವನ ಹೆಂಡತಿ ಸೋನಿ ಮಾತ್ರ ಉಳಿದುಕೊಳ್ಳುತ್ತಾರೆ. ಸೋನಿಯನ್ನು ಭೋಗಿಸಲು ಊರಲ್ಲಿ ಕುಲಕರ್ಣಿ ರಾಮ್ರಾಯ ಮತ್ತು ಮಾಲೀಗೌಡ ಭೀಮ್ರಾಯ ಇವರ ಮಧ್ಯೆ ಸ್ಪರ್ಧೆ ನಡೆದು ಕೊನೆಗೆ ಭೀಮ್ರಾಯ ಸೋನಿಯನ್ನು ವಶಪಡಿಸಿಕೊಳ್ಳುತ್ತಾನೆ. ಜಯ್ರಾಮನ ಮೊಮ್ಮಗ ಚೂಣ್ಯಾನಿಗೆ ಸಿಟ್ಟು ಬರುತ್ತದೆ. ಒಂದು ಕಡೆ ತನ್ನ ಬಳಗದ ಹೆಂಗಸರನ್ನೆಲ್ಲ ಭೋಗಿಸಿದ ಕುಲಕರ್ಣಿ, ಇನ್ನೊಂದು ಕಡೆ ತನ್ನ ಹೆಂಡತಿಯನ್ನು ಇಟ್ಟುಕೊಂಡ ಭೀಮ್ರಾಯ ಇಬ್ಬರ ಕೃತ್ಯಗಳು ಚೂಣ್ಯಾನಿಗೆ ಸಹಿಸದಾದವು. ಚೂಣ್ಯಾ ಕೊನೆಗೆ ತನ್ನ ಹೆಂಡತಿಯನ್ನು ಇಟ್ಟುಕೊಂಡಿದ್ದ ಭೀಮ್ರಾಯನನ್ನು ಕೊಲ್ಲುತ್ತಾನೆ. ಅದು ಕುಲಕರ್ಣಿಯ ಮೇಲೆ ಬೀಳುತ್ತದೆ. ಪೊಲೀಸರಿಗೆ ಲಂಚ ನೀಡಿ ಅದರಿಂದ ಕುಲಕರ್ಣಿ ಪಾರಾಗುತ್ತಾನೆ. ಸೋನಿಯ ಕೊಲೆಯಾಗುತ್ತದೆ. ಅದನ್ನು ಉಪಯೋಗಿಸಿಕೊಂಡ ಕುಲಕರ್ಣಿಯು, ಚೂಣ್ಯಾನೇ ಕುಡಿದು ತನ್ನ ಹೆಂಡತಿಯನ್ನು ಕೊಂದಿದ್ದಾನೆಂದು ಪೊಲೀಸರಿಗೆ ತಿಳಿಸಿದ್ದರಿಂದ ಚೂಣ್ಯಾ ಜೈಲಿಗೆ ಹೋಗಬೇಕಾಗುತ್ತದೆ. ಕುಲಕರ್ಣಿ ರಾಮ್ರಾಯ ತನ್ನ ತಂಗಿ ಬಸಿರಾದದ್ದು, ಮನೆತನಕ್ಕೆ ಕಳಂಕ ಬಂದ ಸಿಟ್ಟಿಗೆ ಕಾಶ್ಯಾನನ್ನು ಜೀವಂತ ಸುಡುವುದು, ಜಯ್ರಾಮನ ಆಸ್ತಿಯನ್ನೆಲ್ಲಾ ವಶಪಡಿಸಿಕೊಳ್ಳುವುದು, ಜಯ್ರಾಮನಿಗೆ ಯಾರ ಸಹಾಯವು ಸಿಗದೆ ಸಾಯುವುದು, ಅವನ ಸೊಸೆಯರಿಗೆ ವಯಸ್ಸಾಗಿದ್ದರೂ ಬಲವಂತವಾಗಿ ಭೋಗಿಸುವುದು, ಕೊನೆಗೆ ಚೂಣ್ಯಾನನ್ನು ಜೇಲಿಗೆ ಕಳಿಸುವುದು ಇವು ರಾಮ್ರಾಯನ ಕ್ರೌರ್ಯಕ್ಕೆ ಸಾಕ್ಷಿಯಾಗಿವೆ. ಮೊದಲು ಮಾಲೀಗೌಡ ಭೀಮ್ರಾಯ ಮತ್ತು ರಾಮ್ರಾಯ ಜೊತೆಗೇ ಇರುತ್ತಾರೆ. ಆ ಕಾರಣದಿಂದ ಜಯ್ರಾಮನಿಗೆ ಸಹಾಯ ಸಿಗುವುದಿಲ್ಲ. ಕೆಳವರ್ಗದ ಜೀತದಾಳುಗಳೇ ಅವನ ಪರ ಒಂದಷ್ಟು ಜನ ಇವನ ಪರ ಹೊಡೆದಾಡಿ ಸಂಕಷ್ಟಕ್ಕೆ ಗುರಿಯಾಗುತ್ತಾರೆ.

ಶಾಂತರಸರ 'ಗೋದಾನ' ಕಥೆಯಲ್ಲಿ ಕರಿಯನ ಮಗ ರೋಗದಿಂದ ಸಾವಿಗೀಡಾಗಿರುತ್ತಾನೆ. ಮಗ ಸತ್ತ 'ಗಳಿಗೆ' ಕೆಟ್ಟದ್ದು. ಅದಕ್ಕಾಗಿ 'ಶಾಂತಿ' ಮಾಡಿಸಬೇಕೆಂದು ಪುರೋಹಿತ ಹೇಳುತ್ತಾನೆ. 'ಶಾಂತಿ' ಮಾಡಿಸಲು ಹಾಲು ಕೊಡುವ ಆಕಳು ಅದರ ಕರುವಿನೊಂದಿಗೆ ಬ್ರಾಹ್ಮಣರಿಗೆ ದಾನ ಮಾಡಬೇಕಾದ ಪ್ರಮೇಯ ಕರಿಯನಿಗೆ ಎದುರಾಗುತ್ತದೆ. ಕರಿಯನಲ್ಲಿದ್ದ ಹಾಲು ಕೊಡುವ ಆಕಳು–ಕರುವನ್ನು ಹೊಡೆದುಕೊಂಡು ಪುರೋಹಿತ ಹೋಗುತ್ತಾನೆ. ಆಕಳು ಕೊಟ್ಟ ಕರಿಯನ ಕುಟುಂಬ ಅದನ್ನು ನೋಡುತ್ತ ನಿಲ್ಲುತ್ತದೆ. ಮಗ ಸತ್ತ ಗಳಿಗೆ ಸರಿಯಿಲ್ಲ ಎನ್ನುವ ನಂಬಿಕೆ, ಅದನ್ನು ನಂಬುವ ಕರಿಯ ಶೋಷಣೆಗೆ ಗುರಿಯಾಗುತ್ತಾನೆ. ಅವನನ್ನು ನಂಬಿಸುವ ಪುರೋಹಿತಶಾಹಿಗಳು ಜಮೀನ್ದಾರಿಗಳನ್ನು ಮೀರಿಸುವ ಕ್ರೂರಿಯಾಗಿರುತ್ತಾರೆ.

ಜಮೀನ್ದಾರಿ ವ್ಯವಸ್ಥೆ ಕೆಳವರ್ಗದ ಜನಸಾಮಾನ್ಯರನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಲೇ ಬಂದಿದೆ. ದುಡಿವ ಕೆಳವರ್ಗದವರ ಬಡತನ, ಹಸಿವು ಎಲ್ಲ ದೌರ್ಬಲ್ಯಗಳಿಗೆ ಕಾರಣವಾಗುತ್ತದೆ. ಈ ದೌರ್ಬಲ್ಯವನ್ನು ವ್ಯವಸ್ಥೆ ದುರುಪಯೋಗಪಡಿಸಿಕೊಳ್ಳುತ್ತಾ, ಸ್ವಾರ್ಥಕ್ಕಾಗಿ, ತನ್ನ ಪ್ರತಿಷ್ಠೆಗಾಗಿ ಜನಸಾಮಾನ್ಯರನ್ನು ಬಲಿಪಡೆಯುತ್ತಾ ಹೋಗುತ್ತದೆ. ಈ ಕಥೆಗಳಲ್ಲಿ ಉಳ್ಳವರು ಕೆಳವರ್ಗದ ಹೆಂಗಸರನ್ನು ಲೈಂಗಿಕವಾಗಿ, ಗಂಡಸರನ್ನು ಜೀತದ ಮೂಲಕ ಶೋಷಣೆ ಮಾಡುವುದು ಕಾಣುತ್ತದೆ. ಉಳ್ಳವರ ಕ್ರೌರ್ಯಕ್ಕೆ ಹೆಂಗಸರು ಬಲಿಯಾಗುವುದು ಸಾಮಾನ್ಯ ಮತ್ತು ಉಳ್ಳವರು ಕೆಳವರ್ಗದ ಗಂಡಸರಿಗಿಂತ ಹೆಚ್ಚಾಗಿ ಹೆಂಗಸರಿಂದ ಪ್ರತಿರೋಧವನ್ನು ಎದುರಿಸಬೇಕಾಗಿ ಬರುತ್ತದೆ. ಇಲ್ಲಿ ಪ್ರತಿರೋಧಿಸುವ ಶಕ್ತಿ ಗಂಡಸಿಗಿಂತ ಹೆಂಗಸಿನಲ್ಲಿ ಹೆಚ್ಚು ಕಾಣುತ್ತದೆ.

ಚಂದ್ರಕಾಂತ ಕುಸನೂರರ ಕಥೆಗಳನ್ನು ಗಮನಿಸಿದರೆ, ಅಲ್ಲಿ ಜಮೀನ್ದಾರರ ಅಧೀನದಲ್ಲಿದ್ದ ದುಡಿಯುವ ವರ್ಗದವರು ಅನೇಕ ರೀತಿಯಿಂದ ಶೋಷಣೆಗೆ ಗುರಿಯಾಗುತ್ತಿದ್ದರೂ ವಿರೋಧಿಸುವ ಗುಣವನ್ನೇ ಕಳೆದುಕೊಂಡಿದ್ದರು. ಅದಕ್ಕೆ ಕೆಳವರ್ಗದವರ ಬಡತನ, ಹಸಿವು ಇನ್ನೂ ಮುಂತಾದ ಕಾರಣಗಳಿದ್ದವು. ಎಷ್ಟೇ ದಮನಕ್ಕೆ ಒಳಗಾದರೂ ಸಹಿಸಿಕೊಂಡೇ ಬದುಕಬೇಕಾಗಿತ್ತು. ಯಾವುದೋ ಸಂದರ್ಭದಲ್ಲಿ ಜಮೀನ್ದಾರರ ಅಧೀನದಲ್ಲಿದ್ದವರು ವಿರೋಧಿಸುವ ಗುಣವನ್ನು ಕಂಡರೆ ಸಾಕು ಅವರಿಗೆ ಕಾಡಾಟ ತಪ್ಪಿದ್ದಲ್ಲ. ಚೆನ್ನಣ್ಣ ವಾಲೀಕಾರರ ಕಥೆಗಳಲ್ಲಿಯೂ ಈ ಅಂಶ ಕಾಣುತ್ತದೆ. ಶೋಷಣೆಗೆ ಒಳಗಾಗುವವರು ಒಟ್ಟಾಗಿ ತಮ್ಮ ಶಕ್ತಿಯನ್ನು ಪ್ರಯೋಗಿಸಲು ಸಾಧ್ಯವಾಗದಂತೆ ಜಮೀನ್ದಾರಿ ವ್ಯವಸ್ಥೆಯು ವ್ಯವಸ್ಥಿತವಾಗಿ ಯೋಜಿಸುತ್ತಿರುತ್ತದೆ. ಅನೇಕ ಸಂದರ್ಭಗಳಲ್ಲಿ ಕೆಳವರ್ಗದವರು ತಮಗೆ ಒದಗಿದ ವಿಪತ್ತಿನಿಂದ ಬಿಡುಗಡೆಯಾಗಲು ವೈಯಕ್ತಿಕ ನೆಲೆಯಲ್ಲಿ ಹೋರಾಡಿ ತಮ್ಮ ಶಕ್ತಿಯನ್ನು ವ್ಯಕ್ತಪಡಿಸಿದ್ದಾರೆಯೇ ಹೊರತು ಒಟ್ಟಾಗಿ ಅಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಕೆಳವರ್ಗದವರು ಜಮೀನ್ದಾರರ ವಿರುದ್ಧ ಒಟ್ಟಾಗಿ ವಿರೋಧಿಸುವ ಶಕ್ತಿಯನ್ನು ಪಡೆದುಕೊಳ್ಳಲು ಸಾಧ್ಯವಾಗಲಿಲ್ಲ. ದಮನಕ್ಕೆ ಒಳಗಾಗುತ್ತಿದ್ದೇವೆ ಎಂಬ ಪ್ರಜ್ಞೆ ವೈಯಕ್ತಿಕ ನೆಲೆಯಲ್ಲಿ ಅಲ್ಪಸ್ವಲ್ಪ ಸಂದರ್ಭಕ್ಕೆ ಅನುಗುಣವಾಗಿ ಮೂಡುತ್ತಿತ್ತು. ಸ್ವಾತಂತ್ರ್ಯಾನಂತರ ರಾಜಕೀಯ ಪ್ರಜ್ಞೆ ಕೆಳವರ್ಗದವರಲ್ಲಿ ಮೂಡತೊಡಗಿತು. ಆಗ ಒಟ್ಟಾಗಿ ಹೋರಾಡುವ ಶಕ್ತಿಯನ್ನು ಪ್ರಕಟಿಸಲು ಪ್ರಯತ್ನಿಸಲಾಯಿತು. ಆಗಲೂ ಮೇಲ್ವರ್ಗದವರು ರಾಜಕೀಯ, ಆರ್ಥಿಕ, ಧಾರ್ಮಿಕ ಶಕ್ತಿಯಿಂದ ಪ್ರಬಲರಾಗಿದ್ದರಿಂದ ಕೆಳವರ್ಗದವರ ಪ್ರಯತ್ನ ವಿಫಲಗೊಳ್ಳುತ್ತಾ ಬಂದಿವೆ. ಇದರಿಂದ ಪುನಃ ಮೇಲ್ವರ್ಗದವರ ದಮನದ ಕೃತ್ಯಗಳು ಮುಂದುವರೆದಿವೆ. ಇದರ ಸಂಕೀರ್ಣ ಸ್ವರೂಪ 'ಮಲಿನ ಮಜ್ಜನ ನ್ಯಾಯಕ್ಕೆಳಸಿ' (ಶಾಂತರಸ) ಎಂಬ ಕಥೆಯಲ್ಲಿ ಕಾಣಬಹುದು.

'ಒರೆಗಲ್ಲು' ಕಥೆಯಲ್ಲಿ, ದೇಶ ಇಬ್ಭಾಗವಾದ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಜಾತಿಗಲಭೆಗೆ ಕಮಲೆ ತನ್ನ ಗಂಡ, ಬಂಧು-ಬಳಗ, ಆಸ್ತಿ ಎಲ್ಲವನ್ನೂ ತೊರೆದು, ಅತ್ಯಾಚಾರ ಮಾಡಲು ಬಂದ ಮುಸ್ಲೀಂ ಯುವಕನಿಂದ ತಪ್ಪಿಸಿಕೊಂಡು ಲಾಹೋರಿನಿಂದ ಭಾರತಕ್ಕೆ ಬರುತ್ತಾಳೆ. ಮನೆಗೆಲಸಕ್ಕೆ ನಿಂತ ಕಮಲೆಯನ್ನು ಮನೆಯ ಒಡೆಯ ಅವಳ ತ್ಯಾಚಾರ ಮಾಡಲು ಪ್ರಯತ್ನಿಸುತ್ತಾನೆ.

'ನಿರಾಶ್ರಿತ' ಕಥೆಯಲ್ಲಿ, ಕಮಲೆ ಎದುರಿಸಿದ ಬಿಕ್ಕಟ್ಟನ್ನೇ ಶೀಲ ಎದುರಿಸಿ, ನವಖಾಲಿಯಿಂದ ಭಾರತಕ್ಕೆ ಬಂದು ಜೋಶಿಯ ಅತ್ಯಾಚಾರಕ್ಕೆ ಬಲಿಯಾಗುತ್ತಾಳೆ. ಯಾವುದನ್ನು ಕಾಪಾಡಿಕೊಳ್ಳಲು ಸಾವಿರಾರು ಮೈಲುಗಳಿಂದ, ಎಲ್ಲವನ್ನೂ ಬಿಟ್ಟು ಬಂದಿದ್ದರೂ ಅಂಥ ಈ ಮಹಿಳೆಯರಿಗೆ ಆಶ್ರಯ ನೀಡಿದವರೇ ಬಲಾತ್ಕರಿಸುತ್ತಾರೆ.

ಕೆಲವು ಕಥೆಗಳಲ್ಲಿ ಮಹಿಳೆ ತನಗೆ ಒದಗಿದ ಬದುಕನ್ನು ಅರ್ಥಪೂರ್ಣವಾಗಿ ಎದುರಿಸುವ ಎದೆಗಾರಿಕೆಯನ್ನು ತೋರಿಸುತ್ತಾಳೆ. ಇದೇ ಅವಳ ಅನನ್ಯತೆಯಾಗಿದೆ. 'ಪಾರವ್ವನ ಪಂಚಾಯತಿ' (ಜಯತೀರ್ಥ ರಾಜಪುರೋಹಿತ) ಕಥೆಯಲ್ಲಿ ಬರುವ ಪಾರವ್ವ ಮನೆತನದಿಂದ ಸೂಳೆಯಾದರೂ ಆತ್ಮಗೌರವ ಉಳ್ಳವಳು. ತನ್ನ ಕಸುಬಿನ ಬಗ್ಗೆ ಅವಳಿಗೆ ಹಿಂಜರಿಕೆಯಿದೆ, ಅಪಮಾನವಿದೆ. ಅವಳನ್ನು ಉಪಯೋಗಿಸಿದ ಗಂಡಸರಿಗೆ ಇಲ್ಲದ ಅವಮಾನ ಅವಳು ಉಳಿಸಿಕೊಂಡಿಲ್ಲ. ಆದರೆ ತನ್ನ ಅಂತರಂಗದಲ್ಲಿ ಅವಳು ಪಶ್ಚಾತ್ತಾಪ ಪಟ್ಟಿದ್ದಾಳೆ. ತನ್ನ ಇಳಿ ವಯಸ್ಸಿನಲ್ಲಿ ಅನಿವಾರ್ಯವಾಗಿ ಗ್ರಾಮಪಂಚಾಯಿತಿ ಚುನಾವಣೆಗೆ ನಿಲ್ಲುವುದು ಬರುತ್ತದೆ. ಗೆದ್ದು ಅಧ್ಯಕ್ಷಳೂ ಆಗುತ್ತಾಳೆ. ಬಸವಿಯಾಗಿ ಬದುಕಿದ್ದಕ್ಕೆ ಒಳಗೆ ಎಂಥದೋ ಪಾಪಪ್ರಜ್ಞೆ ಇಟ್ಟುಕೊಂಡ ಆಕೆ ಅದನ್ನು ಮರೆಯಲೋ ಎಂಬಂತೆ, ಗಂಡಸರ ಎದುರಿಗೆ ಗಟ್ಟಿಯಾಗಿ ನಿಂತು ಊರಲ್ಲಿ ಕೆಲದಿನಗಳ ಕಾಲ ಬಾಳುವಂಥ ಕೆಲಸ ಮಾಡುತ್ತಾಳೆ. ಊರ ಗೌಡ, ಕುಲಕರ್ಣಿ ಮುಂತಾದವರು ಒಡ್ಡಿದ ಬಿಕ್ಕಟ್ಟುಗಳನ್ನೆಲ್ಲ ಎದುರಿಸಿ ಜನಪರ ಕೆಲಸಗಳನ್ನು ಮಾಡುತ್ತಾಳೆ. ಪಾರವ್ವ ಬಸವಿಯಾಗಿ, ನಂತರ ಗ್ರಾಮ ಪಂಚಾಯತಿಯ ಅಧ್ಯಕ್ಷಳಾಗಿ ಎರಡನ್ನು ಸ್ವೀಕರಿಸಿ ಪ್ರಾಮಾಣಿಕತೆಯಿಂದ ಬದುಕನ್ನು ಅನುಭವಿಸಿದಳು.

ಶಾಂತರಸರ 'ಕಿಡಿ' ಕಥೆಯಲ್ಲಿ ಇದೇ ವಸ್ತುವಿನ ಇನ್ನೊಂದು ಮುಖವಿದೆ. ಗಂಡನಿಲ್ಲದ ಸೂಗಮ್ಮ ಒಂಟಿಯಾಗಿರಲು ಅಸಾಧ್ಯವಾಗಿ ಬುದ್ಧಿವಂತಪ್ಪನನ್ನು ಕೂಡುತ್ತಾಳೆ. ಇಲ್ಲಿ ಅನೈತಿಕತೆಯ ಪ್ರಶ್ನೆಯೇ ಹುಟ್ಟುವುದಿಲ್ಲ. ಬುದ್ಧಿವಂತಪ್ಪನಿಗೂ ಒಂದು ಸಂಸಾರವಿರುತ್ತದೆ. ಆದರೂ ಅವನನ್ನು ಸೂಗಮ್ಮ ಆಯ್ಕೆಮಾಡಿಕೊಂಡು ತನ್ನ ಆಸ್ತಿಯನ್ನು ಕೊಡುತ್ತಾಳೆ. ಒಂದು ಸಂದರ್ಭದಲ್ಲಿ ಬುದ್ಧಿವಂತಪ್ಪನೊಡನೆ ವಿರಸ ಬಂದು ಅವನು ಕೈತಪ್ಪಿ ಹೋಗುವ ಸ್ಥಿತಿ ಬರುತ್ತದೆ. ಇದೇ ಸಂದರ್ಭವನ್ನು ಕಾಯುತ್ತಿದ್ದ ಪರಮಯ್ಯನಂತವರು ಸೂಗಮ್ಮ ಮತ್ತು ಬುದ್ಧಿವಂತಪ್ಪರ ನಡುವೆ ಬಿಟ್ಟ ಬಿರುಕನ್ನು ದೊಡ್ಡದು ಮಾಡಲು ನೋಡಿ, ಅಲ್ಲಿ ತಾವು ಸ್ಥಾನ ಪಡೆಯಲು ಪ್ರಯತ್ನಿಸುತ್ತಿರುತ್ತಾರೆ. ಆದರೆ ಸೂಗಮ್ಮ ಬುದ್ಧಿವಂತಪ್ಪನಿಗೆ ಒಲಿದಿದ್ದರಿಂದ ಅವನ ಮೇಲಿನ ಪ್ರೀತಿಯಿಂದ ಪುನಃ ಅವನನ್ನು ತನ್ನ ಮನೆಗೆ ಬರುವಂತೆ ಮಾಡುತ್ತಾಳೆ. ಅವನಿಗೆ ಸಂಕಷ್ಟಗಳನ್ನು ಸಿಲುಕಿಸಿ ಸೋಲುವಂತೆ ಮಾಡಿ ತನ್ನ ಬಳಿಗೆ ಬರುವಂತೆ ಮಾಡಿಕೊಳ್ಳುತ್ತಾಳೆ. ಅವನಿಗೆ ಜೀವ ಬೆದರಿಕೆ ಹಾಕಿ ತನ್ನ ಬಳಿಗೆ ಬರುವಂತೆ ಮಾಡುವಾಗಲೂ ಅವಳು ಅದನ್ನೆಲ್ಲ ನೋವಿನಿಂದಲೇ ಮಾಡುತ್ತಾಳೆ. ಸೂಗಮ್ಮನಿಗೆ ಬುದ್ಧಿವಂತಪ್ಪ ಲೈಂಗಿಕವಾಗಿ ಮಾತ್ರ ಬೇಕಾಗಿರಲಿಲ್ಲ. ಅವನ ಮೇಲಿನ ಪ್ರೀತಿಗಾಗಿ ಆಸ್ತಿಯನ್ನು ಕೊಟ್ಟು ತನ್ನವನನ್ನಾಗಿ ಮಾಡಿಕೊಂಡಿರುತ್ತಾಳೆ.

ಶಾಂತರಸರ 'ಮಾಯೆ ಅಂದ್ರೆ ಮಾಯೆ' ಈ ಕಥೆಯ ರಾಚಮ್ಮನೂ ಇದೇ ಸ್ಥಿತಿಯ ಇನ್ನೊಂದು ಮುಖದಂತಿದ್ದಾಳೆ. ವಯಸ್ಸಾದ ಶ್ರೀಮಂತ ವೆಂಕನಗೌಡನ ಮೂರನೆಯ ಹೆಂಡತಿಯಾಗಿ ರಾಚಮ್ಮ ಸಂಸಾರಕ್ಕೆ ನಿಲ್ಲಬೇಕಾಗುತ್ತದೆ. ಅವಳ ಬಡತನ ಮತ್ತು ವೆಂಕನಗೌಡನ ಶ್ರೀಮಂತಿಕೆಯೇ ಈ ಸಂದರ್ಭವನ್ನು ತಂದಿರುತ್ತದೆ. ಅನ್ನ, ಹಣ, ಒಡವೆ ಮತ್ತು ಸೇವೆಗೆ ಆಳುಗಳು ಎಲ್ಲ ಸೌಲಭ್ಯವಿದೆ. ಬಡತನದಿಂದ ಬಂದಿದ್ದರೂ ರಾಚಮ್ಮನಿಗೆ ವೆಂಕನಗೌಡನ ಈ ಸಂಪತ್ತು ರುಚಿಸುವುದಿಲ್ಲ. ಅವಳಿಗೆ ಬೇಕಾದ ಮೈ ಸುಖ ವೆಂಕನಗೌಡನಿಂದ ಸಿಗುವುದಿಲ್ಲ. ಮೇಲಾಗಿ ಅದು ವಿಷಮ ದಾಂಪತ್ಯವಾಗಿತ್ತು. ಇದನ್ನು ಗ್ರಹಿಸದ ವೆಂಕನಗೌಡ ಅವಳ ಮೇಲೆ ವಿಕೃತವಾಗಿ ದಾಳಿ ಮಾಡಲು ನೋಡುತ್ತಾನೆ. ಈ ಕೃತ್ಯ ಇನ್ನೂ ರಾಚಮ್ಮನಿಗೆ ವಿಮುಖಳಾಗಲು ದಾರಿಯಾಗುತ್ತದೆ. ಅವಳು ತವರು ಮನೆಯಲ್ಲಿರುವಾಗ ಗಂಗ್ಯಾನೆಂಬ ಬಡವನ ಮೇಲೆ ಮನಸ್ಸಿಟ್ಟಿದ್ದಳು. ವೆಂಕನಗೌಡನ ವಿಕೃತ ಕಾಮವನ್ನು, ಅವನ ಶ್ರೀಮಂತಿಕೆಯನ್ನು ತೊರೆದು ಕೂಲಿ ಮಾಡಿ ಬದುಕುವ ಗಂಗ್ಯಾನ ಬಳಿಗೆ ಹೋಗಿ ಸೇರುತ್ತಾಳೆ. ಮಹಿಳೆಯ ಇಂಥ ನಿರ್ಧಾರಗಳು ತಾತ್ಕಾಲಿಕ ಎನಿಸುವುದಿಲ್ಲ. ರಾಚಮ್ಮನಂಥ ಹೆಂಗಸರಿಗೆ ಕೇವಲ ಮೈ ಸುಖ ಬೇಕಾಗಿದ್ದರೆ ಅದನ್ನು ಅವಳು ವೆಂಕನಗೌಡನಲ್ಲಿದ್ದುಕೊಂಡೇ ಅನ್ಯರಿಂದ ಪಡೆಯಬಹುದಾದ ಅವಕಾಶಗಳಿದ್ದವು. 'ಕಿಡಿ' ಕಥೆಯಲ್ಲಿ ಸೂಗಮ್ಮನಿಗೆ ಬುದ್ಧಿವಂತಪ್ಪನೇ ಬೇಕಾದಂತೆ ರಾಚಮ್ಮನಿಗೆ ಗಂಗ್ಯಾ ಬೇಕಾಗುತ್ತಾನೆ.

### ೭.೪. ಭೂಮಾಲಿಕರು ಮತ್ತು ಉಳುವ ರೈತರು

'ಉಳುವವನೆ ಭೂಮಿಯ ಒಡೆಯ' ಎಂಬ ಕಾಯ್ದೆ ಬಂದ ದಿನಗಳಲ್ಲಿ ಕರ್ನಾಟಕದಾದ್ಯಂತ ಕೋಲಾಹಲವನ್ನು ಉಂಟುಮಾಡಿತ್ತು. ಭೂ ಸುಧಾರಣೆ ಕಾಯ್ದೆಯ ಪ್ರಕಾರ ಭೂಮಿಯನ್ನು 'ಉಳುವವನೆ ಒಡೆಯ'ನೆಂದು ಘೋಷಿಸಿದಾಗ ಭೂಮಾಲಿಕರು ಆತಂಕಗೊಂಡರು. ಉಳುವ ಸಾಮಾನ್ಯ ರೈತರಿಗೆ ಒಂದು ಕಡೆ ಸಂಭ್ರಮ ಇನ್ನೊಂದು ಕಡೆ ಭಯ ಪ್ರಾರಂಭವಾಯಿತು. ಕಾನೂನಿನ ಪ್ರಕಾರ ಉಳುವವನಿಗೆ ಭೂಮಿ ಸಿಗಬೇಕು ಮತ್ತು ಸಾಮಾಜಿಕ ನ್ಯಾಯ ತತ್ವ ಜಾರಿಯಾಗಬೇಕಾಗಿತ್ತು. ಆದರೆ ಒಡೆಯನ ಭೂಮಿಯನ್ನು ಉಳಿಮೆ ಮಾಡಿ ದುಡಿದು ಬದುಕುವ ಸಾಮಾನ್ಯರಿಗೆ ಒಡೆಯನಿಂದ ಭೂಮಿಯನ್ನು ಕಿತ್ತುಕೊಂಡು ತಮ್ಮದಾಗಿಸಿಕೊಳ್ಳುವುದು ಸುಲಭವಾಗಿ ಕಾಣಿಸಲಿಲ್ಲ. ತಲೆಮಾರುಗಳಿಂದ ಒಡೆಯನ ಅಧೀನದಲ್ಲಿ ಬದುಕಿದ ಸಾಮಾನ್ಯರಿಗೆ ಕಾನೂನಿನ ಪ್ರಕಾರ ಸರಕಾರವೇನೊ ಭೂಮಿಯನ್ನು ಕಸಿದು ಕೊಡಬಹುದು. ಆದರೆ ಭೂಮಿ ಕಳೆದುಕೊಂಡ ಒಡೆಯನ ಕಣ್ಣೆದುರಲ್ಲೇ ಬದುಕು ಸಾಗಿಸಬೇಕಾದ ಸ್ಥಿತಿ ಒಂದು ಕಡೆ ಭಯಗ್ರಸ್ತರನ್ನಾಗಿ ಮಾಡಿತು. ಕಾನೂನಿನ ಅನ್ವಯ ಮತ್ತು ಸಾಮಾಜಿಕ ನ್ಯಾಯದ ಅನ್ವಯ ಭೂ ಮಾಲೀಕರು ಪರಿಸ್ಥಿತಿಯನ್ನು ಗ್ರಹಿಸಿ ಉಳುವವರಿಗೆ ಭೂಮಿಯನ್ನು ಸ್ವ ಇಚ್ಛೆಯಿಂದ ಬಿಟ್ಟುಕೊಂಟ್ಟಿದ್ದರೆ, ಭೂಮಿ ಒಡೆಯ ಮತ್ತು ಉಳುವ ಆಳಿನ ಮಧ್ಯದ ಸಂಬಂಧ ಸಂಕೀರ್ಣ ಸ್ವರೂಪದ್ದಾಗಿರುತ್ತಿತ್ತು. ಭೂಮಿ ಒಡೆಯನಿಗೆ ತನ್ನ ಭೂಮಿ ಉಳುವವನ ನಿಷ್ಠೆಯ ಮೇಲೆ ಅನುಮಾನ, ಉಳುವವನಿಗೆ

ತನ್ನ ಒಡೆಯನ ಔದಾರ್ಯದ ಮೇಲೆ ಅನುಮಾನಗಳು ಬಂದು ತಾತ್ವಿಕ ಸಂಘರ್ಷವೇ ಏರ್ಪಟ್ಟಂತಾಯಿತು. ಕಾನೂನಿನ ಅನ್ವಯ 'ನ್ಯಾಯ' ಎಂಬಂತೆ ಕಂಡರೆ ಜನಸಾಮಾನ್ಯರಿಗೆ ತಮ್ಮ ಪರಂಪರಾಗತ ಆಲೋಚನೆಯ ಕ್ರಮದಿಂದ ತಮ್ಮದಲ್ಲದ ಭೂಮಿಯನ್ನು ತಮ್ಮದೆಂದು ಹೇಳಿಕೊಳ್ಳುವುದೂ ಸುಲಭವಾಗಲಿಲ್ಲ. 'ಆತ್ಮಸಾಕ್ಷಿಯ' ಬಿಕ್ಕಟ್ಟನ್ನು ಭೂ ಮಾಲೀಕರೂ, ಭೂಮಿ ಉಳುವವನೂ ಇಬ್ಬರೂ ಎದುರಿಸಬೇಕಾಯಿತು.

ಭೂ ಮಾಲೀಕರಲ್ಲಿ ಕೆಲವರು ಅಸಹಾಯಕರಾಗಿ ಭೂಮಿಯನ್ನು ಉಳುವವನಿಗೆ ಬಿಟ್ಟುಕೊಟ್ಟರು. ಇನ್ನೂ ಕೆಲವರು ಮಾನವೀಯ ನೆಲೆಯಿಂದ ಬಿಟ್ಟುಕೊಟ್ಟರು. ಹಲವು ಜಮೀನ್ದಾರರು ಕಾಯ್ದೆ ಜಾರಿಯಾಗುತ್ತಿದ್ದಂತೆ ತಮ್ಮ ಭೂಮಿಯನ್ನು ತಮ್ಮ ಬಂಧು-ಬಳಗದವರ ಹೆಸರಿಗೆ ವರ್ಗಾಯಿಸಿ ತಪ್ಪಿಸಿಕೊಂಡರು. ಹಲವಾರು ಉಪಾಯಗಳಿಂದ ಉಳಿಸಿಕೊಂಡರು. ಜನಸಾಮಾನ್ಯರಲ್ಲಿ ಕೆಲವರಿಗೆ ಮಾನವೀಯತೆಯ ಪ್ರಶ್ನೆ ಕಾಡಿ ಇದು ನ್ಯಾಯ ಸಮ್ಮತವಲ್ಲವೆಂದು ಭೂಮಿಯನ್ನು ಪಡೆಯುವ ಪ್ರಯತ್ನವನ್ನೇ ಮಾಡಲಿಲ್ಲ. ಒಟ್ಟಿನಲ್ಲಿ ಟೆನೆಂಟ್ ಕಾಯ್ದೆಯ ಪರಿಣಾಮಗಳು ಏಕಮುಖವಾಗಿರಲಿಲ್ಲ. ಆದರೆ ಈ ಕಾಯ್ದೆಯ ಹಿನ್ನೆಲೆಯಿಂದ ಕರ್ನಾಟಕದಾದ್ಯಂತ ಒಂದು ಬಗೆಯ ಸಂಘರ್ಷವೆ ನಡೆಯಿತು.

ಬೇರೆ ಭಾಗಕ್ಕೆ ಹೋಲಿಸಿದರೆ ಉತ್ತರ ಕರ್ನಾಟಕದಲ್ಲಿ ಭೂ ಮಾಲೀಕರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆಂದು ಕಾಣುತ್ತದೆ. ಅದರಲ್ಲೂ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಗೌಡ, ಸಾಹುಕಾರ, ಕುಲಕರ್ಣಿ, ದೇಸಾಯಿ, ಶಾನುಭೋಗ, ನಾಯಕ ಮನೆತನದವರೆಲ್ಲ ಸಾವಿರಾರು ಎಕರೆ ಭೂಮಿಯ ಮಾಲಿಕರಾಗಿರುವರು. ಇವರೆಲ್ಲ ಒಂದಲ್ಲ ಒಂದು ರಾಜಮನೆತನಕ್ಕೆ ಸಂಬಂಧಿಸಿದ ವಂಶಸ್ಥರೇ ಆಗಿರುವವರು. ಸ್ವಾತಂತ್ರ್ಯದ ನಂತರ ಈ ಜಮೀನ್ದಾರರು ತಮ್ಮ ಭೂಮಿಯನ್ನು ಹತ್ತಾರು ಜನ ದುಡಿದು ಉಳುವವರಿಗೆ ಕೊಟ್ಟು ಅದರಿಂದ ಬರುವ ಫಲವನ್ನು ಭೋಗ ಜೀವನವನ್ನು ನಡೆಸುತ್ತಿದ್ದಾರೆ.

ಈ ಪ್ರದೇಶದಲ್ಲಿ ಸಾವಿರಾರು ಎಕರೆ ಭೂಮಿಯುಳ್ಳ ಜಮೀನ್ದಾರರು ಇರುವುದು ಕಾಣುತ್ತೇವೆ. ಈ ಜಮೀನ್ದಾರರ ಭೂಮಿಯನ್ನು ಗೇಣಿದಾರರು ಉಳುಮೆ ಮಾಡುತ್ತಾರೆ. ಬರುವ ಫಲವನ್ನು ಒಪ್ಪಂದವಾದಂತೆ ಹಂಚಿಕೊಳ್ಳುವ ವ್ಯವಸ್ಥೆ ಇರುತ್ತದೆ. ಆದರೆ ಈ ವ್ಯವಸ್ಥೆ ಈ ಪ್ರದೇಶದಲ್ಲಿ ಹೆಚ್ಚಾಗಿ ಕಾಣುವುದಿಲ್ಲ. ಜಮೀನ್ದಾರರೇ ತಮ್ಮ ಭೂಮಿಯನ್ನು ಉಳುಮೆ ಮಾಡಿಸುತ್ತಾರೆ. ಕೆಳವರ್ಗದವರನ್ನು ಜೀತದಾಳುಗಳನ್ನಾಗಿ ಇಟ್ಟುಕೊಂಡು ದುಡಿಸುತ್ತಾರೆ. ಈ ಜೀತದಾಳುಗಳ ಕುಟುಂಬದ ಉಪಜೀವನವು ಜಮೀನ್ದಾರರನ್ನು ಅವಲಂಬಿಸಿರುತ್ತದೆ. ಸಣ್ಣ ಪುಟ್ಟ ರೈತರ ಭೂಮಿಯನ್ನು ಈ ಜಮೀನ್ದಾರರೇ ತಮ್ಮ ವಶಕ್ಕೆ ತೆಗೆದುಕೊಂಡು ಉಳುಮೆ ಮಾಡಿಸುತ್ತಾರೆ. ಈ ರೈತರು ಇವರು ಕೊಟ್ಟಷ್ಟನ್ನು ಪಡೆಯುತ್ತಾರೆ. ಇದು ಈ ಪ್ರದೇಶದಲ್ಲಿ ಕಾಣುತ್ತದೆ. ಯಾಕೆಂದರೆ ಈ ಸಣ್ಣ ಪುಟ್ಟ ರೈತರ ಭೂಮಿಗಳು ಜಮೀನ್ದಾರರ ದೊಡ್ಡ ಹಾಸಿನ ಭೂಮಿಗಳ

ನಡುವೆ ಬರುವುದರಿಂದ ಬಿತ್ತುವುದಕ್ಕೆ, ಹರಗುವುದಕ್ಕೆ ಅಡ್ಡಿಯಾಗುತ್ತವೆಂದು ಇಂಥ ತುಂಡು ತುಂಡು ಭೂಮಿಗಳನ್ನು ವಶಪಡಿಸಿಕೊಂಡುಬಿಡುತ್ತಾರೆ. ಜಮೀನ್ದಾರರ ಭೂಮಿಗಳ ನಡುವೆ ತಮ್ಮ ಅಲ್ಪ ಪ್ರಮಾಣದ ಭೂಮಿಯನ್ನು ಉಳುಮೆ ಮಾಡಿಕೊಂಡು ಬದುಕುವುದು ಎಂದರೆ ಹುಲಿಗಳು ಇರುವ ಕಡೆ ಹಸುಗಳು ಬದುಕಿದಂತೆ. ಇದರಿಂದ ಸಣ್ಣ ಪುಟ್ಟ ರೈತರು ಭಯಗೊಂಡು ಜಮೀನ್ದಾರರಿಗೆ ಬಿಟ್ಟುಕೊಡುತ್ತಾರೆ. ಮುಂದೆ ಇಂಥ ಭೂಮಿಗಳು ಜಮೀನ್ದಾರರಿಗೆ ಸೇರಿ ಹೋಗುವ ಉದಾಹರಣೆಗಳೇ ಹೆಚ್ಚು. ಇದು ಇಲ್ಲಿನ ಆರ್ಥಿಕ ಸಂದರ್ಭದಲ್ಲಿ ಕಾಣುವ ನಿಜ ಸಂಗತಿಯಾಗಿದೆ.

'ಉಳುವವನೆ ಭೂಮಿಯ ಒಡೆಯ' ಎಂಬ ಈ ಕಾಯ್ದೆಯ ಪ್ರಕಾರ ಉಳುವವನಿಗೆ ಭೂಮಿ ಸಿಕ್ಕಿತೆ? ಭೂ ಮಾಲೀಕರು ಭೂಮಿಯನ್ನು ಬಿಟ್ಟುಕೊಟ್ಟರೆ? ಭೂಮಿಯನ್ನು ಕೊಡಿಸುವುದಕ್ಕೆ ಕಾಯ್ದೆ ಮಾಡಿದ ಸರಕಾರ ಎಷ್ಟರ ಮಟ್ಟಿಗೆ ಪ್ರಾಮಾಣಿಕವಾಗಿ ದುಡಿಯಿತು? ಎಂಬ ಪ್ರಶ್ನೆಗಳನ್ನು ಎತ್ತುವ ಕೆಲವು ಕಥೆಗಳಿವೆ. 'ಒಂದು ಊರಿನ ಕಥೆ' (ಚಂದ್ರಕಾಂತ ಕುಸನೂರ)ಯಲ್ಲಿ ಈ ಸಮಸ್ಯೆಯಿದೆ. ಬದಲಾದ ರಾಜಕೀಯ ಪರಿಸ್ಥಿತಿಯಲ್ಲಿ ಸಮಾಜ ಎದುರಿಸಿದ ಸಮಸ್ಯೆಗಳ ಸ್ಥಿತಿಗತಿಗಳನ್ನು ತೋರಿಸುವ ರಾಜಕೀಯ ಕಥೆ ಇದು. ಸ್ವಾತಂತ್ರ್ಯ ಸಿಕ್ಕ ಬೆನ್ನಲ್ಲೇ ಆದ ರಾಜಕೀಯ, ಶೇಷಪ್ಪನಿಗೆ ಹುಟ್ಟಿದ ಮಕ್ಕಳು ತಾಯಿ ಎದೆ ಹಾಲಿಲ್ಲದೆ ಮರಣಕ್ಕೀಡಾಗುತ್ತಿದ್ದವು. ರಾಜಣ್ಣ ಹುಟ್ಟಿದಾಗ ಶೇಷಪ್ಪ ಹಿಂದಿನ ಸ್ಥಿತಿಯನ್ನು ನೆನೆಸಿಕೊಂಡು ದುಃಖದಲ್ಲಿದ್ದನು. ಆಗ ಅವನ ಜೀತದಾಳು ಶಿವಪ್ಪನ ಹೆಂಡತಿ ಗೌರಮ್ಮ ನಾಗಣ್ಣನನ್ನು ಹಡೆದಿದ್ದಳು. ಒಡೆಯನ ದುಃಖ ನೋಡಿ ತಡೆದುಕೊಳ್ಳದ ಗೌರಮ್ಮ ತನ್ನ ಗಂಡನ ಜೊತೆ ಮಾತಾಡಿಕೊಂಡು ರಾಜಣ್ಣನಿಗೆ ತನ್ನ ಎದೆ ಹಾಲನ್ನು ನೀಡಲು ಬದುಕಿಸಿದ್ದಳು. ಕೊನೆಗೆ ಒಂದು ಮಗುವಾದರೂ ಉಳಿಯಲೆಂದು ಶೇಷಪ್ಪ ಅದಕ್ಕೆ ಸಮ್ಮತಿಸಿದನು. ಗೌರಮ್ಮನ ಎದೆಹಾಲನ್ನು ರಾಜಣ್ಣ ಹಾಗೂ ನಾಗಣ್ಣ ಇಬ್ಬರೂ ಕುಡಿದು ಬೆಳೆದಿದ್ದರು. ಅದರ ನೆನಪಿಗೋ ಋಣಕ್ಕೋ ಶೇಷಪ್ಪ ಶಿವಪ್ಪನಿಗೆ ಭೂಮಿಯನ್ನು ಉಳುಮೆ ಮಾಡಲು ಕೊಟ್ಟಿದ್ದ. ಅದನ್ನು ತಂದೆಯಿಂದ ಮಗ ನಾಗಣ್ಣನೂ ಮುಂದುವರೆಸಿದ್ದ. 'ಉಳುವವನೆ ಭೂಮಿಯ ಒಡೆಯ' ಕಾಯ್ದೆ ಬಂದ ಸಂದರ್ಭದಲ್ಲಿ ತನ್ನ ಭೂಮಿ ಹೋಗುತ್ತದೆಂಬ ಭಯದಿಂದ ರಾಜಣ್ಣ ನಾಗಣ್ಣನಿಂದ ಭೂಮಿ ಕಸಿದುಕೊಳ್ಳಲು ಪ್ರಯತ್ನಿಸಿದ್ದರಿಂದ ಹೊಡೆದಾಟ ನಡೆದಿತ್ತು. ಶೇಷಪ್ಪ ಗೌರಮ್ಮ ಇದನ್ನು ಕಂಡು ಹಿಂದಿನದನ್ನು ಹೇಳಿ ರಾಜಣ್ಣನಿಂದ ನಾಗಣ್ಣನಿಗೆ ಭೂಮಿ ಕೊಡಿಸುತ್ತಾರೆ. ಒಟ್ಟಿನಲ್ಲಿ ಈ ಸಮಸ್ಯೆಗೆ ಮಾನವೀಯ ದೃಷ್ಟಿಯಿಂದ ಇಲ್ಲಿ ಪರಿಹಾರ ಒದಗುತ್ತದೆ. ಶೇಷಪ್ಪನವರ ಭೂಮಿಯನ್ನು ಉಳುವ ಶಿವಪ್ಪ, ಗೌರಮ್ಮನ ಮಗ ನಾಗಣ್ಣನನ್ನು ತಮ್ಮ ಮಗನೆಂದೇ ಭಾವಿಸಿ ಭೂಮಿಯನ್ನು ಬಿಡುತ್ತಾರೆಯೇ ಹೊರತು ಕಾಯ್ದೆಯ ಪರಿಣಾಮವಾಗಿ ಅಲ್ಲ. ಸಾಮಾನ್ಯವಾಗಿ ಹಳ್ಳಿಯ ಸಾಂಪ್ರದಾಯಿಕ ಕುಟುಂಬಗಳಲ್ಲಿ ಅಕ್ಷರ ಕಲಿತವರಿಂದಲೇ ಬಿಕ್ಕಟ್ಟುಗಳು ಹುಟ್ಟುತ್ತವೆ. ಅಕ್ಷರ ಕಲಿತವರಲ್ಲಿ ಪ್ರತ್ಯೇಕತೆ ಕಾಣಿಸಿ ಕುಟುಂಬಗಳು ಒಡೆಯುವುದಕ್ಕೆ ಕಾರಣವಾಗುತ್ತವೆ ಎಂಬ ಮನೋಭಾವನೆಗಳು ಅನೇಕ ಇಲ್ಲಿನ ಕಥೆಗಳಿಂದ ವ್ಯಕ್ತವಾಗುತ್ತದೆ.

ಇದು ತಲೆಮಾರುಗಳ ತಾತ್ವಿಕ ಸಂಘರ್ಷಕ್ಕೆ ಸಂಬಂಧಪಟ್ಟ ಸಮಸ್ಯೆಯಾಗಿದೆ. ಇದು ಸಹಜವಾಗಿ ಹುಟ್ಟಿಕೊಳ್ಳುವ ಬಿಕ್ಕಟ್ಟಾಗಿದೆ.

**೭.೫. ಕೌಟುಂಬಿಕ ಬದುಕಿನ ಸಮಸ್ಯೆಗಳು**

ಹಳ್ಳಿ ಮತ್ತು ಹಳ್ಳಿಯ ಜನಸಮುದಾಯದ ಸಂಬಂಧಗಳನ್ನು ಕುರಿತು ಬರೆದ ಕಥೆಗಳಂತೆ, ಕುಟುಂಬ ಮತ್ತು ಅದರ ಸಮಸ್ಯೆ ಸಾಮರಸ್ಯಗಳನ್ನು ಕುರಿತು ಈ ಭಾಗದ ಕಥೆಗಾರರು ಹೆಚ್ಚು ಕಥೆಗಳನ್ನು ಬರೆದಿಲ್ಲವೆಂಬುದು ಕುತೂಹಲ ಹುಟ್ಟಿಸುತ್ತದೆ. ಒಂದು ಕುಟುಂಬ ಅದಲ್ಲಿರುವ ಸದಸ್ಯರ ಸಂಬಂಧಗಳು, ಬಿಕ್ಕಟ್ಟುಗಳು, ತಾತ್ವಿಕ ಸಂಘರ್ಷಗಳು, ಸಹಬಾಳ್ವೆಯನ್ನು ಚಿತ್ರಿಸುವ ಕಥೆಗಳು ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಯಾಕೆ ಸೃಷ್ಟಿಯಾಗಿಲ್ಲ? ಎಂಬ ಪ್ರಶ್ನೆ ಮೂಡುತ್ತದೆ. ಹಳ್ಳಿಯ ಬದುಕನ್ನು ಕುರಿತು ಬರೆದಷ್ಟು ನಗರದ ಬದುಕನ್ನು ಕುರಿತು ಬರೆದಿಲ್ಲ. ಈ ಹೊತ್ತಿನ ಪೀಳಿಗೆಯನ್ನು ಗಮನಿಸಿದರೂ ಇದು ನಿಜವೆನಿಸುತ್ತದೆ. ಸಾಮಾನ್ಯವಾಗಿ ಒಂದು ಹಳ್ಳಿಯೇ ಒಂದು ಕುಟುಂಬದಂತಿರುತ್ತದೆ. ಈ ಹಳ್ಳಿಯಲ್ಲಿರುವ ಹತ್ತಾರು ಕುಟುಂಬಗಳು ಒಂದು ಘಟಕದ ಸದಸ್ಯರಂತಿರುತ್ತಾರೆ. ಊರಗೌಡ ಹಾಗೂ ಮಠದ ಅಧಿಪತಿ(ಸ್ವಾಮಿ)ಗಳ ಅಧೀನದಲ್ಲಿಯೇ ಹಳ್ಳಿಯಿರುತ್ತದೆ. ಇದರಿಂದ ಕುಟುಂಬಕ್ಕೆ ಸಾಮಾನ್ಯವಾಗಿ ಸ್ವತಂತ್ರ ಅಸ್ತಿತ್ವವಿರುವುದು ಕಡಿಮೆ. ಗಂಡ–ಹೆಂಡತಿ, ಅಣ್ಣ–ತಮ್ಮ, ತಂದೆ–ಮಕ್ಕಳ ಜಗಳಗಳು ಮನೆಯಲ್ಲಿಯೇ ಬಗೆಹರಿಯುವುದಿಲ್ಲ. ಊರಗೌಡನ ಪಡಸಾಲೆಯಲ್ಲಿ ಇಲ್ಲವೇ ಮಠಾಧಿಪತಿಯ ಮಠದಲ್ಲಿ ಇತ್ಯರ್ಥವಾಗುವುದೇ ಹೆಚ್ಚು. ಮದುವೆ, ಜವಳ, ತೊಟ್ಟಿಲು, ತಿಥಿ ಮುಂತಾದ ಕಾರ್ಯಗಳು ಕೂಡ ಊರೊಳಗಿನವರ ಸಂಬಂಧಗಳನ್ನು ಇಟ್ಟುಕೊಂಡೇ ನಡೆಯುತ್ತವೆ. ಉತ್ತುವುದು, ಬಿತ್ತುವುದು, ಕಣ ಮಾಡುವುದು, ಹಬ್ಬ ಆಚರಿಸುವುದು, ದನಕರ ಮಾರುವುದು, ಕೊಳ್ಳುವುದು ಮುಂತಾದವು ಸಾಮೂಹಿಕವಾಗಿಯೇ ನಡೆಯುತ್ತವೆ. ಇಂಥ ವ್ಯವಸ್ಥೆ ಇರುವ ಊರುಗಳಲ್ಲಿ ಕುಟುಂಬಕ್ಕೆ ಪ್ರತ್ಯೇಕ ಅಸ್ತಿತ್ವವಿರುವುದು ಕಡಿಮೆ.

ಹೈದರಾಬಾದ್ ಕರ್ನಾಟಕ ಹಿಂದುಳಿದ ಪ್ರದೇಶವೆಂದೇ ಹೆಸರು ಪಡೆದಿದೆ. ಅದಕ್ಕೆ ಅನೇಕ ಕಾರಣಗಳಿವೆ. 'ಆಧುನಿಕತೆ' ಜನ ಸಮುದಾಯಗಳಲ್ಲಿ ಪ್ರವೇಶ ಪಡೆಯಲ್ಲಿಲ್ಲ. ಶಿಕ್ಷಣ ಮತ್ತು ಉದ್ಯೋಗ ಸೌಲಭ್ಯಗಳು ಜನರಿಗೆ ದೊರೆಯುತ್ತ ಹೋದಂತೆ ಮಧ್ಯಮ ವರ್ಗವು ಹುಟ್ಟಿಕೊಂಡು ವ್ಯಕ್ತಿಗಳಲ್ಲಿ ಪ್ರತ್ಯೇಕತೆ ಬೆಳೆಯುತ್ತದೆ. ಪ್ರತ್ಯೇಕತೆಯಿಂದಲೇ ಕುಟುಂಬಗಳಿಗೆ ಅಸ್ತಿತ್ವ ಮತ್ತು ಸ್ವಾತಂತ್ರ್ಯ ಬರುತ್ತದೆ. ಆಗ ಅವುಗಳಿಗೆ ಅವುಗಳದ್ದೇ ಆದ ಅನುಕೂಲಗಳು, ಸಮಸ್ಯೆಗಳು ಸೃಷ್ಟಿಯಾಗುತ್ತವೆ. ಈ ಪ್ರದೇಶದಲ್ಲಿ ಬಡತನವಿದೆ. ಅಕ್ಷರಜ್ಞಾನದ ಕೊರತೆಯಿದೆ. ಜನರಲ್ಲಿ ಸ್ವಾವಲಂಬನೆಯ ಕಲ್ಪನೆಯಿಲ್ಲ. ಸಾವಿರಾರು ಎಕರೆ ಭೂಮಿಯ ಜಮೀನ್ದಾರರಿರುವ ಈ ಪ್ರದೇಶದಲ್ಲಿ ಅವರ ಭೂಮಿಗಳನ್ನೇ ಉಳುವ ಮತ್ತು ಜೀತದಾಳುಗಳಾಗಿ ಬದುಕುವ ಜನಸಾಮಾನ್ಯರಿಗೆ ಸ್ವಾತಂತ್ರ್ಯದ ಕಲ್ಪನೆಯಿರುವುದಿಲ್ಲ. ಇಂಥ ಹಲವಾರು ಕಾರಣಗಳಿಂದ ಕುಟುಂಬಗಳಿಗೆ ತನ್ನದೇ ಆದ ಅಸ್ತಿತ್ವ ಮತ್ತು ಸ್ವಾತಂತ್ರ್ಯವಿತ್ತು ಎನ್ನುವುದು ಎಷ್ಟರ ಮಟ್ಟಿಗೆ ಸರಿ?. ಕುಟುಂಬದ

ಸಮಸ್ಯೆಗಳು ಸಮುದಾಯದ ಸಮಸ್ಯೆಗಳೇ ಆಗಿರುವುದರಿಂದಲೋ ಏನೋ ಈ ಪ್ರದೇಶದ ಕಥೆಗಳಲ್ಲಿ ಕೌಟುಂಬಿಕ ಬದುಕಿನ ಚಿತ್ರಣಗಳ ಪ್ರಮಾಣ ಕಡಿಮೆ ಇದೆ. ಇರುವ ಕೆಲವು ಕಥೆಗಳಲ್ಲಿ ಈ ಪ್ರದೇಶದ ಕೌಟುಂಬಿಕ ವ್ಯವಸ್ಥೆ ಕಾಲಾಂತರದಲ್ಲಿ ಹೇಗೆ ಬದಲಾಗುತ್ತ ನಡೆದಿದೆ ಎಂಬುದರ ಚಿತ್ರಣವಿದೆ.

'ಆ ಮನೆಯ ಕಥೆ' (ಕುಮಾರಿ ನೀಲಾ) ಇದು ಸುಮಾರು ಅರವತ್ತು ವರ್ಷಗಳ ಹಿಂದೆ ಬರೆದ ಕಥೆ. 'ಕಳಚಲಿದೆ ರತ್ನ' (೧೯೫೧) ಎಂಬ ಎ.ಬಿ.ಮುತ್ತಾಳರ ಕಥಾ ಸಂಕಲನದಲ್ಲಿ ಅವರು ತಮ್ಮ ಸಹೋದರಿಯ ಎರಡು ಕಥೆಗಳನ್ನು ಸೇರಿಸಿದ್ದಾರೆ. ಅದರಲ್ಲಿ 'ಆ ಮನೆಯ ಕತೆ' ಒಂದು. ಪ್ರಗತಿಶೀಲ ಸಾಹಿತ್ಯ ಚಳವಳಿಯ ಕಾಲದಲ್ಲಿ ಬರೆದ ಈ ಕತೆ ಭಾವುಕತೆ ಮತ್ತು ರಮ್ಯ ಭಾಷೆಯಿಂದ ಕೂಡಿದೆ. ಜಮೀನ್ದಾರಿ ಮನೆತನಗಳಲ್ಲಿ ಕುಡಿತ, ಜೂಜು, ಪರಸ್ತ್ರೀ ಸಂಗ, ಹೊಡೆದಾಟ ಇವು ಸಾಮಾನ್ಯವಾಗಿ ಇರುತ್ತವೆ. ಇದಕ್ಕೆ ವಿರುದ್ಧವಾದ ಕುಟುಂಬಗಳೂ ಅಸ್ತಿತ್ವದಲ್ಲಿ ಇರಬಹುದು. ಜಮೀನ್ದಾರಿ ಕುಟುಂಬಗಳಲ್ಲಿ ವಿದ್ಯಾವಂತರಿದ್ದು ಕುಡಿತ, ಜೂಜು, ಪರಸ್ತ್ರೀಸಂಗ ಇವುಗಳಿಂದ ದೂರವಿದ್ದು ಜನಸಾಮಾನ್ಯರ ದೃಷ್ಟಿಯಲ್ಲಿ ಗೌರವ ಸ್ಥಾನವನ್ನು ಪಡೆದಿದ್ದವು. ಕೆಟ್ಟ ಅಭ್ಯಾಸಗಳೆಂದು ಕರೆಯುವ ಇವುಗಳಿಂದ ದೂರವಿರುವ ಇಂಥ ಮನೆತನಗಳಿಗೆ ಜನ ವಿಶೇಷವಾದ ಮನ್ನಣೆ-ಗೌರವ ಕೊಡುತ್ತಿದ್ದರು. ಈ ಕಥೆಯಲ್ಲಿ ಇಂಥ ಮನೆತನದ ದುರಂತ ಚಿತ್ರಣವಿದೆ. ವಿದ್ಯಾವಂತರೂ ಸಜ್ಜನರೂ ದಾನಿಗಳೂ ಆದ ಚೆನ್ನಬಸಪ್ಪನವರ ಮೂರು ಜನ ಮಕ್ಕಳು ವಿದ್ಯಾವಂತರಾದರೂ ಒಬ್ಬ ಮಗ ಯಾವುದೋ ಕಾರಣಕ್ಕೆ ತಂದೆ ಜತೆ ಜಗಳವಾಡಿ ಸೈನ್ಯ ಸೇರಿದ. ಇನ್ನೊಬ್ಬ ಮಗ ಅನ್ಯಜಾತಿ ಹುಡುಗಿಯನ್ನು ಮದುವೆ ಮಾಡಿಕೊಂಡು ಬೇರೆ ಹೋದ. ಮೂರನೆ ಮಗ ಚಂದ್ರಶೇಖರನ ಮೇಲೆ ನಂಬಿಕೆಯಿಟ್ಟು, 'ಚಂದ್ರಭವನ' ಎಂಬ ಮನೆ, ಆಸ್ತಿಯನ್ನೂ ಅವನ ಹೆಸರಿಗೆ ಮಾಡಿಸಿದರು. ಸುಸಂಸ್ಕೃತ ಮನೆತನದ ಕನ್ಯೆ ಶಾರದಳನ್ನು ತಂದು ಮದುವೆ ಮಾಡಿಸಿದರು. ನಂತರದ ಕೆಲವೇ ವರ್ಷಗಳಲ್ಲಿ ಮಗ ಕುಡಿದು, ಜೂಜು ಆಡಿ ಮನೆತನದ ಗೌರವವನ್ನು ಹಾಳು ಮಾಡಿದನು. ನಂತರ ಪಶ್ಚಾತ್ತಾಪದಿಂದ ಆತ್ಮಹತ್ಯೆ ಮಾಡಿಕೊಂಡನು. 'ಪ್ರತಿಷ್ಠಿತ' ಎಂದು ಕರೆಸಿಕೊಂಡ ಮನೆತನಗಳ ಜನರು ಇಂಥ ಕಳಂಕ ತರುವ ವಿಷಯದಲ್ಲಿ ಜನಕ್ಕೂ ಮನಕ್ಕೂ ಅಂಜುತ್ತಿದ್ದರು. ಇಂಥ ದುರಭ್ಯಾಸಗಳು ಸಮಾಜದಲ್ಲಿ ಕಳಂಕಪ್ರಾಯವಾಗಿದ್ದವು ಎಂದು ಈ ಕಥೆ ಹೇಳುತ್ತದೆ. ಇಂಥ ಒಂದು 'ಪ್ರತಿಷ್ಠಿತ' ಮನೆ ಕುಡಿತ, ಜೂಜುನಿಂದ ಹಾಳಾದದ್ದು ಎಂದರೆ ಜನ ಸಾಮಾನ್ಯರ ಕಣ್ಣಲ್ಲಿ ಒಂದು ಸಾಮ್ರಾಜ್ಯ ಹಾಳಾದಂತೆ ಕಾಣಿಸುತ್ತಿತ್ತು.

ಸಾಮಾನ್ಯವಾಗಿ ಸಂಪ್ರದಾಯ, ನಂಬಿಕೆ, ಪದ್ಧತಿಗಳು ಮನುಷ್ಯನನ್ನು ನಿಯಂತ್ರಿಸುತ್ತವೆ. ಇವುಗಳ ಆಚರಣೆ ಸಂಸ್ಕೃತಿಯ ಭಾಗವಾಗಿದ್ದರೆ ಅವು ಮನುಷ್ಯನ, ಸಮಾಜದ ಒಳಿತಿಗೆ ಕಾರಣವಾಗಿರುತ್ತವೆ. ಯಾವುದೇ ಸಂಪ್ರದಾಯ, ನಂಬಿಕೆ, ಪದ್ಧತಿಗಳು ಸಾಮಾಜಿಕ ಅನಿಷ್ಟವಾಗಿ ಆಚರಣೆಯಲ್ಲಿ ವ್ಯಕ್ತವಾದರೆ ಅದು ಜೀವವಿರೋಧಿಯಾಗಿ ಸಮಾಜಕ್ಕೆ ಕಳಂಕವಾಗಿ ಪರಿಣಮಿಸುತ್ತದೆ.

ಇವುಗಳನ್ನು ಮನುಷ್ಯನೇ ಸೃಷ್ಟಿಸಿಕೊಂಡಿದ್ದರಿಂದ ಇವುಗಳಲ್ಲಿ ಸ್ವಾರ್ಥವಿರುವುದು ಸಹಜ. ಅವುಗಳ ಬಳಕೆಯಲ್ಲಿ ಮನುಷ್ಯನ ಅಜ್ಞಾನ ಮತ್ತು ಮೂಢ ಶ್ರದ್ಧೆ ವ್ಯಕ್ತವಾಗುತ್ತವೆ. ಸಮಾಜಕ್ಕೆ ಹಿತವಾಗುವಂತಿದ್ದರೆ ಅಂಥ ನಂಬಿಕೆಗಳ ಆಚರಣೆಯಲ್ಲಿ ಮನುಷ್ಯನ ವಿವೇಕ ಕಾಣುತ್ತದೆ. ಮಾರಕವಾಗುವಂತಿದ್ದರೆ ಅದು ಮನುಷ್ಯನ ಅಜ್ಞಾನವನ್ನು ತೋರಿಸುತ್ತದೆ. ಆದರೆ ಮನುಷ್ಯ ಇವುಗಳನ್ನು ಸ್ವಾರ್ಥಕ್ಕಾಗಿ ಬಳಸಿದರೆ ಸಾಂಸ್ಕೃತಿಕ ಅಪಚಾರವಾಗುತ್ತದೆ. ಉದಾಹರಣೆಗೆ ಹೆಣ್ಣು ದೇವತೆಗೆ ಸೇವೆಯ ಹೆಸರಿನಲ್ಲಿ ಮುಗ್ದ ಯುವತಿಯರನ್ನು 'ಬಸವಿ' ಬಿಡುವ ಪದ್ಧತಿ ಸಮಾಜದಲ್ಲಿ ರೂಢಿಯಲ್ಲಿದೆ. ಆದರೆ ಮೇಲ್ವರ್ಗದವರು ಇದನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡು ಮುಗ್ಧ ಯುವತಿಯರನ್ನು ಲೈಂಗಿಕವಾಗಿ ಶೋಷಿಸುತ್ತಲೇ ಬಂದಿದ್ದಾರೆ. ಇದಕ್ಕೆ ಬಲಿಯಾಗುವವರು ಕೆಳವರ್ಗದವರು. ಆರ್ಥಿಕವಾಗಿ, ಮಾನಸಿಕವಾಗಿ ದುರ್ಬಲವಿರುವವರೇ ಆಗಿರುವುದು ವಿಪರ್ಯಾಸದ ಸಂಗತಿಯಾಗಿದೆ.

ಈ ಭಾಗದ ಕಥೆಗಳಲ್ಲಿ ಕೆಳವರ್ಗದ ದಲಿತ ಮಹಿಳೆಯರಿಗೆ ಅನೇಕ ರೀತಿಯ ಸಮಸ್ಯೆಗಳಿರುವುದು ಕಂಡು ಬರುತ್ತದೆ. ಇಲ್ಲಿನ ಮಹಿಳೆಯರಲ್ಲಿ ಗಂಡಸರಿಗಿಂತ ಹೆಚ್ಚಿನ ದುಡಿಮೆ ಮತ್ತು ಸಂಸಾರದ ಜವಾಬ್ದಾರಿಯನ್ನು ವಹಿಸಿರುವುದು ಪ್ರಧಾನವಾಗಿ ಕಂಡು ಬರುತ್ತದೆ. ಅವಳು ಹೊಟ್ಟೆಗಾಗಿ ಹಿಟ್ಟು, ನೀರು, ಬೆಂಕಿಯನ್ನು ಸಂಪಾದಿಸಿಕೊಂಡು ಅಡಿಗೆ ಮನೆಯನ್ನು ಮತ್ತು ಹಡೆದ ಮಕ್ಕಳನ್ನು ನೋಡಿಕೊಳ್ಳಬೇಕು. ಗಂಡನ ದುಡಿತ ಅಷ್ಟಕಷ್ಟೆ. ಅವನ ಹೊಟ್ಟೆಯನ್ನೂ ತುಂಬಿಸಿ, ಬೀಡಿಗೂ ಹೆಂಡಕ್ಕೂ ದುಡ್ಡು ಕೊಡಬೇಕು. ಆದರೂ ಅವಳಿಗೆ ಅವನಿಂದ ಕಿರುಕುಳ ತಪ್ಪಿದ್ದಲ್ಲ. ಇನ್ನೊಂದು ಕಡೆ ದುಡಿಸಿಕೊಳ್ಳುವ ಒಡೆಯನ ಅಧೀನದಲ್ಲೂ ಶೋಷಣೆ ಅವಳಿಗೆ ತಪ್ಪಿದ್ದಲ್ಲ. ಗಂಡನಿಗೂ ಸುಖ ನೀಡಬೇಕು, ಒಡೆಯ ಬೇಡಿದರೂ ಸುಖ ನೀಡಬೇಕು. ಇಷ್ಟಾಗಿಯೂ ಅವಳಿಗೆ ಯಾವುದಕ್ಕೂ ಸ್ವಾತಂತ್ರ್ಯವಿಲ್ಲ. ಮಹಿಳೆಗೆ ಕೆಲವು ಸಂದರ್ಭಗಳಲ್ಲಿ ತಾನು ಹೆತ್ತ ಮಗುವಿನಿಂದಲೆ ಗಂಭೀರ ಬಿಕ್ಕಟ್ಟು ಎದುರಿಸಿರುವುದು ಕಾಣುತ್ತದೆ. ಇದಕ್ಕೆ ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳೂ ಕಾರಣವಾಗಿವೆ.

**೭.೬. ಹಿಂದೂ-ಮುಸ್ಲೀಂ ಸಂಬಂಧಗಳು**

'ಹೈದರಾಬಾದ್ ಕರ್ನಾಟಕ'ವನ್ನು ನಿಜಾಮ್ ಕರ್ನಾಟಕ, ಮೊಗಲಾಯಿ ಭಾಗ ಎಂದು ಗುರುತಿಸಲಾಗುತ್ತಿದೆ. ಈ ಪ್ರದೇಶ ನೆನಪಾದರೆ ಸಾಕು ನಿಜಾಮರು, ಮುಸ್ಲೀಮರ ಆಳ್ವಿಕೆ ನೆನಪಾಗುತ್ತದೆ. ಈ ಪ್ರದೇಶದ ಚರಿತ್ರೆಯೇ ಇದಕ್ಕೆ ಕಾರಣವಾಗಿದೆ. ಕಳೆದ ಮೂರ್‍ನಾಲ್ಕು ಶತಮಾನಗಳ ಕಾಲ ಈ ಪ್ರದೇಶ ಸಂಪೂರ್ಣವಾಗಿ ಮುಸ್ಲೀಂ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಭಾರತಕ್ಕೆ ಅನ್ಯರ ದಾಳಿ ಆದಾಗಿನಿಂದಲೇ ಅವರ ಸಂಸ್ಕೃತಿಯೂ ಇಲ್ಲಿ ದಾಳಿ ಮಾಡಲಾರಂಭಿಸಿತು. ರಾಜಕೀಯ ಪ್ರಾಬಲ್ಯದಿಂದ ಮುಸ್ಲೀಮರು ಕರ್ನಾಟಕದ ತುಂಬ ತಮ್ಮ ಪ್ರಭಾವ ಬೀರುತ್ತ, ಧರ್ಮ ಮತ್ತು ರಾಜ್ಯ ಎರಡನ್ನೂ ಏಕಕಾಲಕ್ಕೆ ವಿಸ್ತರಿಸಲು ತೊಡಗಿದರು ಆಗ ಇಲ್ಲಿಯ ಕೆಳವರ್ಗದ ಜನರು ಅನೇಕ ರಾಜಕೀಯ, ಧಾರ್ಮಿಕ, ಒತ್ತಡಗಳಿಂದಾಗಿ ಮುಸ್ಲೀಂ ಮತಕ್ಕೆ ಮತಾಂತರ ಹೊಂದತೊಡಗಿದರು.

೧೪ನೆಯ ಶತಮಾನದ ಹೊತ್ತಿಗೆ ಬಹಮನಿ ರಾಜ್ಯ ನೆಲೆಗೊಂಡ ನಂತರ 'ಹೈದರಾಬಾದ್ ಕರ್ನಾಟಕ' ಪ್ರದೇಶ ಮುಸ್ಲಿಮರ ಅಧೀನಕ್ಕೆ ಹೋಯಿತು. ಇಬ್ರಾಹಿಂ ಆದಿಲ್‌ಶಾಹಿ ದೊರೆಯಂಥ ಮುಕ್ತ ಮನಸ್ಸಿನ ವ್ಯಕ್ತಿಯಿಂದ ಎರಡು ಭಿನ್ನ ಸಂಸ್ಕೃತಿಯ ಜನಾಂಗಗಳಲ್ಲಿ ಸಹನೆ-ಸಾಮರಸ್ಯ ಚಿಗುರತೊಡಗಿತು. ಜೊತೆಗೆ ಉತ್ತರದಿಂದ ಬಂದ ಸೂಫಿಗಳು ಈ ಭಾಗದಲ್ಲಿ ತಮ್ಮ ಮುಕ್ತ ಜೀವನ ವ್ಯವಸ್ಥೆಯಿಂದ ಜನಸಾಮಾನ್ಯರಲ್ಲಿ ಬೇರುಬಿಟ್ಟು ನಿಂತರು. ೧೨ನೆಯ ಶತಮಾನದ ನಂತರ ಶರಣ ಪರಂಪರೆಯ ಉತ್ತರಾಧಿಕಾರಿಳಾಗಿ ಮೂಡಿಬಂದ ತತ್ವಪದಕಾರರು ಜನಸಾಮಾನ್ಯರಲ್ಲಿ ಸಾಮಾನ್ಯರಾಗಿ ಬೆರೆತರು. ಸರಳ ಜೀವನ ವ್ಯವಸ್ಥೆಯ ಸೂಫಿಗಳನ್ನು ಕಂಡು ಅವರಿಗೆ ಹತ್ತಿರದವರಾಗಿ ಒಂದೇ ನಾಣ್ಯದ ಎರಡು ಮುಖಗಳಂತಾದರು. ಹೀಗಾಗಿ ಹಿಂದೂ ಮುಸ್ಲಿಂ ಜನ ಸಮುದಾಯಗಳು ಅನೇಕ ವಿಷಯಗಳಲ್ಲಿ ಅನ್ಯೋನ್ಯತೆ ಗಳಿಸಲಾರಂಭಿಸಿದರು. ಚರಿತ್ರೆಯಲ್ಲಿ ಈ ಅನ್ಯೋನ್ಯತೆಗೆ ಈ ಪ್ರದೇಶದಲ್ಲಿ ನೂರಾರು ಕುರುಹುಗಳು ಸಿಗುತ್ತವೆ. ತಿಂತಿಣಿ ಮೋನಪ್ಪಯ್ಯ ಪರಾಕು ಆಗಿರುವ 'ಏಕ್ ಲಾಖ್ ಐಂಸೀ ಹಜಾರ್ ಪಾಂಚೋ ಪೀರ್ ಪೈಗಂಬರ್ ಮೌನೋದಿನ್, ಜೀತಾ ಫಿರ್ ಜಗದ್ಗುರು ಪೈಗಂಬರೋದೀನ್ ಮೌನೋದಿನ್, ಕಾಶೀಪತಿ ಗಂಗಾಧರ ಹರಹರ ಮಹಾದೇವ' ಕುರುಹಿಗೆ ಇದು ಒಂದು ಸಾಕ್ಷಿ ಸಾಕೆನಿಸುತ್ತದೆ. ಇದು ಎರಡು ಸಂಸ್ಕೃತಿಗಳ ನೇತಾರರ ಉದಾರ ವಾದೀತನದಿಂದ ಸಾಧಿತವಾದದ್ದಲ್ಲ. ಇದನ್ನು ಗಟ್ಟಿಗೊಳಿಸಿದ ಜನಸಾಮಾನ್ಯರ ಮನಸ್ಸು ಇನ್ನೂ ದೊಡ್ಡದೆಂದೇ ಕಾಣುತ್ತದೆ. ದುಡಿವ ವರ್ಗದವರಿಗೆ ಧರ್ಮ ಜಾತಿ ಮುಖ್ಯವಾಗುವುದಿಲ್ಲ. ದುಡಿತದ ನಡುವೆ ತಲೆದೋರಿದ ಸಂಕಷ್ಟಗಳ ಪರಿಹಾರಕ್ಕೆ ಅಕ್ಕಪಕ್ಕದ ದೈವವನ್ನು ಮೊರೆ ಹೋಗುತ್ತಾರೆ. ಆ ದೈವದ ಚರಿತ್ರೆ ಅವರಿಗೆ ಮುಖ್ಯವಾಗುವುದಿಲ್ಲ. ಸಂಕಷ್ಟಗಳನ್ನು ನಿವೇದಿಸಿಕೊಳ್ಳಲು ಅವರಿಗೆ ಒಂದು ದೈವ ಬೇಕಷ್ಟೇ. ಅದು ಗುಡಿಯಲ್ಲಿರಬಹುದು, ಚಾವಡಿಯಲ್ಲಿರಬಹುದು. ಮಸೀದಿ ದರಗಾ ಯಾವುದಾದರೂ ಸರಿಯೆ. ಅಲ್ಲಿಗೆ ಹೋಗಿ ತಮ್ಮ ನೋವನ್ನು ನಿವೇದಿಸಿಕೊಂಡು ನಿರುಮ್ಮಳರಾಗಿರುತ್ತಾರೆ. ಕೆಳವರ್ಗದಲ್ಲಿ ಇರುವ ಇಂಥ ಗುಣದಿಂದಾಗಿಯೇ ಹೈದರಾಬಾದ್ ಕರ್ನಾಟಕದ ಪ್ರದೇಶದಲ್ಲಿ ಹಿಂದೂ ಮುಸ್ಲಿಂ ಒಂದೇ ಅಂಗಳದಲ್ಲಿ ಕಷ್ಟಸುಖಗಳ ಕೊಡುಕೊಳ್ಳುವಿಕೆ ನಡೆದಿದೆ. ಹಿಂದೂ ಮುಸ್ಲಿಂ ಹಬ್ಬಗಳು ಇಬ್ಬರನ್ನು ಒಂದು ಮಾಡಿವೆ. ಹಸನಪ್ಪ, ಹುಸೇನಪ್ಪ, ಫಕೀರಪ್ಪ, ಈ ಹೆಸರುಗಳಿಂದ ಜಾತಿಯನ್ನು ನಿರ್ಧರಿಸಲಾಗುವುದಿಲ್ಲ. ೧೨ನೇ ಶತಮಾನದಲ್ಲಿ ನಡೆದ ಕ್ರಾಂತಿಗಿಂತ ಈ ಕ್ರಾಂತಿಯೂ ಮುಖ್ಯವೆಂದು ಹೇಳಬೇಕಾಗುತ್ತದೆ.

ಈ ಪ್ರದೇಶದಲ್ಲಿ ಬಹುದೀರ್ಘ ಕಾಲದಿಂದ ಎರಡು ಭಿನ್ನ ಸಂಸ್ಕೃತಿಯ ಜನ ಸಮುದಾಯಗಳು ಕೂಡಿ ಬಾಳಿವೆ. ಇವುಗಳ ನಡುವಿನ ಸಾಮರಸ್ಯ, ತಾತ್ವಿಕ ಸಂಘರ್ಷ, ಸಾಧಕ ಬಾಧಕಗಳನ್ನು ಕುರಿತು ಈ ಪ್ರದೇಶದ ಬರಹಗಾರರು ಹೇಗೆ ಗ್ರಹಿಸಿದ್ದಾರೆ ಎಂದು ಅವರ ಸಾಹಿತ್ಯ ಕೃತಿಗಳನ್ನು ಪರಿಶೀಲಿಸಿದರೆ ಅಂಥ ಪ್ರಯತ್ನಗಳು ಇಲ್ಲದಿರುವುದು ಕುತೂಹಲವೆನಿಸುತ್ತದೆ. ಈ ಎರಡು ಕೋಮಿನವರ ನಡುವೆ ಸಾಮರಸ್ಯಗಳನ್ನು ಹುಡುಕುವುದು ಯಾವಾಗಲೂ ಅವುಗಳ ಕೊರತೆ ಇದ್ದಾಗ ನಡೆಯುತ್ತದೆ. ಆದರೆ ಹೆಕ್ಕಿ ತೆಗೆಯುವ ಕೆಲಸ 'ರಾಜಕೀಯ' ಎನಿಸುತ್ತದೆ. ಆದರೆ

ಈ ಪ್ರದೇಶದಲ್ಲಿ ಎರಡು ಭಿನ್ನ ಸಂಸ್ಕೃತಿಯ ಸಮುದಾಯಗಳು ನಿಸರ್ಗ ಸಹಜ ಎಂಬಂತೆ ಬೆರೆತಿವೆ. ಇಂಥ ನಿಸರ್ಗ ಸಹ ಸಂಬಂಧಗಳ ಚಿತ್ರಣವು ಸೇರಿದಂತೆ ಹಿಂದೂ-ಮುಸ್ಲೀಂ ಸಂಬಂಧಗಳು ಅವು ಹೇಗೆ ಇರಲಿ ಅವುಗಳ ಚಿತ್ರಣ ಕಥೆಗಳಲ್ಲಿ ಬಂದಿವೆಯೇ? ಪ್ರಯತ್ನಪಟ್ಟು ಹುಡುಕಿದರೆ ಅಲ್ಪ ಸ್ವಲ್ಪ ಕಾಣಿಸುತ್ತವೆ. ಈ ಎರಡು ಸಂಸ್ಕೃತಿಯ ಸಾಂಸ್ಕೃತಿಕ ಸಂಬಂಧದ ದೊಡ್ಡ ಪರಂಪರೆ ಇರುವಾಗ ಇಲ್ಲಿಯ ಬರಹಗದಾರರಿಗೆ ಇಂಥದೊಂದು ಬದುಕಿನ ಚಿತ್ರಣವನ್ನು ನೀಡಲು ಯಾಕೆ ಸಾಧ್ಯವಾಗಿಲ್ಲ? ಸಾಹಿತ್ಯ ಪರಂಪರೆಯಲ್ಲಿ ೧೯ನೇ ಶತಮಾನದಲ್ಲಿ ಮಾತ್ರ ಮುಸ್ಲೀಂ ತತ್ವಪದಕಾರರನ್ನು ಬಿಟ್ಟರೆ ಈ ಭಾಗದಲ್ಲಿ ಈ ಹೊತ್ತಿನವರೆಗೆ ಒಬ್ಬ ಮುಸ್ಲೀಂ ಬರಹಗಾರರು ಹುಟ್ಟಿಕೊಂಡಿಲ್ಲ ಎಂಬುದು ಕುತೂಹಲದ ಸಂಗತಿ ಆಗಿದೆ.

ಗ್ರಾಮೀಣ ಪ್ರದೇಶಗಳಲ್ಲಿರುವ ಮುಸ್ಲೀಮರು ಬದುಕು ಕೆಳವರ್ಗದ ಜನರಿಗಿಂತ ಭಿನ್ನವಾಗಿಲ್ಲ. ಇವರಿಗೆ ಉರ್ದು ಬರುವುದಿಲ್ಲ. ನಮಾಜು ಗೊತ್ತಿಲ್ಲ. ಮುಸ್ಲೀಂ ಸಂಸ್ಕೃತಿಯ ಜೀವನ ಕ್ರಮದ ರೀತಿ ನೀತಿಗಳನ್ನು ಅಳವಡಿಸಿಕೊಂಡಿಲ್ಲ ಎಂಬುದು ನಿಜ. ಅದಕ್ಕೆ ಅನೇಕ ಕಾರಣಗಳಿವೆ. ಇವರು ಮೂಲ 'ಇಸ್ಲಾಂ' ಸಂಸ್ಕೃತಿಯ ಪರಂಪರೆಗೆ ಸೇರಿದವರಲ್ಲ. ಇವರೆಲ್ಲ ಮತಾಂತರ ಹೊಂದಿದವರು. ಪಿಂಜಾರರು, ಕಟುಕರು, ಜಾತಿಗಾರರು ಎಂಬ ಇಸ್ಲಾಂ ಜನಾಂಗದ ಉಪಜಾತಿಗೆ ಸೇರಿದವರು. ಸಾಂಸ್ಕೃತಿಕವಾಗಿ ಇವರೂ ದಲಿತರೆಂದು ಕಾಣುತ್ತದೆ. ಈ ಭಾಗದ ಕಥೆಗಳಲ್ಲಿ ಕಾಣಿಸಿಕೊಂಡವರು ಇವರೆ. ಹೀಗಾಗಿ ಕೆಳವರ್ಗದ ಜನರಂತೆ ಇವರಿದ್ದಾರೆ. ಧರ್ಮ ಮತ್ತು ರಾಜಕಾರಣ ಇವರನ್ನು ಭಿನ್ನರನ್ನಾಗಿ ಮಾಡಿದೆ.

'ಹಿಂದೂ-ಮುಸ್ಲೀಂ' ಸಂಬಂಧಗಳು ಕೆಲವು ಕಥೆಗಳಲ್ಲಿ ಕಾಣಿಸಿದೆ. ಅದನ್ನು ಸಂಬಂಧ ಎಂದು ಕರೆಯುವುದು ಕಷ್ಟ. ಇಲ್ಲಿನ ಕಥೆಗಳಲ್ಲಿನ ಕೆಲವು ಸಂದರ್ಭಗಳು ಸಂಬಂಧದ ಸ್ವರೂಪವನ್ನು ತಿಳಿಸುತ್ತವೆ. 'ಉರಿದ ಬದುಕು' (ಶಾಂತರಸ) ಕಥೆಯಲ್ಲಿ ಒಂದು ಸನ್ನಿವೇಶ ಹೀಗಿದೆ: ಕಾಶೀಮಲಿ ತನ್ನ ರಜಾಕಾರರ ತಂಡದೊಂದಿಗೆ ನಬೆಮ್ಮನ ಮನೆಗೆ ದಾಳಿ ಮಾಡುತ್ತಾನೆ. ಒಂದು ಕೋಣೆಯ ಬಾಗಿಲಿಗೆ ನಬೆಮ್ಮ ಅಡ್ಡನಿಂತಿದ್ದಾಳೆ. ಕಾಶೀಮಲಿ ಬಂದೂಕಿನೊಂದಿಗೆ ಆ ಕೋಣೆಗೆ ನುಗ್ಗಲು ಪ್ರಯತ್ನಿಸುತ್ತಾನೆ. ನಬೆಮ್ಮ ಒಳಗೆ ಬಿಡುವುದಿಲ್ಲ. 'ಮೊದ್ಲ ನನ್ನ ಕೊಲ್ಲು ಆ ಮ್ಯಾಲೆ ಒಳಗ ಹೋಗು' ಎನ್ನುತ್ತಾಳೆ. ಸೋತ ಕಾಸೀಮಲಿ ಬಂದೂಕು ಕೆಳಗಿಳಿಸಿ ಮರಳಿ ಹೋಗುತ್ತಾನೆ. ನಬೆಮ್ಮ ರಜಾಕಾರರ ವಿರುದ್ಧ ಹೋರಾಡುತ್ತಿದ್ದ ತಿಪ್ಪಣ್ಣನನ್ನು ಕಾಶೀಮಲಿಯಿಂದ ರಕ್ಷಿಸಲು ಒಳಗೆ ಅಡಗಿಸಿಟ್ಟಿರುತ್ತಾಳೆ. ಅದೇ ಊರಿನ ಕಾಶೀಮಲಿ ರಜಾಕಾರರ ದಾಳಿಯ ಕಾಲದಲ್ಲಿ ಸಮಯ ಸಾಧಕನಂತೆ ರಜಾಕಾರನಾಗಿ ಕೂಡಿಬಾಳಿದ ತನ್ನೂರಿನ ಜನರಿಗೆ ತೊಂದರೆ ಕೊಡಲು ನಿಂತಿರುತ್ತಾನೆ. ಸಹಜವಾಗಿಯೇ ನಬೆಮ್ಮಳಿಗೆ ಅದನ್ನು ಸಹಿಸುವುದು ಅಸಾಧ್ಯವಾತ್ತದೆ. ರಜಾಕಾರರ ದಾಳಿಯಲ್ಲಿ ತಿಪ್ಪಣ್ಣ ಗುಪ್ತವಾಗಿ ಅವರ ವಿರುದ್ಧ ಹೋರಾಟ ನಡೆಸಿರುತ್ತಾನೆ. ಆ ರಾತ್ರಿ ಅನಿವಾರ್ಯವಾಗಿ ಅಡಗಿಕೊಳ್ಳಲು ಅವನಿಗೆ ಸುರಕ್ಷಿತ ಸ್ಥಳಬೇಕಾಗಿರುತ್ತದೆ. ತನ್ನ ತಂಗಿಯ ಮನೆಯಲ್ಲಿಯೇ ಅವನಿಗೆ ಅಡಗಿಕೊಳ್ಳಲು ಅವಕಾಶ ಸಿಗುವುದಿಲ್ಲ. ಏಕೆಂದರೆ ತಂಗಿಯ ಗಂಡ

ರಜಾಕಾರರಲ್ಲಿ ಸೇರಿರುತ್ತಾನೆ. ಕೊನೆಗೆ ತಿಪ್ಪಣ್ಣನಿಗೆ ಸುರಕ್ಷೆಯ ಸ್ಥಳ ನಬೆಮ್ಮಳ ಮನೆ ಎಂದು ಕಾಣುತ್ತಾನೆ. ನಬೆಮ್ಮ ಪುನಃ ಕಾಶೀಮಲಿಯ ದಾಳಿಗೆ ಬಲಿಯಾಗುತ್ತಾಳೆಯೇ ಹೊರತು, ತಿಪ್ಪಣ್ಣನನ್ನು ಅಡಗಿಸಿಟ್ಟ ಸ್ಥಳಕ್ಕೆ ಬಿಡುವುದಿಲ್ಲ. ಈ ಸಂದರ್ಭದಲ್ಲಿ ನಬೆಮ್ಮಳಿಗೆ ತಿಪ್ಪಣ್ಣನನ್ನು ರಕ್ಷಿಸುವುದು ನ್ಯಾಯ ಅನಿಸುತ್ತದೆ. ಇಂತ ಸಂದರ್ಭ ಮನುಷ್ಯನ ಮೂಲ ಗುಣವನ್ನು ತೋರಿಸುತ್ತದೆ. ಕಾಶೀಂಅಲಿ, ನಬೆಮ್ಮ ಈ ವಿಷಯದಲ್ಲಿ ಒಂದಾಗುವಂತೆ ಯಾವ ಬಗೆಯ ಸಂಬಂಧವು ಕೆಲಸ ಮಾಡುವುದಿಲ್ಲ. ತಿಪ್ಪಣ್ಣನನ್ನು ಉಳಿಸುವುದಕ್ಕೆ ನಬೆಮ್ಮಳಲ್ಲಿ ಇರುವ ಕಾರಣವೆಂದರೆ ಪ್ರಾಮಾಣಿಕತೆ ಮತ್ತು ಮಾನವೀಯತೆ ಮಾತ್ರ ಎಂದು ಕಾಣುತ್ತದೆ.

'ಬಡೆಸಾಬು ಪುರಾಣ' (ಶಾಂತರಸ) ಕಥೆಯಲ್ಲಿ, ಬಡೆಸಾಬನ ಬೆಂಬಲಿಗರಾಗಿ ಬೇಡರ ಪರಸೆಣ್ಣ, ಕರ್ಯ, ನಿಂಗಿ, ಬುಡ್ಡೆಮ್ಮ, ಉಪ್ಪಾರ ಜಂಗಲೆಪ್ಪ, ಕಬ್ಬೇರ ನಾರಾಯಣ ಮುಂತಾದವರು ನಿಂತು ಬಹುಕಾಲದಿಂದ ಕೂಡಿ ಬಂದ ತಮ್ಮ ಜನರನ್ನೇ ಹಿಂಸೆಗೆ ಗುರಿಮಾಡುತ್ತಾರೆ. ಬಡೆಸಾಬ ಎಲ್ಲಿಂದಲೋ ಊರಿಗೆ ಬಂದಿರುತ್ತಾನೆ. ಅವನ ಬಳಿಯಿದ್ದ ಹಣ ಮತ್ತು ರಾಜಕೀಯ ಬೆಂಬಲಕ್ಕೆ ಅಂಜಿ ಇವರೆಲ್ಲ ಅವನ ಬೆನ್ನಿಗೆ ಬಿದ್ದಿದ್ದರು. ದಸ್ತಗೀರಿ ಅಬ್ದುಲ್ಲಾ, ಖಾಜಾಸಾಬ್, ಸಲೀಮ್ ಮುಂತಾದವರು ಸ್ಥಳೀಯರೇ ಸಮಯ ಸಾಧಕರಾಗಿ ಬಡೇಸಾಬನ ಹಿಂದಿರುತ್ತಾರೆ. ಬಡೆಸಾಬನ ಒತ್ತಾಯಕ್ಕೆ ಅದೇ ಮುಲ್ಲಾ ರಸೂಲ್‌ಸಾಬ ಮಣಿಯುವುದಿಲ್ಲ. 'ಊರಲ್ಲಿ ಎಲ್ಲರೂ ಅಣ್ಣತಮ್ಮರಂತೆ ಇದ್ದೇವೆ. ಬಡೇಸಾಬನ ಈ ವರ್ತನೆ ಊರಲ್ಲಿ ಜಾತಿಭಾವನೆ ಹುಟ್ಟಿಸುವುದು' ಎಂದು ಖಂಡಿಸುತ್ತಾನೆ. ಕರ್ಯ ಗುಟುಗು ಹೆಂಡಕ್ಕಾಗಿ ತನ್ನ ಹೆಂಡತಿಯನ್ನು ಬಡೇಸಾಬನಿಗೆ ಬಿಟ್ಟಿರುತ್ತಾನೆ. ಬುಡ್ಡಮ್ಮ ಸಾಬಣ್ಣನನ್ನು 'ವರ್ಷಕ್ಕೆ ಎಲ್ಡ ಸೀರೆ ತರಲಾರದ ಗಂಡಸು' ಎಂದು ನಿರಾಕರಿಸಿ ಬಡೇಸಾಬನನ್ನು ಕೂಡುತ್ತಾಳೆ. ಕೆಳವರ್ಗದ ಈ ದಲಿತರು ಈ ರೀತಿ ವರ್ತಿಸುವುದಕ್ಕೆ ಸಾಮಾಜಿಕ, ಆರ್ಥಿಕ, ಒತ್ತಡಗಳೇ ಕಾರಣವಾಗಿರುತ್ತವೆ. 'ಸ್ವಾತಂತ್ರ್ಯ ವೀರ' (ಶಾಂತರಸ) ಕಥೆಯಲ್ಲಿ ಸಿದ್ದಣ್ಣ, ಅಲ್ಲಿಸಾಬು ಸೇರಿಕೊಂಡು ಪರಪ್ಪನ ಹೆಂಡತಿ ಚೆನ್ನಿಯನ್ನು ಕೆಡಿಸುತ್ತಾರೆ. 'ನಾಯಿ ಮತ್ತು ಪಿಂಚಣಿ' (ಶಾಂತರಸ) ಕಥೆಯಲ್ಲಿ ರಂಗಣ್ಣ ಮೌಲನಾಯಕ ಸೇರಿಕೊಂಡು ಊರಿಗೆ ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಸಂಗಪ್ಪನ ಹೆಂಡತಿ ಈರವ್ವನನ್ನು ಹಿಂಸಿಸಿ ಅತ್ಯಾಚಾರ ಮಾಡಲು ಪ್ರಯತ್ನಿಸುತ್ತಾರೆ. ಈ ಸಂಬಂಧಗಳು ಅಪವಿತ್ರ ಮೈತ್ರಿಯಂತೆ ಕಾಣುತ್ತವೆ. ಇದು ವ್ಯಕ್ತಿಯ ಗುಣವನ್ನು ಅವಲಂಬಿಸಿದೆ. ಇದಕ್ಕೆ ಸಮಾಜದ ಸಾಮಾಜಿಕ ವಾತಾವರಣವು ಕಾರಣವಾಗಿದೆ.

'ಚಾಟಿ' (ದೇವೇಂದ್ರ ಕುಮಾರ ಹಕಾರಿ) ಕಥೆಯಲ್ಲಿ, ರವಿ ದಿಲಾವರ್‌ನನ್ನು ಒಮ್ಮೆ ಪ್ರಾಣಾಪಾಯದಿಂದ ಪಾರುಮಾಡುತ್ತಾನೆ. ಅದರಿಂದಾಗಿ ಅವರಲ್ಲಿ ಸ್ನೇಹ ಬೆಳೆಯುತ್ತದೆ. ದಿಲಾವರನ ಮನೆಯವರೆಲ್ಲ ರವಿಗೆ ಪರಿಚಯವಾಗಿ ಅವರ ಕುಟುಂಬದ ಸದಸ್ಯನಾಗುತ್ತಾನೆ. ದಿಲಾವರನ ತಂದೆ ತೀರಿಕೊಂಡಿರುತ್ತಾನೆ. ನವಾಬ ವಂಶಸ್ಥರಾದ ತಾಯಿ ಜುಲೇಖಾಬೇಗಂ, ತಂಗಿ ರಜಿಯಾ ಎಲ್ಲರ ಜೊತೆ ರವಿ ಅನ್ಯೋನ್ಯವಾಗಿ ಸೇರುತ್ತಾನೆ. ಜುಲೇಖಾಬೇಗಂ ರವಿಯನ್ನು ಮಗನಂತೆ

ಪ್ರೀತಿಸುತ್ತಾಳೆ. ಮಗ ದಿಲಾವರ ಬೇಜವಾಬ್ದಾರಿಯಿಂದ ಮನೆಯ ಬಗ್ಗೆ, ತಂಗಿಯ ಬಗ್ಗೆ ಕಾಳಜಿಯಿಲ್ಲದೆ ಉಡಾಳನಾಗಿ ತಿರುಗುತ್ತಿರುತ್ತಾನೆ. ಹುಡುಗಿಯರ ಬೆನ್ನು ಹತ್ತುವುದೇ ಅವನ ಕೆಲಸವಾಗಿರುತ್ತದೆ. ರಜಿಯಾಳ ಮದುವೆಯನ್ನು ಮಾಡಿಸುವ ಜವಾಬ್ದಾರಿಯನ್ನು ಜುಲೇಖಾ ಬೇಗಂ ರವಿಗೆ ವಹಿಸುತ್ತಾಳೆಯೇ ಹೊರತು ಮಗನಿಗಲ್ಲ. ಅಷ್ಟರ ಮಟ್ಟಿಗೆ ರವಿ ಆ ಮುಸ್ಲಿಂ ಮನೆಯಲ್ಲಿ ದಿಲಾವರನ ಸ್ಥಾನವನ್ನು ಪಡೆಯುತ್ತಾನೆ. ಮನುಷ್ಯರ ನಡುವಿನ ಪ್ರೀತಿ ವಿಶ್ವಾಸಕ್ಕೆ ಜಾತಿ ಅಡ್ಡಿ ಬರುವುದಿಲ್ಲ ಎಂಬುದಕ್ಕೆ ಇದು ನಿದರ್ಶನವಾಗಿದೆ.

'ಸಂಬಂಧ' (ಶ್ರೀಕಾಂತ-ಪಾಟೀಲ್) ಕತೆಯಲ್ಲಿ ಹಿಂದೂ ಮುಸ್ಲಿಂ ಸಂಬಂಧವು ಅಂತಿಮ ಹಂತ ತಲುಪಿಸುವ ಬಗ್ಗೆ ಯೋಚಿಸಲಾಗಿದೆ. ಈ ಪ್ರದೇಶದಲ್ಲಿ ಬಹು ದೀರ್ಘಕಾಲದಿಂದ ಕೂಡಿ ಬಂದ ಈ ಎರಡು ಜನಾಂಗಗಳನ್ನು ಕಲುಕಿದ ಘಟನೆ ಎಂದರೆ ರಜಾಕಾರರ ದಾಳಿಯೇ. ಹಿಂದೂ-ಮುಸ್ಲೀಮರ 'ಐಕ್ಯತೆ' ಎಂದರೆ ತಮ್ಮ ತಮ್ಮ ಸಾಂಸ್ಕೃತಿಕ ಅಸ್ತಿತ್ವವನ್ನು ಉಳಿಸಿಕೊಂಡೇ ಅನ್ಯೋನ್ಯತೆಯನ್ನು ಸಾಧಿಸುವುದು ಎಂದರ್ಥ. ಮುಸ್ಲೀಮರು ತಮ್ಮ ಜೀವನ ಕ್ರಮವನ್ನು ಅವರ ಸಂಸ್ಕೃತಿಗೆ ಅನುಗುಣವಾಗಿ ಅನುಸರಿಸುವುದು, ಅದರಂತೆ ಹಿಂದೂಗಳು ಸಹ. ಸಾಮಾನ್ಯವಾಗಿ ಪ್ರಾಮಾಣಿಕ ವರ್ತನೆಗೆ, ಸ್ವಭಾವಕ್ಕೆ, ಸ್ನೇಹಕ್ಕೆ ಜಾತಿ ಅಡ್ಡಗೋಡೆ ಆಗುವುದಿಲ್ಲ. ಆದರೆ ಇದನ್ನು ರಾಜಕೀಯದಿಂದ ಕೂಡಿದ ಮತಾಂಧತೆ ಮಾತ್ರ ಒಡೆಯಬಲ್ಲದು. ರಜಾಕಾರರ ದಾಳಿಯಲ್ಲಿ ಧರ್ಮ ಮತ್ತು ರಾಜಕೀಯ ಶಕ್ತಿಯೆ ಈ ಎರಡು ಜನಾಂಗಗಳ ಅನ್ಯೋನ್ಯ ಸಂಬಂಧಕ್ಕೆ ಕೊಡಲಿಯನ್ನು ಹಾಕಿದ್ದು. 'ಸಂಬಂಧ' ಕಥೆಯಲ್ಲಿ ರಜಾಕಾರರ ಹಾವಳಿಯ ದಿನಗಳಲ್ಲಿ ಹಿಂದು ಮತ್ತು ಮುಸ್ಲೀಮರ ನಡುವೆ ಜಾತಿ ಗಲಭೆ ನಡೆದು, ಊರು ಕೇರಿಗಳು ಉರಿಯತೊಡಗಿದಾಗ ಶಂಕ್ರಪ್ಪ ಮಾಸ್ತಾರ ಮತ್ತು ಮಹಮ್ಮದಸಾಬನ ಕುಟುಂಬಗಳು ಒಂದನ್ನೊಂದು ಸಹಕರಿಸಿ ಜೀವಾಪಾಯದಿಂದ ರಕ್ಷಿಸಿಕೊಂಡವು. ಹೆಸರಿಗೆ ಮಾತ್ರ ಒಂದು ಹಿಂದೂ ಕುಟುಂಬ, ಇನ್ನೊಂದು ಮುಸ್ಲಿಮ್ ಕುಟುಂಬ. ಒಂದನ್ನೊಂದು ರಕ್ಷಿಸಿಕೊಂಡು ನಿಂತಿವೆ. ಇಡಿ ಗಲಭೆ ಯಾರ ಯಾರ ನಡುವೆ ನಡೆಯುತ್ತವೆ? ಆ ಎರಡು ಕುಟುಂಬಗಳು ಹೊರಗೆ ನಡೆದ ದಳ್ಳುರಿಯನ್ನು ಕಂಡು ತಲ್ಲಣಗೊಂಡಿವೆ. ಒಂದು ವೇಳೆ ಹಿಂದೂ ಮತ್ತು ಮುಸ್ಲೀಮರ ನಡುವೆಯೆ ಈ ಗಲಭೆ ನಡೆಯುತ್ತಿದ್ದರೆ ಯಾಕೆ ಮತ್ತು ಇದಕ್ಕೆ ಕೊನೆ ಎಂದು ಪ್ರಶ್ನಿಸಿಕೊಳ್ಳುತ್ತವೆ. ಅದಕ್ಕ ಆ ಎರಡು ಭಿನ್ನ ಸಂಸ್ಕೃತಿಯ ಕುಟುಂಬಗಳ ನಡುವೆ ಮದುವೆ ಸಂಬಂಧ ಏರ್ಪಟ್ಟರೆ ಪರಿಹಾರವಾದೀತು ಎಂದು ಅದಕ್ಕೂ ಸಿದ್ಧವಾಗುತ್ತವೆ. ಮದುವೆ ಏರ್ಪಡಲು ಸಾಧ್ಯವೇ? ಏರ್ಪಟ್ಟರೆ ಪರಿಹಾರ ಸಾಧ್ಯವೆ? ಎಂಬ ಪ್ರಶ್ನೆ ಬೇರೆ. ಒಂದು ಮತೀಯ ಸಂದರ್ಭ ಇಂಥದ್ದನ್ನು ಯೋಚಿಸುವ ಒತ್ತಡಕ್ಕೆ ಪ್ರೇರೇಪಿಸಿತು ಎಂಬುದು ಮುಖ್ಯವಾಗುತ್ತದೆ.

'ಸಹಬಾಳ್ವೆ'ಯ ಹುಡುಕಾಟವು ಈ ಹೊತ್ತಿನಲ್ಲಿ ರಾಜಕೀಯದಿಂದ ಪ್ರೇರಿತವಾಗಿದೆ. ಈ ಪ್ರಶ್ನೆ ಕೇವಲ 'ಹಿಂದೂ-ಮುಸ್ಲೀಂ' ಸಮುದಾಯಗಳಿಗಷ್ಟೆ ಅನ್ವಯಿಸುವುದಿಲ್ಲ. ಹಿಂದೂ ಸಮುದಾಯದ ಒಳಗೇ ಇರುವ ಅನೇಕ ಜಾತಿ-ಜಾತಿಗಳ ನಡುವೆ ಸಾಮರಸ್ಯ ಇದೆಯೇ ಎಂದು ಹುಡುಕಾಡಿದರೆ ಉತ್ತರ ಕಷ್ಟವೇ ಆಗಿದೆ.

ಒಟ್ಟಾರೆಯಾಗಿ ೧೯೦೦-೫೦ರ ನಡುವೆ ಈ ಭಾಗದಲ್ಲಿ ಕಾವ್ಯ ರಚನೆಯಾದಷ್ಟು ಕಥನ ಸಾಹಿತ್ಯ ರಚನೆಯಾಗಿಲ್ಲ. ಕೆಲವೇ ಕೆಲವು ಕೃತಿಗಳು, ಕಥೆಗಾರರು ಸಿಗುತ್ತಾರೆ. ಎ.ಬಿ ಮುತ್ತಾಳ. ಸಗರ ಕೃಷ್ಣಾಚಾರಿ, ದೇವೆಂದ್ರಕುಮಾರ ಹಕಾರಿ, ಅಮರಾನಂದ ಮೊದಲಾದವರು. ಇಲ್ಲಿನ ಆರಂಭದ ಕವಿಗಳಿಗೆ ಬಿ.ಎಂ.ಶ್ರೀ. ಅವರು ಆದರ್ಶವಾಗಿರುವಂತೆ, ಕಥೆಗಾರರು ಅ.ನ.ಕೃ. ಅವರನ್ನು ಅನುಸರಿಸಿರುವುದು ಕಂಡು ಬರುತ್ತದೆ. ಓರೆಗಲ್ಲು, ಸನ್ಮಾನಗಳಲ್ಲಿನ ಕಥೆಗಳನ್ನು ನೋಡಿದರೆ ಪ್ರಗತಿಶೀಲ ಸಾಹಿತ್ಯದ ಪ್ರಭಾವ ಇರುವುದು ತಿಳಿಯುತ್ತದೆ. ಭಾರತ ವಿಭಜನೆಯಾದಾಗ ನಡೆದ ಮತೀಯ ಗಲಭೆಗಳು, ಎರಡು ಮಹಾಯುದ್ಧಗಳು ಸಂಭವಿಸಿದಾಗ ಹುಟ್ಟು ಸಾವುಗಳ ಭೀತಿ ಮತ್ತು ದೇಶಭಕ್ತಿ-ದೇಶಸೇವೆ, ಕವಿ ಕಲಾವಿದರ ಕಥೆ, ಭಗ್ನಪ್ರೇಮ, ಬಡತನ ದಾರಿದ್ರ್ಯಗಳ ನಡುವೆ ಮೆರೆಯುವ ಮಾನವೀಯತೆ ಮುಂತಾದವುಗಳು ಮೊದಲ ಕಾಲಘಟ್ಟದ ಕಥೆಗಳಲ್ಲಿ ಅಭಿವ್ಯಕ್ತಿ ಪಡೆದಿವೆ. ದೇಶ ವಿಭಜನೆಯಿಂದಾದ ದುರಂತವನ್ನು ಕಂಡಿದ್ದ ಈ ಪ್ರಾಂತ್ಯದ ಜನತೆ, ತಮ್ಮ ನೆಲವೂ ವಿಭಜನೆಯಾಗುತ್ತದೆಂಬ ಭೀತಿಗೆ ಒಳಗಾಗಿದ್ದರು. ಇಂತ ಸಂದರ್ಭದಲ್ಲಿ ಸಮಯ ಸಾಧಕರ ವಿಚ್ಛಿದ್ರಕಾರಕ ಕೆಲಸಗಳು ತೀವ್ರಗೊಂಡು ಸಮಾಜವನ್ನು ದುರಂತಕ್ಕೀಡು ಮಾಡುತ್ತವೆ. ಇಂತ ದುರಂತಗಳ ತಕ್ಕಮಟ್ಟಿನ ಚಿತ್ರಣಗಳನ್ನು ಇಲ್ಲಿನ ಕಥನ ಸಾಹಿತ್ಯ ಒಳಗೊಂಡಿದೆ.

# ಅಧ್ಯಾಯ ೮

# ಅಧ್ಯಯನದ ಮುಖ್ಯ ಫಲಿತಗಳು

೧. ಕರ್ನಾಟಕದ ದಕ್ಷಿಣ ಪ್ರದೇಶಕ್ಕಿಂತ, ಉತ್ತರದ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ಜನವಸತಿ ಇತ್ತು. ಬಯಲು ನಾಡಾಗಿ, ಅನೇಕ ನದಿಗಳಿಂದ ಕೂಡಿದ್ದ ಈ ಭೂ ಪ್ರದೇಶವು ವ್ಯವಸಾಯ ಯೋಗ್ಯ ಭೂಮಿಯನ್ನು ಹೊಂದಿತ್ತು. ಇಂತಹ ಸಮೃದ್ಧಿಯನ್ನು ಹೊಂದಿದ ಭೂ ಪ್ರದೇಶವು ಸಹಜವೆಂಬಂತೆ ಅನೇಕ ಪ್ರಭುತ್ವಗಳನ್ನು ಆಕರ್ಷಿಸಿದೆ. ಇದು ಈ ಅಧ್ಯಯನದಲ್ಲಿ ಕಂಡುಕೊಂಡ ಮೊದಲ ಫಲಿತವಾಗಿದೆ.

೨. ಈ ಪ್ರದೇಶದ ಚರಿತ್ರೆಯಲ್ಲಿ ಅನೇಕ ಪ್ರಭುತ್ವಗಳು ಆಳಿವೆ. ಅವು ತಮ್ಮ ಕಾಲಾವಧಿಯಲ್ಲಿ ಕಲೆ, ಸಾಹಿತ್ಯ, ಭಾಷೆ, ಸಂಸ್ಕೃತಿ ಮುಂತಾದವುಗಳ ಬಗೆಗೆ ವಿಶೇಷ ಆಸಕ್ತಿವಹಿಸಿ ಅವುಗಳನ್ನು ಬೆಳೆಸಿ, ಪೋಷಿಸಿರುವುದನ್ನು ಕಾಣುತ್ತೇವೆ. ಪ್ರಭುತ್ವದ ಆಶ್ರಯದಲ್ಲಿ ಬೆಳೆದ ಅನೇಕ ವಲಯಗಳು ಮನುಷ್ಯನಿಗೆ ನೀತಿ, ಧರ್ಮ, ನ್ಯಾಯದಿಂದ ಬಾಳುವಂತೆ ಪ್ರೇರೇಪಿಸಿವೆ.

೩. ಕನ್ನಡ ಸಾಹಿತ್ಯದ ಅನೇಕ ಸಾಹಿತ್ಯ ಪ್ರಕಾರಗಳ ಹುಟ್ಟು, ಬೆಳವಣಿಗೆಯ ಮೂಲವು 'ಹೈದರಾಬಾದ್ ಕರ್ನಾಟಕ' ಪ್ರದೇಶವೆ ಆಗಿದೆ. ಕನ್ನಡದ ಮೊದಲ ಉಪಲಬ್ಧ ಕೃತಿ 'ಕವಿರಾಜಮಾರ್ಗ'ವು ಈ ಪ್ರಾಂತ್ಯದ್ದೆ, ಪ್ರಥಮ ಗದ್ಯ ಕೃತಿ 'ವಡ್ಡಾರಾಧನೆ' ಇಲ್ಲಿಯದೆ, ಕನ್ನಡ ಸಾಹಿತ್ಯಕ್ಕೆ ಆದ್ಯರೆನಿಸಿದ ಪಂಪ, ರನ್ನರು ಹುಟ್ಟಿ ಸಾಹಿತ್ಯ ಸಮೃದ್ಧಿಯನ್ನು ಮಾಡಿದ್ದು ಇಲ್ಲಿಯೆ, ಕನ್ನಡ ಸಾಹಿತ್ಯಕ್ಕಷ್ಟೆ ಅಲ್ಲದೆ ಪ್ರಪಂಚದ ಯಾವುದೆ ಭಾಗಕ್ಕೆ ಅನ್ವಯವಾಗುವ 'ವಚನ ಸಾಹಿತ್ಯ'ದ ಉಗಮವಾದದ್ದು ಈ ಪ್ರದೇಶದ ಕಲ್ಯಾಣದಲ್ಲಿಯೆ, ಪುರಾಣ ಪುರುಷರ ನೀತಿತತ್ವಗಳನ್ನು ಮುಂದೆಮಾಡಿಕೊಂಡು ಸಮಾಜದಲ್ಲಿ ನೈತಿಕತೆಯನ್ನು ಬೆಳೆಸಿದ 'ದಾಸ ಸಾಹಿತ್ಯ'ದ ತೊಟ್ಟಿಲು ಎನಿಸಿದ ರಾಯಚೂರು ಈ ಭಾಗದ್ದಾಗಿ ಕೀರ್ತನ ಸಾಹಿತ್ಯವನ್ನು ಬೆಳೆಸಿದೆ. ಮೌಖಿಕ ಸಾಹಿತ್ಯದ

'ತತ್ವಪದ', 'ಬುಲಾಯಿಹಾಡು', 'ಲಾವಣಿ', 'ಮೊಹರಂಪದ' ಮುಂತಾದ ಅನೇಕ ಪ್ರಕಾರಗಳು ಈ ಪ್ರಾಂತ್ಯದ ಸಾಹಿತ್ಯಿಕ ಉತ್ಪನ್ನಗಳೇ ಆಗಿವೆ.

೪. ಸಾಮಾನ್ಯವಾಗಿ ಅನ್ಯ ಭಾಷೆ ಹಾಗೂ ಸಂಸ್ಕೃತಿಯ ಪ್ರಭುತ್ವಗಳು ರಾಜ್ಯ ವಿಸ್ತರಣೆಗಾಗಿ ದಾಳಿ ಮಾಡಿದಾಗ, ಸ್ಥಳೀಯ ಭಾಷೆ, ಸಂಸ್ಕೃತಿಗಳು ಹಿನ್ನೆಲೆಗೆ ಸರಿಯುತ್ತವೆ. ಹೈದರಾಬಾದ್ ಕರ್ನಾಟಕದ ಸಾಹಿತ್ಯ, ಸಂಸ್ಕೃತಿಗಳು ಪ್ರೋತ್ಸಾಹಿಸುವ ಪ್ರಭುತ್ವಗಳಿಲ್ಲದೆ ಪ್ರಗತಿ ಕಾಣದಾದವು. ಹೀಗಾಗಿ ಸಾಹಿತ್ಯ, ಸಂಸ್ಕೃತಿಗಳ ಬೆಳವಣಿಗೆಯಲ್ಲಿ ಸ್ಥಳೀಯ ಪ್ರಭುತ್ವಗಳ ಪಾತ್ರವು ಮಹತ್ವದ್ದಾಗಿದೆ.

೫. ಈ ಪ್ರಾಂತ್ಯದಲ್ಲಿ ಬಹಮನಿ, ಆದಿಲ್ ಶಾಹಿ, ಮೊಘಲ್, ಪೇಶ್ವೆ, ಮರಾಠ, ನಿಜಾಮ್ ಮನೆತನಗಳು ಆಳ್ವಿಕೆ ನಡೆಸಿದ್ದರಿಂದ ಅವರ ಭಾಷೆ, ಸಂಸ್ಕೃತಿಗಳು ಸ್ಥಳೀಯ ಸಮುದಾಯಗಳ ಮೇಲೆ ಪ್ರಭಾವ ಬೀರಿದವು. ಸ್ಥಳೀಯ ಸಮುದಾಯಗಳು ಅನಿವಾರ್ಯವಾಗಿ ಅವುಗಳಿಗೆ ಒಗ್ಗಿಕೊಳ್ಳಬೇಕಾಯಿತು.

೬. ಅನ್ಯ ಪ್ರಭುತ್ವಗಳು ಆವರಿಸಿಕೊಂಡಾಗ ಸ್ಥಳೀಯ ಭಾಷೆಗಳನ್ನು ಗೌಣಗೊಳಿಸಿ ತಮ್ಮ ಭಾಷೆಯನ್ನು ತರಲು ಒತ್ತಾಯಿಸುತ್ತಿರುತ್ತವೆ. ವ್ಯವಹಾರದ ದೃಷ್ಟಿಯಿಂದಾದರೂ ಅದನ್ನು ಬಳಕೆಗೊಳ್ಳುವಂತೆ ಮಾಡಲಾಗುತ್ತದೆ. ಹೈದರಾಬಾದ್ ಸಂಸ್ಥಾನವು ತನ್ನ ಆಡಳಿತದಲ್ಲಿ ದಖನಿ ಉರ್ದುವನ್ನು ಬಳಸಿದ್ದು, ಬ್ರಿಟೀಶರು ಭಾರತಕ್ಕೆ ಬಂದಾಗ ಕ್ರೈಸ್ತ ಮಿಶಿನರಿಗಳ ಮೂಲಕ ಇಂಗ್ಲೀಶ್ ಕಲಿಸುವ ಬಗ್ಗೆ ಯೋಚಿಸಿದ್ದು ಈ ನೆಲೆಯಲ್ಲಿಯೆ.

೭. ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಬಹಮನಿಗಳು ಪ್ರವೇಶಿಸಿದಾಗಲೆ ಇಲ್ಲಿ ಇಸ್ಲಾಂ, ಸೂಫಿಗಳು ತಮ್ಮ ಧರ್ಮ, ಅನುಭಾವವನ್ನು ಸ್ಥಳೀಯರಿಗೆ ತಿಳಿಯಪಡಿಸಿದರು. ಅಲ್ಲಿನ ನೈತಿಕ ಮೌಲ್ಯಗಳು ಸ್ಥಳೀಯರನ್ನು ಹಿಡಿಸಿದುದರಿಂದಲೇ ಅವರು ಮತಾಂತರಗೊಂಡರು. ಇದು ಮೇಲ್ನೋಟದ ಗ್ರಹಿಕೆ. ಆದರೆ ಮತಾಂತರ ಪ್ರಕ್ರಿಯೆಗೆ ಒಳಗಾದವರು ಯಾರು ಎಂದುಕೊಂಡರೆ, ಸ್ಥಳೀಯ ಕೆಳವರ್ಗಗಳು ಮತ್ತು ದಲಿತರು. ಇವರನ್ನು ಸ್ಥಳೀಯ ಧರ್ಮವು ಶೋಷಿಸಿದೆ. ಅದರಲ್ಲಿ ನಂಬಿಕೆ ಕಳೆದುಕೊಂಡ ಕೆಳವರ್ಗಗಳು ಮತ್ತು ದಲಿತರು ಪರ್ಯಾಯ ಧರ್ಮಕ್ಕೆ ಮೊರೆ ಹೋಗಿವೆ. ಶೋಷಿತ ವರ್ಗವೊಂದು ತನ್ನ ಪ್ರತಿಭಟನೆಯನ್ನು ಪ್ರೋತ್ಸಾಹಿಸುವ ಪ್ರಭುತ್ವವಿದ್ದಾಗ ಈ ರೀತಿ ಆಗುತ್ತದೆ. ಆದರೂ ಮತಾಂತರಗೊಂಡ ಸ್ಥಳೀಯ ಕೆಳವರ್ಗಗಳು ಮತ್ತು ದಲಿತರು ಪ್ರಭುತ್ವದ ಭಯದಿಂದ, ಸ್ವ ಇಚ್ಚೆಯಿಂದ ಮತಾಂತರಗೊಂಡರೂ ತಮ್ಮ ಮೂಲ ಸಂಸ್ಕೃತಿಯನ್ನು ಬಿಟ್ಟುಕೊಡದೇ ಇರುವುದು ಕಂಡುಬರುತ್ತದೆ.

೮. ಭಾಷೆಯು ತನ್ನ ಮೂಲ ಗುಣವನ್ನು ಎಂತಹ ದಬ್ಬಾಳಿಕೆಯ ಪ್ರಭುತ್ವವಿದ್ದಾಗಲೂ ಬಿಟ್ಟುಕೊಡುವುದಿಲ್ಲ. ಸ್ವಾತಂತ್ರ್ಯಪೂರ್ವ ಹೈದರಾಬಾದ್ ಕರ್ನಾಟಕದಲ್ಲಿ ಕನ್ನಡ ಭಾಷೆಯೂ ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳಲ್ಲಿಲ್ಲ.

೯. ಸ್ವಾತಂತ್ರ್ಯರಕ್ಕಾಗಿ ಅಥವಾ ದಾಸ್ಯವಿಮೋಚನೆಗಾಗಿ ಶಿಬಿರಗಳನ್ನು ರಚಿಸಿಕೊಂಡು ಹೋರಾಡಿದ ಸಂಗತಿಗಳು ಈ ಪ್ರಾಂತ್ಯದಲ್ಲಿ ವಿಶೇಷವಾಗಿ ಕಂಡುಬರುತ್ತವೆ.

೧೦. ಮೌಖಿಕ ಸಾಹಿತ್ಯ ಪ್ರಕಾರಗಳು ಶಿಷ್ಟಸಾಹಿತ್ಯದಿಂದ ಅಲಕ್ಷಿತವಾಗಿ ಕಂಡರೂ ಈ ಭಾಗದ ಭಾಷೆ, ಸಂಸ್ಕೃತಿಯನ್ನು ಬೆಳೆಸಿದ ಬಹುಮುಖ್ಯ ಪ್ರಕಾರಗಳಾಗಿ ಕಂಡುಬರುತ್ತವೆ.

೧೧. ಸಾಹಿತ್ಯದ ರಚನೆಗೆ ಹಿರಿಯರ ಪ್ರೋತ್ಸಾಹ, ಮಾರ್ಗದರ್ಶನದ ಅವಶ್ಯಕತೆ ಇದೆ. ಇದು ಸ್ವಾತಂತ್ರ್ಯಪೂರ್ವ ಹೈದರಾಬಾದ್ ಕರ್ನಾಟಕದ ನವೋದಯ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಕಾಣುತ್ತದೆ. ನವೋದಯ ಸಾಹಿತ್ಯದ ಹರಿಕಾರರೆನಿಸಿದ ಬಿ.ಎಂ.ಶ್ರೀ., ಅ.ನ.ಕೃ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಂಥ ಸಾಹಿತಿಗಳ ಮಾರ್ಗದರ್ಶನ, ಅವರ ಪ್ರಭಾವ ಈ ಭಾಗದ ಲೇಖಕರ ಮೇಲೆ ಆಗಿದೆ.

೧೨. ಕನ್ನಡ ಸಾಹಿತ್ಯದ ಬೆಳವಳಿಗೆಯಲ್ಲಿ ವಾಚನಾಲಯ, ಶಾಲೆ, ಕನ್ನಡ ಸಂಘಗಳ ಪಾತ್ರ ಮಹತ್ವದ್ದಾಗಿದೆ. ಗುಲಬರ್ಗಾದಲ್ಲಿ 'ರಾಷ್ಟ್ರೀಯ ಗ್ರಂಥಾಲಯ ಸಂಘ', 'ವೀರಶೈವ ಬಂಧು ವಾಚನಾಲಯ', 'ಭಾರತ ವಾಚನಾಲಯ', 'ಹಮ್ದರ್ದ ಹೈಸ್ಕೂಲ್','ಶಾರದಾ ಕನ್ಯಾಶಾಲೆ', 'ಹರಿಜನ ಶಾಲೆ', 'ಭಾರತ್ ರೀಡಿಂಗ್ ರೂಮ್', ಸಿಂಧನೂರಿನಲ್ಲಿ 'ಶಾರದಾ ವಾಚನಾಲಯ', ಗಂಗಾವತಿಯಲ್ಲಿ 'ಕರ್ನಾಟಕ ವಾಚನಾಲಯ', 'ವಿಶ್ವನಾಥ ವಾಚನಾಲಯ' ಆಡೂರು, 'ಶ್ರೀ ವಿಠ್ಠಲ ವಾಚನಾಲಯ' ಹನುಮಸಾಗರ, 'ಸಾರ್ವಜನಿಕ ವಾಚನಾಲಯ' ಕುಷ್ಟಗಿ, ಸುರಪುರದ 'ಕರ್ನಾಟಕ ಸಂಘ', ಶಹಪುರದ 'ಶ್ರೀ ವೇಣುಗೋಪಾಲ ವಾಚನಾಲಯ', ರಂಗಂಪೇಟೆಯ 'ಕನ್ನಡ ಸಾಹಿತ್ಯ ಸಂಘ', ಯಾದಗಿರಿಯ 'ಶಂಕರ ಸಂಸ್ಕೃತ ಮಹಾವಿದ್ಯಾಲಯ', ಬಸವಕಲ್ಯಾಣ, ಬೀದರ್, ಭಾಲ್ಕಿ, ಇಟಗಿ, ಚಿತಾಪುರ ಮತ್ತು ಹೈದರಾಬಾದ್ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸಂಘ ಸಂಸ್ಥೆಗಳು ಪ್ರಾರಂಭವಾಗಿ ಈ ಭಾಗದ ಕನ್ನಡ ಜಾಗೃತಿಗೆ ಕಾರಣವಾದವು.

೧೩. ಹೈದರಾಬಾದ್ ಕರ್ನಾಟಕದಲ್ಲಿ ಅನ್ಯ ಭಾಷಾ ಪ್ರಭುತ್ವಗಳು ಬಂದ ಮೇಲೆ ಇಲ್ಲಿನ ಭಾಷೆ ಸಂಸ್ಕೃತಿಗೆ ಧಕ್ಕೆಯಾಯಿತು. ನಿಜಾಮರ ಆಳ್ವಿಕೆಯಲ್ಲಿ ಲಿಖಿತವಲ್ಲದ ದಖನಿ ರೂಪಗೊಂಡಿತ್ತು. ಇದರಿಂದ ಕನ್ನಡ ಹಿಂದೆ ಸರಿದು ರಾಜ್ಯಾಡಳಿತದಿಂದಲೂ ದೂರವಾಯಿತು. ಅಂತಹ ಸಂದರ್ಭದಲ್ಲಿ ಮಠಮಾನ್ಯಗಳು ಕನ್ನಡ ಬೆಳೆಸುವ ಜವಾಬ್ದಾರಿಯನ್ನು ವಹಿಸಿಕೊಂಡವು. ಕನ್ನಡ ಲಿಪಿ ಇದ್ದರೂ ಮೋಡಿಲಿಪಿಯ ಅಮರಗನ್ನಡ ಲಿಪಿಯ ಮೂಲಕ ಅವು ಕನ್ನಡ ಸಾಹಿತ್ಯದ ಬಗೆಗೆ ಜಾಗೃತಿಗೊಳಿಸಿರುವುದು ಕಾಣುತ್ತದೆ.

೧೪. ಈ ಪ್ರಾಂತ್ಯದಲ್ಲಿ ಮೇಲಿಂದ ಮೇಲೆ ದಾಳಿಗಳು ನಡೆದಿವೆ. ಆ ದಾಳಿಗಳಿಂದ ಇಲ್ಲಿನ ಜನಸಮುದಾಯಗಳು ತಲ್ಲಣಿಸಿ ದಿಕ್ಕೆಟ್ಟಿವು. ಜನರು ಹೀಗೆ ದಿಕ್ಕು ತೋಚದಂತಾದಾಗ ನೀತಿ, ಧರ್ಮಗಳನ್ನು ಪ್ರಶ್ನಿಸುವಂತಾದರು. ಮೋಸ, ವಂಚನೆ, ಅನ್ಯಾಯಗಳು ಅಲ್ಲಿ ಮನೆ ಮಾಡಿದವು. ಪರಿಣಾಮವಾಗಿ ಅನುಭಾವಿಗಳು ತಮ್ಮ ಅನುಭಾವದಿಂದ, ತತ್ವಪದಗಳ ಮೂಲಕ ಇಲ್ಲಿನ ಸಮಾಜವನ್ನು ಜಾಗೃತಗೊಳಿಸಲು ಪ್ರಯತ್ನಸಿದರು.

೧೫. ಈ ಪ್ರಾಂತ್ಯದ ಸಾಹಿತ್ಯ ರಚನೆಯ ವಸ್ತುಗಳಾಗಿ ಕಡುಬಡತನ, ವರ್ಗ ಸಂಘರ್ಷ, ಸ್ತ್ರೀಶೋಷಣೆ ಮುಂತಾದವುಗಳು ಸಾಮಾನ್ಯ ಎನಿಸುವಂತೆ ಬಳಕೆಯಾಗಿರುವುದು ಕಾಣುತ್ತದೆ. ಶೋಷಿತರನ್ನು, ಬಡತನ ಬೇಗುದಿಯಲ್ಲಿ ಬೆಂದವರನ್ನು, ಸಾಂಸ್ಕೃತಿಕವಾಗಿ ಅನ್ಯಾಯಕ್ಕೊಳಗಾದವರ ಪರವಾಗಿ ಇಲ್ಲಿನ ಸಾಹಿತ್ಯ ಮಿಡಿದಿದೆ. ಹಾಗಾಗಿ ಜನಜೀವನವನ್ನು ಹತ್ತಿರದಿಂದ ಅರಿತ ಇಲ್ಲಿನ ಸಾಹಿತ್ಯ ಜನಸಾಮಾನ್ಯರಲ್ಲಿ ಬವಣೆಗಳನ್ನು ಮೀರುವ ತಾತ್ವಕತೆಯನ್ನು ತುಂಬಿತು.

೧೬. ಸಮಾಜದಲ್ಲಿನ ಭೂ ಮಾಲೀಕರು, ಆಳುವ ವರ್ಗಗಳು, ಶರಣರಿಗೆ, ಅನುಭಾವಿಗಳಿಗೆ ತಲೆಬಾಗುತ್ತ, ಅವರನ್ನು ಪೋಷಿಸುತ್ತ ಬಂದಿದ್ದಾರೆ. ಈ ಭಾಗದಲ್ಲಿ ತತ್ವಪದ ಸಾಹಿತ್ಯವನ್ನು ಬಲಪಡಿಸಿದ ಅನೇಕ ಅನುಭಾವಿಗಳಿದ್ದಾರೆ. ಅವರ ಸಂಖ್ಯೆ ಬೆಳೆಯಲು ಇಲ್ಲಿನ ಸಮಾಜವೇ ಕಾರಣವಾಗಿದೆ.

೧೭. ಈ ಪ್ರಾಂತ್ಯದಲ್ಲಿ ನಿಜಾಮರು ತಮ್ಮ ಆಡಳಿತದಲ್ಲಿ ಶೈಕ್ಷಣಿಕವಾಗಿ ಉರ್ದು ಭಾಷೆಯನ್ನು ಅನುಷ್ಠಾನಗೊಳಿಸಿದ್ದರು. ಈ ಭಾಗದಲ್ಲಿ ಉರ್ದುವಿನಲ್ಲಿಯೇ ಕಲಿಯುವುದು ಕಡ್ಡಾಯವಾಗಿತ್ತು. ಈ ಪ್ರಾಂತ್ಯದ ವಿದ್ಯಾವಂತರು ಇಂಗ್ಲೀಶ್ ಕಲಿಯದೇ ಇರುವುದರಿಂದ ಪಶ್ಚಿಮದ ಇಂಗ್ಲೀಶ್ ಸಾಹಿತ್ಯದ ಓದಿನಿಂದಲೂ ವಂಚಿತರಾದರು. ಆದ್ದರಿಂದ ಇಲ್ಲಿನ ಆಧುನಿಕ ಸಾಹಿತ್ಯವು ಸತ್ವಯುತವಾಗಿ ಬೆಳೆಯಲಿಲ್ಲ. ನವೋದಯ ಸಾಹಿತ್ಯ ಹುಟ್ಟಿ ಬೆಳೆಯುತ್ತಿದ್ದ ಕರ್ನಾಟಕದ ಇತರ ಭಾಗಗಳಲ್ಲಿ ಇದ್ದಂತ ವಾತಾವರಣ ಇಲ್ಲಿ ಇರಲಿಲ್ಲ. ಆದರೂ ಕನ್ನಡ ಮಾತೃ ಭಾಷಿಕರು ಆಸಕ್ತಿಯಿಂದ ಕಾವ್ಯ ರಚಿಸಿ ಆಧುನಿಕ ಕಾವ್ಯವನ್ನು ಸ್ವಾತಂತ್ರ್ಯಪೂರ್ವದಲ್ಲಿ ಬೆಳೆಸಿದರು.

೧೮. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಮಹಾತ್ಮರು ಅವರ ವ್ಯಕ್ತಿತ್ವದಿಂದ, ಚಿಂತನೆಗಳಿಂದ ದೇಶದಾದ್ಯಂತ ಪ್ರಭಾವಿಸಿದ್ದಾರೆ. ಹಾಗಾಗಿ ಅವರು ಸಾಹಿತ್ಯ ವಲಯದಲ್ಲಿ ಕಾಣಿಸಿಕೊಳ್ಳುವಂತಾಯಿತು. ಅವರ ವ್ಯಕ್ತಿತ್ವವನ್ನು ಜನತೆ ಅಳವಡಿಸಿಕೊಳ್ಳಲು ಮತ್ತು ದೇಶಕ್ಕಾಗಿ ತಮ್ಮನ್ನು ಅರ್ಪಿಸಿಕೊಳ್ಳಲು ಕಾವ್ಯಗಳನ್ನು ಬರೆದಿರುವುದು ಕಾಣುತ್ತದೆ. ಸ್ವಾತಂತ್ರ್ಯಪೂರ್ವದ ಈ ಭಾಗದ ಕಾವ್ಯವೂ ಇದಕ್ಕೆ ಹೊರತಾಗಿಲ್ಲ.

೧೯. ಈ ಭಾಗದಲ್ಲಿ ಕಥೆ–ಕಾದಂಬರಿ ಸಾಹಿತ್ಯ ಹೆಚ್ಚು ಬೆಳೆಯಲಿಲ್ಲ. ಪ್ರಗತಿಶೀಲ ಸಾಹಿತ್ಯ ಚಳವಳಿಯ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ. ಕೆಲವರು ಸ್ವಾರಂತ್ರ್ಯಪೂರ್ವದಿಂದ ಬರೆಯುತ್ತ, ಸ್ವಾತಂತ್ರ್ಯ ನಂತರವೂ ಬರೆದಿದ್ದಾರೆ. ಕಥೆ–ಕಾದಂಬರಿಗಳಲ್ಲಿ ಈ ಪ್ರಾಂತ್ಯದ ಸಾಂಸ್ಕೃತಿಕ ವಾಸ್ತವ ವ್ಯಕ್ತವಾಗಿದೆ. ಮಹಿಳೆ ಈ ಸಾಹಿತ್ಯದಲ್ಲಿ ಪ್ರಧಾನವಾಗಿ ಕಾಣಿಸಿಕೊಂಡಿದ್ದಾಳೆ. ಯಾವ ಕಥೆ– ಕಾದಂಬರಿಗಳನ್ನು ನೋಡಿದರೂ ಮಹಿಳೆಯ ಬದುಕು ಪ್ರಧಾನವಾಗಿದ್ದು, ಅವಳ ಹಲವು ಮುಖಗಳು ಅಲ್ಲಿ ಅಭಿವ್ಯಕ್ತಗೊಂಡಿರುವುದು ಕಾಣುತ್ತದೆ.

೨೦. ಸ್ವಾತಂತ್ರ್ಯೋತ್ತರ ಕಾಲದಲ್ಲಿಯೂ ಈ ಭಾಗದಲ್ಲಿ ಕಥಾ ಸಾಹಿತ್ಯವು ಸತ್ವಯುತವಾಗಿ ಬೆಳೆಯುತ್ತಿದೆ. ಕಾವ್ಯ, ವಿಮರ್ಶೆ, ಸಂಶೋಧನೆ ಹೆಸರಿಗೆ ಮಾತ್ರ ರಚನೆಗೊಳ್ಳುತ್ತಿವೆ.

# ಅಧ್ಯಾಯ ೯

# ಸಮಾರೋಪ

'ಸ್ವಾತಂತ್ರ್ಯಪೂರ್ವ ಹೈದರಾಬಾದ್ ಕರ್ನಾಟಕದ ಸಾಹಿತ್ಯ ಅಧ್ಯಯನ' ಎಂಬ ಈ ಅಧ್ಯಯನವು ಒಂದು ಪ್ರದೇಶದ ಸಾಂಸ್ಕೃತಿಕ ಆಯಾಮಗಳನ್ನು ತಿಳಿಸುವ ನಿಟ್ಟಿನಲ್ಲಿ ರಚಿತವಾದದ್ದಾಗಿದೆ. ಪ್ರಾದೇಶಿಕ ಅಧ್ಯಯನಗಳು ಅನೇಕ ಮಹತ್ವಗಳನ್ನು ಒಳಗೊಂಡಿರುತ್ತವೆ. 'ಹೈದರಾಬಾದ್ ಕರ್ನಾಟಕ' ಎನ್ನುವುದು ಒಂದು ಪ್ರಾಂತ್ಯದ ಭೌಗೋಳಿಕ ವ್ಯಾಪ್ತಿಯನ್ನು ಸೂಚಿಸುತ್ತದೆ. ಈ ಪ್ರದೇಶವು ವಿಶಿಷ್ಟವಾದ ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಅನನ್ಯತೆಗಳನ್ನು ಪಡೆದಿದೆ. ಈ ಪ್ರದೇಶದಲ್ಲಿ ರಚಿತವಾದ ಸಾಹಿತ್ಯವು ಅಧ್ಯಯನಾಸಕ್ತರಿಗೆ ಕೂತೂಹಲ ಮೂಡಿಸುತ್ತದೆ. ಒಂದು ಪ್ರಾಂತ್ಯದಲ್ಲಿ ಅಸ್ತಿತ್ವದಲ್ಲಿದ್ದ ಸಾಹಿತ್ಯವನ್ನು ಕುರಿತು ಅಧ್ಯಯನ ಮಾಡುವುದರಿಂದ ಇಲ್ಲಿನ ಭಾಷೆ, ಸಾಹಿತ್ಯ, ಸಂಸ್ಕೃತಿಗಳನ್ನು ತಿಳಿಯುವಂತಾಗುತ್ತದೆ. ಅದರಿಂದ ಈ ಭಾಗದ ಸಾಂಸ್ಕೃತಿಕ ಚರಿತ್ರೆಯ ಅರಿವು ಹೆಚ್ಚಿಸಿದಂತಾಗುತ್ತದೆ.

ಹೈದರಾಬಾದ್ ಕರ್ನಾಟಕದ ಪ್ರದೇಶದಲ್ಲಿ ಅನೇಕ ಪ್ರಭುತ್ವಗಳು ಆಳಿರುವುದನ್ನು ಚರಿತ್ರೆಯು ದಾಖಲಿಸಿದೆ. ಅನೇಕರ ಆಳ್ವಿಕೆಯಲ್ಲಿ ಹೈದರಾಬಾದ್ ಕರ್ನಾಟಕ ಪ್ರಾಂತ್ಯವು (ಗುಲಬರ್ಗಾ, ಬೀದರ್, ರಾಯಚೂರು,) ಅನೇಕ ಸ್ಥಿತ್ಯಂತರಗಳನ್ನು ಕಂಡಿದೆ. ಆ ಸ್ಥಿತ್ಯಂತರಗಳಿಂದ ಇಲ್ಲಿನ ಜನರಲ್ಲಾದ ಬದಲಾವಣೆ, ಭಾಷೆ, ಧರ್ಮ ಸಾಂಸ್ಕೃತಿಕ ಪಲ್ಲಟಗಳನ್ನು ಅಪಾರವಾಗಿವೆ. ಆ ಪಲ್ಲಟಗಳನ್ನು ಗುರುತಿಸಿವುದರಿಂದ ಇಲ್ಲಿನ ಜನಸಾಮಾನ್ಯರ ಸಾಂಸ್ಕೃತಿಕ ಜೀವನ ವಿಧಾನವನ್ನು ತಿಳಿದಂತಾಗುತ್ತದೆ. ಈ ಅಧ್ಯಯನವು ಇಂತಹ ಕಾರ್ಯವನ್ನು ಮಾಡಿದೆ.

ಹೈದರಾಬಾದ್ ಕರ್ನಾಟಕ ವ್ಯಾಪ್ತಿಯ ಪ್ರದೇಶದಲ್ಲಿ ಬೌದ್ಧ, ಜೈನ, ಲಿಂಗಾಯತ, ವೀರಶೈವ, ವೈದಿಕ, ವೈದಿಕೇತರ ಸಮುದಾಯಗಳಲ್ಲಿ ಅನುಭಾವಿಗಳು ಆರೂಢರು ತಮ್ಮದೇ ಆದ ನೆಲೆಯಲ್ಲಿ

ಧರ್ಮ ಮತ್ತು ಆಧ್ಯಾತ್ಮವನ್ನು ಪೂರ್ವ ಕಾಲದಿಂದಲೂ ನೆಲೆಗೊಳಿಸಿದ್ದಾರೆ. ಇವರು ಅಂದಿನ ಸಮಾಜಕ್ಕೆ ದಾರಿದೀಪವಾಗಿದ್ದಾರೆ. ಆಳುವ ಪ್ರಭುತ್ವಗಳು ನೀಡುವ ಅನೇಕ ತೊಂದರೆಗಳಿಗೆ ತಮ್ಮ ತಾತ್ವಕತೆಯಿಂದಲೇ ಬದುಕನ್ನು ಕಟ್ಟಿಕೊಳ್ಳುವಂತೆ ಪ್ರೇರೇಪಿಸಿರುವುದನ್ನು ಈ ಅಧ್ಯಯನ ಗುರುತಿಸಿದೆ.

ಈ ಪ್ರಾಂತ್ಯದಲ್ಲಿ ಆಳಿದ ವಿವಿಧ ಪ್ರಭುತ್ವಗಳು ಭಿನ್ನ ಭಿನ್ನ ಧರ್ಮಿಯರಿಗೆ ಪ್ರೋತ್ಸಾಹ ನೀಡುತ್ತ ಮತಾಂತರಗೊಳಿಸುತ್ತ ಬಂದಿರುವುದು ಕಾಣುತ್ತದೆ. ಪ್ರಭುತ್ವದ ಆಶ್ರಯ ಇರುವ ಧರ್ಮವು ಯಾವುದೇ ಆಗಿರಲಿ ಅದು ತನ್ನ ಜಾಯಮಾನವನ್ನು ಬಿಟ್ಟುಕೊಡುವುದಿಲ್ಲ. ಈ ಪ್ರದೇಶದಲ್ಲೂ ಸಹ ಇಸ್ಲಾಂ ಧರ್ಮ ಈ ಪ್ರಾಂತ್ಯದ ಅನೇಕ ಸಮುದಾಯಗಳನ್ನು ಅದರಲ್ಲೂ ಕೆಳವರ್ಗದ ಸಮುದಾಯಗಳನ್ನು ಬಲವಂತದಿಂದ ಮತಾಂತರಗೊಳಿಸಿದೆ. ವ್ಯಕ್ತಿಯೊಬ್ಬ ಮತಾಂತರಗೊಂಡ ಕೋಡಲೆ ಅವನ ಹಿಂದಿನ ನಂಬಿಕೆಗಳು ನಾಶವಾಗಿತ್ತವೆ ಎಂದು ಭಾವಿಸಬೇಕಾಗಿಲ್ಲ. ಮತಾಂತರದ ನಂತರ ಕೊಡುಕೊಳುವಿಕೆಯಿಂದ ಇಲ್ಲಿನ ಮತ ಧರ್ಮಗಳು ಒಂದರೊಳಗೊಂದು ಬೆರೆತು ಅನನ್ಯ ರೀತಿಯ ಕೋಮುಸೌಹಾರ್ದತೆಯನ್ನು ಈ ಪ್ರಾಂತ್ಯದಲ್ಲಿ ಕಾಣುತ್ತೇವೆ. ಧಾರ್ಮಿಕವಾಗಿ ಸಂಕರ ಸಂಸ್ಕೃತಿ ಬೆಳೆದಿರುವುದಕ್ಕೆ ಇಲ್ಲಿ ಅನೇಕ ಕುರುಹುಗಳನ್ನು ಕಾಣುತ್ತೇವೆ. ಕೊಡೇಕಲ್ ಬಸವಣ್ಣ, ತಿಂಥಿಣಿ ಮೌನೇಶ್ವರ, ಶಿರಹಟ್ಟಿ ಫಕೀರೇಶ್ವರ, ವಡಬಾಳದ ನಾಗನಾಥ ಉದಾಹರಣೆಯಾದರೆ, ಮೊಹರಂ ಹಬ್ಬ ಕೋಮುಸೌಹಾರ್ದಕ್ಕೆ ಅನನ್ಯ ಕುರುಹಾಗಿದೆ. ಹಾಗೆ ನೋಡಿದರೆ ವೈದಿಕರು, ಲಿಂಗವಂತರು, ಕುರುಬರು ಮುಂತಾದ ಹತ್ತಾರು ಜಾತಿ ಮತಗಳ ಸಮುದಾಯಗಳು ತಮ್ಮವೇ ಆದ ಸಂಸ್ಕೃತಿಯಲ್ಲಿ ಮುಂದುವರೆದಿದ್ದರೂ ಅವುಗಳ ನಡುವೆ ವ್ಯಾವಹಾರಿಕವಾಗಿ ಸೌಹಾರ್ದಯುತವಾಗಿ ಈ ಪ್ರಾಂತ್ಯದಲ್ಲಿ ನೆಲೆಸಿವೆ. ಈ ಎಲ್ಲ ಅಂಶಗಳನ್ನು ಈ ಅಧ್ಯಾಯದಲ್ಲಿ ಸಮಗ್ರವಾಗಿ ಪರಿಶೀಲಿಸಿ ಅಧ್ಯಯನ ಮಾಡಲಾಗಿದೆ.

ಈ ಅಧ್ಯಯನವು ಮುಗಿದ ನಂತರವೂ, ಈ ವಿಷಯದ ಮೇಲೆ ಅಥವಾ ಈ ಪ್ರಾಂತೀಯ, ಪ್ರಾದೇಶಿಕ ನೆಲೆಯ ಅಧ್ಯಯನವನ್ನು ಇನ್ನೂ ಮಾಡಬಹುದು ಅನ್ನಿಸುತ್ತದೆ. ತತ್ವಪದ ಸಾಹಿತ್ಯವು ೯೦ರ ದಶಕದ ನಂತರ ಅದರ ಸಂಪಾದನೆಗಳು ನಡೆದವು. ಅದನ್ನು ಕುರಿತು ಅಧ್ಯಯನಗಳು ನಿಧಾನಗತಿಯಲ್ಲಿ ಸಾಗಿವೆ. ಸಂಪಾದನೆ ಮತ್ತು ಅವುಗಳಿಗೆ ಬರೆಯುವ ಪ್ರಸ್ತಾವನೆಗಳಿಗೆ ಒಂದು ಮಿತಿ ಇದ್ದೇ ಇದೆ. ಅಲಕ್ಷಿತವಾದದ್ದು ಅಧ್ಯಯನ ಕ್ಷೇತ್ರಕ್ಕೆ ತರಲಾಗುತ್ತಿದೆ ಎಂಬ ಒಂದು ಅಂಶ. ಅದರ ತಿರುಳನ್ನು ಸಾರಾಂಶದ ನೆಲೆಯಲ್ಲಿ ಗ್ರಹಿಸುವ ಮತ್ತು ಸಂಪಾದನೆಯ ವಿಧಾನವನ್ನು ತಿಳಿಸುವ ಇನ್ನೊಂದು ಅಂಶ. ಇವುಗಳನ್ನು ಗುರುತಿಸುವ ಪ್ರಾಥಮಿಕ ಅಧ್ಯಯನಗಳು ನಡೆದಿವೆ. ವಚನ ಸಾಹಿತ್ಯವನ್ನು ಒಂದು ಸಾಹಿತ್ಯ, ಒಂದು ಚಳವಳಿ ಎಂದು ಗುರುತಿಸಿದಂತೆ ಸಂಶೋಧಕರು, ವಿದ್ವಾಂಸರು, ತತ್ವಪದ ಸಾಹಿತ್ಯವನ್ನು ಗುರುತಿಸಲು ಮುಂದಾದಂತೆ ಕಾಣುವುದಿಲ್ಲ. ಕೀರ್ತನೆಗಳನ್ನು ಕೂಡ ಒಂದು ಮಿತಿಯಲ್ಲಿ ನಿರ್ದಿಷ್ಟ ವಲಯದವರು ಅಧ್ಯಯನಕ್ಕೆ ತೊಡಗಿದ್ದಾರೆ. ವಚನಗಳನ್ನು ಅಧ್ಯಯನ ಮಾಡುವವರಿಗೆ ಕೀರ್ತನೆಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳುವುದಿಲ್ಲ. ಹಾಗೆಯೇ

ಕೀರ್ತನೆಗಳನ್ನು ಅಧ್ಯಯನ ಮಾಡುವವರು ವಚನ ಸಾಹಿತ್ಯವನ್ನು ಅಷ್ಟಾಗಿ ಗಮನಿಸುವುದಿಲ್ಲ. ಎಲ್ಲೋ ಕೆಲವರು ಅವುಗಳೆಲ್ಲ ರಚನೆಗಳೆಂದು ತಿಳಿದು, ಮತೀಯ ಚೌಕಟ್ಟಿನಿಂದ ಮುಕ್ತಗೊಳಿಸಿ ಅಧ್ಯಯನ ಮಾಡುತ್ತಾರೆ. ವಚನ ಸಾಹಿತ್ಯವನ್ನು ವಿಶೇಷವಾಗಿ ಅಧ್ಯಯನ ಮಾಡುವವರು ಕೀರ್ತನೆಗಳಿಗೆ ಕೈ ಹಾಕುವುದಿಲ್ಲವಷ್ಟೆ. ತತ್ವಪದಗಳಿಗೂ ಕೈ ಹಾಕುವುದಿಲ್ಲ. 'ಸ್ವರ ವಚನಗಳು' ಎಂದು ಕರೆಯುವ, ಶರಣರ ಆದಿಯಾಗಿ ಬರೆದಿರುವ ಈ ಸಾಹಿತ್ಯವನ್ನು ಮತೀಯ ಮೂಲದವರು ಮುಂದುವರಿಸಿದ್ದನ್ನು ಮಾತ್ರ ಗಮನಿಸುತ್ತಾರೆ. ಇಲ್ಲಿಯೂ ಅದೇ ಬಗೆಯ ವಿಷಯಗಳು, ದೃಷ್ಟಿಕೋನಗಳು ಇವೆ ಎಂಬ ನೆಲೆಯಲ್ಲಿ ಗ್ರಹಿಸುತ್ತಾರೆ. ಒಟ್ಟು ಸಾಹಿತ್ಯ ಸಂಶೋಧನೆಯಲ್ಲಿ ಮತೀಯ, ಧರ್ಮದ ಹಿನ್ನೆಲೆಯಲ್ಲಿ ಅಧ್ಯಯನಗಳು ನಡೆದಿದ್ದು, ಅದರಿಂದ ಹೊರಬರಬೇಕೆಂದು ತೋರುತ್ತದೆ. ಇಲ್ಲದಿದ್ದರೆ ಅಧ್ಯಯನಗಳಿಗೆ ಬೇರೆ ಆಯಾಮಗಳು ಸೇರಿಕೊಳ್ಳುವುದಿಲ್ಲ.

'ಹೈದರಾಬಾದ್ ಕರ್ನಾಟಕ' ಪ್ರಾಂತ್ಯದ ಸಾಹಿತ್ಯವೆಂದು ಈ ಸಾಹಿತ್ಯವನ್ನು ಗುರುತಿಸುವ ಕೆಲಸ ಒಂದು ಹಂತದವರೆಗೆ ಸರಿಯಾದದ್ದು. ಈ ಅಧ್ಯಯನಗಳು ಈಗ ಅತಿಯಾಗುತ್ತಿವೆ. ಅಧ್ಯಯನದ ಅನುಕೂಲಕ್ಕಾಗಿ ನಿರ್ದಿಷ್ಟ ವ್ಯಾಪ್ತಿಯ ಭೌಗೋಳಿಕ ಸಾಹಿತ್ಯವನ್ನೂ ಆಯ್ಕೆ ಮಾಡುವಾಗ ಅಧ್ಯಯನದ ವಿಧಾನ ಯಾವುದಾಗಿರಬೇಕು? ನಿರ್ದಿಷ್ಟ ಭೌಗೋಳಿಕ ವ್ಯಾಪ್ತಿ ಯಾವ ಕಾರಣಗಳಿಂದ ವಿಶೇಷವಾಗಿದೆ? ಯಾವ ಕಾರಣಗಳಿಂದ ಹಿಂದುಳಿದಿದೆ? ಅದರ ಅನನ್ಯತೆ ಏನು? ಎಂದು ಸರಿಯಾಗಿ ಗುರುತಿಸಿ ಅದರ ಹಿನ್ನೆಲೆಯಲ್ಲಿ ಆ ಪ್ರದೇಶದಲ್ಲಿ ರಚನೆಯಾದ ಸಾಹಿತ್ಯ, ಸಂಸ್ಕೃತಿಯನ್ನು ಅಧ್ಯಯನಕ್ಕೆ ಒಳಪಡಿಸಬೇಕು. ಈ ಕೆಲಸ ಈಗ ನಡೆದಿದೆ. ವಿಧಾನವೂ ಈಗ ಸವಕಲಾಗುತ್ತ ನಡೆದಿದ್ದಾಗಲೂ, ಈ ಪ್ರದೇಶದ ಸಾಹಿತ್ಯ ಅದರ ಇನ್ನಿತರ ಪ್ರಕಾರಗಳಲ್ಲಿ ಒಂದನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡುವ ಪರಿಪಾಠ ಬೆಳೆಯುತ್ತಿದೆ. ಕಾವ್ಯ, ನಾಟಕ, ಕಥೆ, ಕಾದಂಬರಿ ಕುರಿತು ಮತ್ತಿತರ ಪ್ರಕಾರಗಳಲ್ಲಿ ಒಂದು ಪ್ರಕಾರವನ್ನು ಪರಿಗಣಿಸಿ ಅಧ್ಯಯನಗಳು ನಡೆಯುವುದರಿಂದ ಏನೂ ಪ್ರಯೋಜವಿದೆ? ಎಂಬುದನ್ನು ಅಧ್ಯಯನಗಳು ಒಳನೋಟಗಳು ಗುರುತಿಸಿದರೆ ಸರಿ. ಇಲ್ಲದಿದ್ದರೆ ಅವುಗಳು ಒಣ ಅಧ್ಯಯನಗಳಾಗಿ ನಿಂಲ್ಲುತ್ತವೆ. ಈ ಅಧ್ಯಯನದ ನಡೆಸುವಾಗ, ಇದಕ್ಕೆ ಪೂರಕವಾದ ಅಧ್ಯಯನಗಳನ್ನು ಓದಿದಾಗ ಅನ್ನಿಸುತ್ತಿತ್ತು. ಈ ದೃಷ್ಟಿಯಿಂದ ಪ್ರಾಂತ್ಯ, ಪ್ರಾದೇಶಿಕ ವ್ಯಾಪ್ತಿಯ ಅಧ್ಯಯನಗಳಿಗೆ ಒಂದು ಮಿತಿ ಇದೆ ಅನ್ನಿಸುತ್ತಿದೆ.

ಈ ಪ್ರಾಂತ್ಯದ ಆಧುನಿಕ ಬರಹಗಾರರು ಆರಂಭದಲ್ಲಿ ಅನೇಕ ಅಡ್ಡಿಗಳನ್ನೂ ಆತಂಕಕಗಳನ್ನು ಎದುರಿಸಿರುವುದು ಅಧ್ಯಯನದಿಂದ ತಿಳಿಯಲಾಗಿದೆ. ಒಂದು, ಉರ್ದುವಿನಲ್ಲಿ ಶಿಕ್ಷಣ ಪಡೆಯುತ್ತಿದ್ದುದು. ಎರಡು, ಆಧುನಿಕ ಸಾಹಿತ್ಯ ರಚನೆಗೆ ಬೇಕಾದ ತಿಳುವಳಿಕೆಯನ್ನು ಪಡೆಯಲು ಇಂಗ್ಲೀಶ್ ಭಾಷೆಯನ್ನು ಕಲಿಯಲು ಅವಕಾಶ, ವಾತಾವರಣ ಇರಲಿಲ್ಲ ಎಂಬುದು. ಮೂರು, ಈ ಅವಧಿಯಲ್ಲಿ ಈ ಪ್ರಾಂತ್ಯವು ಅನೇಕ ಸಮಸ್ಯೆಗಳಿಂದ ಕೂಡಿತ್ತು. ನಿಜಾಮ್ ಆಡಳಿತ, ಉರ್ದು ಹೇರಿಕೆ, ಬಿಡುಗೆಗಾಗಿ ಹೋರಾಟ, ರಜಾಕಾರರ ದಾಳಿ ಮುಂತಾದ ಗಂಡಾಂತರಗಳು

ಇದ್ದು, ಈ ಸಮಸ್ಯೆಗಳ ಸುಳಿಯಲ್ಲಿ ಸುತ್ತುವುದೇ ಆಯಿತು. ಇದನ್ನು ಇಲ್ಲಿನ ಹಿರಿಯ ತಲೆಮಾರಿನವರು ಹೇಳುತ್ತಾರೆ. ಸ್ವಾತಂತ್ರ್ಯಾ ನಂತರ ಉರ್ದು ಭಾಷೆಯಲ್ಲಿ ಶಿಕ್ಷಣ ಮುಗಿಸಿದವರು ಅದರ ಗುಂಗಿನಿಂದ ಹೊರಬರಲು ಶತಮಾನಗಳೇ ಕಳೆದವೆಂದೇ ಹೇಳಬೇಕು. ಜೊತೆಗೆ ಸಾಹಿತ್ಯ ರಚನೆಗೆ ಒಂದು ವಾತಾವರಣಬೇಕು. 'ನವೋದಯ' ಘಟ್ಟ ಮುಗಿದಿತ್ತು. 'ನವ್ಯ' ಸಾಹಿತ್ಯ ರಚನೆ ಆರಂಭವಾಗಿತ್ತು. ಇಂಥ ಸಮಯದಲ್ಲಿ ಇಲ್ಲಿನ ಲೇಖಕರು 'ನವೋದಯ' ಮಾದರಿಯನ್ನು ಅನುಸರಿಸಲು ಪ್ರಯತ್ನಿಸಿ ಸಫಲತೆ ಕಾಣಲಿಲ್ಲ. ಯಾಕೆಂದರೆ ಅದಕ್ಕೆ ಬೇಕಾದ ದರ್ಶನವನ್ನು ಮೈಗೂಡಿಸಿಕೊಳ್ಳಲು ಆಗಲಿಲ್ಲ. ಈ ಪ್ರಾಂತ್ಯದ ಚರಿತ್ರೆ, ಅದರ ಒಳಗಿನ ಸಂಘರ್ಷಗಳು, ಸಮುದಾಯಗಳ ಬವಣೆಗಳು ಎಲ್ಲವೂ ಅನುಭವವಾಗಿ, ಅಭಿವ್ಯಕ್ತಿಗೆ ಒದಗುತ್ತಿದ್ದವು. ಆದರೆ ಈ ಪ್ರಯತ್ನಗಳೇ ನಡೆಯಲಿಲ್ಲ. 'ನವೋದಯ' ಕಾಲಘಟ್ಟದಲ್ಲಿ ಆಧುನಿಕ ಮಹಾಕಾವ್ಯಗಳು, ಕಾದಂಬರಿಗಳು, ಚಿಂತನ ಸಾಹಿತ್ಯ ಹುಟ್ಟಿತ್ತು. ಅದನ್ನು ಮೀರುವ ದಾರಿಗಳು ಇಲ್ಲಿ ಕಾಣಿಸಲಿಲ್ಲ. ಹಿರಿಯ ತಲೆಮಾರಿನವರಿಗೂ ವಯಸ್ಸಾಗುತ್ತ ಬಂದಿತ್ತು ಅನ್ನಿ. ನಂತರದ ತಲೆಮಾರಿನವರು 'ನವ್ಯ'ದ ಮಾದರಿಯನ್ನು ಅನುಸರಿಸಬೇಕಾಗಿತ್ತು. ಆದರೆ ಯುರೋಪಿನ ಅಸ್ತಿತ್ವವಾದಿಗಳ ಚಿಂತನೆಗಳನ್ನು ಗ್ರಹಿಸುವ ಮನೋಭಾವ ಇಲ್ಲಿನ ಲೇಖಕರದಾಗಿರಲಿಲ್ಲ. ಅದೊಂದು ದರ್ಶನ. ಬದುಕಿನ ದೃಷ್ಟಿಕೋನ ಅಥವಾ ಬದುಕಿನ ವಿಧಾನ. ಇದನ್ನು ಅವಾಹಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಒಂಟಿತನ, ಅನಾಥಪ್ರಜ್ಞೆ, ಅಸಂಗತತೆ, ವ್ಯಕ್ತಿ ವಿಶಿಷ್ಟ ಸಿದ್ಧಾಂತ ಇವು ಬರೀ ಶಬ್ದಗಳಾದವೇ ಹೊರತು ಅನುಭಾವದ ಭಾಗವಾಗಲಿಲ್ಲ. ಚಿಂತನೆಯ ಭಾಗವಾಗಲಿಲ್ಲ. ಆದರೂ ಇಲ್ಲಿನ ಲೇಖಕರು ನವ್ಯ ಸಾಹಿತ್ಯ ರಚನೆಗೆ ಪ್ರಯತ್ನಿಸಿದರೂ ಸಫಲವಾಗಲಿಲ್ಲ. ಹೀಗಾಗಿ ಕನ್ನಡ ಸಾಹಿತ್ಯ ವಾಹಿನಿಯಲ್ಲಿ ಕಾಣಿಸಿಕೊಳ್ಳುವ ಎರಡು ಪ್ರಮುಖ ಘಟ್ಟ ಅಥವಾ ಪಂಥಗಳಾದ 'ನವೋದಯ', 'ನವ್ಯ' ಸಾಹಿತ್ಯ ರಚನೆಯಲ್ಲಿ ಈ ಭಾಗದ ಲೇಖಕರಿಗೆ ಪ್ರವೇಶ ಸಾಧ್ಯವಾಗಲಿಲ್ಲ. ಪ್ರಯತ್ನಗಳು ಕಾಣಿಸುತ್ತವೆ. ಅದನ್ನೇ ಗುಣಾತ್ಮಕವೆಂದಾಗಲಿ ಸಾಧನೆಯೆಂದಾಗಲಿ ಪರಿಗಣಿಸಬಹುದೇ?

ಈ ಪ್ರಾಂತ್ಯದ ಲೇಖಕರು ನಿಜವಾದ ತಮ್ಮ ಅಭಿವ್ಯಕ್ತಿಯನ್ನು ಸಾಧ್ಯಮಾಡಿಕೊಂಡದ್ದು ೭೦ರ ದಶಕದ ಬಂಡಾಯ ದಲಿತ ಸಾಹಿತ್ಯ ಚಳವಳಿಯ ಕಾಲದಲ್ಲಿ ಎನ್ನಬಹುದು. ಸ್ವಾತಂತ್ರ್ಯ ಬಂದು ೨೦ವರ್ಷಗಳು ಕಳೆದಿದ್ದವು. ಮೇಲ್ವರ್ಗದ, ಕೆಳವರ್ಗದ ಯಾವ ವರ್ಗದ ಲೇಖಕರೇ ಇರಲಿ ಈ ಪ್ರಾಂತ್ಯದ ದಾಸ್ಯವನ್ನು ಆ ಮೂಲಕ ಸಮುದಾಯಗಳ ಶೋಷಣೆಯನ್ನು ಕಂಡಿದ್ದರು. ಗ್ರಾಮೀಣ ಭಾಗಗಳಲ್ಲಿ ಭೂಮಾಲೀಕರೇ ಹೆಚ್ಚಾಗಿದ್ದರಿಂದ, ಸಹಜವಾಗಿ ದುಡಿವ ವರ್ಗ ಹೆಚ್ಚಾಗಿದ್ದು ಶೋಷಣೆಗೆ ಗುರಿಯಾಗಿದ್ದರು. ಈ ಅನುಭವ ಸಹಜವಾಗಿಯೇ ಎಲ್ಲರಿಗಿತ್ತು ಅನ್ನಬಹುದು. ಇದನ್ನೇ ಆಧರಿಸಿ ಕಾವ್ಯ, ಕಥೆ, ಕಾದಂಬರಿಗಳನ್ನು ಬರೆಯಲಾರಂಭಿಸಿದರು. ಮಹಿಳೆಯರೂ ಬರವಣಿಗೆಯಲ್ಲಿ ತೊಡಗಿದರು. 'ಬರೆಯುವುದೇ ಒಂದು ಬಂಡಾಯ' ಎಂಬ ನಿಲುವಿದದ್ದು ಪೂರಕವಾಯಿತು ಅನ್ನಬಹುದು. ಕಥೆ ಕಾದಂಬರಿ, ಕಾವ್ಯ ಸಾಹಿತ್ಯ ಈ ಕಾಲಾವಾಧಿಯಲ್ಲಿ ಹೆಚ್ಚು ರಚನೆಯಾಯಿತು. ಕೆಲವರಾದರೂ ಗುರುತಿಸಿಕೊಂಡರು.

೯೦ರ ದಶಕದಿಂದ ಈಚೆಗಿನ ಸಾಹಿತ್ಯವನ್ನು ಈ ಅಧ್ಯಯನದಲ್ಲಿ ಪರಿಗಣಿಸಿಲ್ಲ. ಆದರೂ ೯೦ ರಿಂದ ಈಚೆಗೆ ಸಾಹಿತ್ಯ ಚಳವಳಿಗಳು ಕಾಣಿಸಿಲ್ಲ ಎಂಬುದು ಎಲ್ಲರಿಗೆ ತಿಳಿದಿರುವ ಸಂಗತಿ. ಆದರೆ ಚಳವಳಿ ಇಲ್ಲದಿದ್ದಾಗ ಸಾಹಿತ್ಯ ರಚನೆಯಾಗುವುದಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಬಂಡಾಯ–ದಲಿತ ಸಾಹಿತ್ಯ ಚಳವಳಿಯಲ್ಲಿ ಗುರುತಿಸಿಕೊಂಡು, ಅದರ ಚೌಕಟ್ಟಿನಲ್ಲಿ ಬರೆಯುತ್ತ ಬಂದವರು ಈಗ ಅದರ ಸ್ಥಗಿತ ಕಾಲದಲ್ಲಿ ಬರೆಯಲು ಸಾಧ್ಯವಾಗಿದೆಯೇ? ಬರೆಯುತ್ತಿದ್ದರೂ ಅದರ ತಾತ್ವಿಕತೆಯಲ್ಲಿ ಹೊಸತನವಿದೆಯೇ? ಭಿನ್ನ ದೃಷ್ಟಕೋನದಲ್ಲಿ ಬರೆಯುತ್ತಿದ್ದಾರೆಯೇ? ಎಂಬ ಪ್ರಶ್ನೆಗಳಿಗೆ ಉತ್ತರಗಳು ಇಲ್ಲ. ಅಥವಾ 'ಹೌದು' 'ಇಲ್ಲ' ಎಂಬಂತೆಯೂ ಇಲ್ಲ. ಆದರೆ ೯೦ ರಿಂದ ಈಚೆಗೆ ಬರೆಯುವ ಅನೇಕ ಯುವಕ-ಯುವತಿಯರಿಗೆ ನಿರ್ದಿಷ್ಟವಾಗಿ ಹೆಸರಿಸುವ ಸಾಹಿತ್ಯ ಚಳುವಳಿ ಬೆಂಬಲ ಇಲ್ಲದಿದ್ದರೂ ಬರೆಯುತ್ತಿದ್ದಾರೆ. ಜಾಗತೀಕರಣ, ಉದಾರೀಕರಣ, ಖಾಸಗೀಕರಣ ಹೆಚ್ಚು ಪ್ರಭಾವವಿರುವ, ಅದರಿಂದ ಉಟಾದ ಪರಿಣಾಮಗಳು ಈಗ ಢಾಳಾಗಿ ಕಾಣಿಸುತ್ತಿರುವ ಈ ಸಂದರ್ಭದಲ್ಲಿ, ಅದರ ಗ್ರಹಿಕೆಯ ಹಿನ್ನೆಲೆಯಲ್ಲಿ ಬರೆಯುವ ಯುವಕ-ಯುವತಿಯರ ಸಾಹಿತ್ಯವು ಗಮನಾರ್ಹವಾಗಿದೆ ಎಂದು ಹೇಳಬಹುದು. ಮುಖ್ಯವಾಗಿ ಕಥಾಸಾಹಿತ್ಯ ರಚನೆಗೆ ಯುವ ಮನಸ್ಸು ಒಲಿದಿದೆ. ಅದಕ್ಕೆ ಕಾರಣಗಳು ಈ ಪ್ರದೇಶವು ಇನ್ನೂ ಗ್ರಾಮೀಣತನವನ್ನು ಉಳಿಸಿಕೊಂಡಿದೆ. ಅದಕ್ಕೆ ಅಭಿವೃದ್ಧಿಯಾಗದೇ ಇರುವುದು. ದೊಡ್ಡ ದೊಡ್ಡ ಇಂಡಸ್ಟ್ರಿಗಳು ಇಲ್ಲಿ ನೆಲೆಯೂರಿಲ್ಲ. ಐ.ಟಿ.ಬಿ.ಟಿ.ಯಂತಹ ಕಂಪೆನಿಗಳು ನೆಲೆಗೊಂಡಿಲ್ಲ. ವಿದ್ಯಾವಂತರಿಗೆ ಅವಕಾಶಗಳು ಇರುವ ಕಂಪೆನಿಗಳು ಇಲ್ಲ. ಕೂಲಿ-ಕಾರ್ಮಿಕರನ್ನು ಅವಲಂಬಿಸಿರುವ ಇಂಡಸ್ಟ್ರಿಗಳು ಈ ಪ್ರಾಂತ್ಯದಲ್ಲಿವೆ. ಹೀಗಾಗಿ ಆಧುನಿಕತೆ ಮೈಗೂಡದೇ ಇರುವುದರಿಂದ, ಗ್ರಾಮೀಣ ಭಾಗದ ಅನುಭವಗಳೇ ಸಾಹಿತ್ಯದಲ್ಲಿ ಅಭಿವ್ಯಕ್ತಿ ಪಡೆಯುತ್ತಿವೆ.

೨೧ನೇ ಶತಮಾನ ಆರಂಭವಾಗಿದೆ. ಜಾಗತೀಕರಣ ಪ್ರಕ್ರಿಯೇ ಶುರುವಾಗಿ ಎರಡು ದಶಕಗಳು ಕಳೆದಿವೆ. ಕರ್ನಾಟಕವೂ ಬದಲಾಗುತ್ತಿದೆ. ಹೀಗಿರುವಾಗ ಈ ಭಾಗವನ್ನು 'ಹೈದರಾಬಾದ್ ಕರ್ನಾಟಕ' ಎಂದು ಇನ್ನೂ ಕರೆಯಬಹುದೇ? ಎಂಬ ಪ್ರಶ್ನೆ ಬರುತ್ತದೆ. ರಾಜಕೀಯ ಕಾರಣಗಳಿಗಾಗಿ ಉಳಿಸಲು ಕೆಲವರು ಪ್ರಯತ್ನಿಸಿದರೆ, ಕೆಲವರು 'ಕಲ್ಯಾಣ ಕರ್ನಾಟಕ' ಎಂದು ಕರೆಯಲು ಇಚ್ಚಿಸುತ್ತಾರೆ. ಕರ್ನಾಟಕದ ಭಾಗವಾಗಿ ಇರುವುದು ಉಚಿತ ಅನ್ನಿಸುತ್ತದೆ. ಪ್ರಾತಿನಿಧ್ಯ ಪಡೆಯಲು ಹಿಂದುಳಿದ ಪ್ರಾಂತ್ಯ ಎಂಬ ಹಣೆಪಟ್ಟಿ ಇರುವುದು ಕೆಲವರಿಗೆ ಬೇಕಾಗಿದೆ. ಇಂತಹ ಸಮಸ್ಯೆಗಳಲ್ಲಿ ಈ ಪ್ರಾಂತ್ಯ ಸಿಕ್ಕಿಕೊಂಡಿದೆ. ಇಲ್ಲಿನ ಅಭಿವೃದ್ಧಿ ಬಗ್ಗೆ ಹೇಳುವುದು ಇಲ್ಲಿ ಉಚಿತವಾಗಲಾರದೆಂದು ಈ ಪ್ರಸ್ತಾಪ ಮಾಡಲು ಹಿಂಜರಿಕೆಯಿದೆ. ಆದರೆ ಸಾಹಿತ್ಯದ ಬೆಳವಣಿಗೆ ಆಶಾದಾಯಕವಾಗಿದೆ. ಈ ಭಾಗದ ಸಾಹಿತ್ಯವನ್ನು 'ಹೈದರಾಬಾದ್ ಕರ್ನಾಟಕ'ದ ಸಾಹಿತ್ಯವೆಂದು, ಲೇಖಕರನ್ನು 'ಹೈದರಾಬಾದ್ ಕರ್ನಾಟಕ'ದವರೆಂದು ಗುರುತಿಸುವ ಪರಿಪಾಠ ಮಾಯವಾದರೆ ಒಳಿತು.

# ಆಕರ ಗ್ರಂಥಗಳು


**ಸಂಪಾದಿತ ಕೃತಿಗಳು**

೧. ಅಲ್ಲಮಪ್ರಭು ಬೆಟ್ಟದೂರು, ಎಚ್.ಎಸ್ ಪಾಟೀಲ್, (ಸಂ) ೧೯೯೩, **ತಿರುಳ್ಗನ್ನಡ**, ಕನ್ನಡ ಸಾಹಿತ್ಯ ಪರಿಷತ್ತು, ಕೊಪ್ಪಳ.

೨. ಅಲ್ಲಮಪ್ರಭು ಬೆಟ್ಟದೂರು, ಎಚ್.ಎಸ್ ಪಾಟೀಲ್, (ಸಂ) **ವಿಮೋಚನೆ**, ೧೯೯೯, ಜಿಲ್ಲಾಡಳಿತ, ಕೊಪ್ಪಳ.

೩. ಅಲ್ಲಮಪ್ರಭು ಬೆಟ್ಟದೂರು, ಎಚ್.ಎಸ್ ಪಾಟೀಲ್, (ಸಂ) **ಕೊಪ್ಪಳ ಜಿಲ್ಲಾ ದರ್ಶನ**, ೨೦೦೫, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೪. ಕಾಳೇಗೌಡ ನಾಗವಾರ, ಆನಂದಮೂರ್ತಿ ಜಿ.ವಿ. (ಸಂ), **ಹಲವು ತೋಟದ ಹೂಗಳು**, ೨೦೦೦, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೫. ಗೀತಾ ನಾಗಭೂಷಣ (ಸಂ), **ಖೇಮಣ್ಣ**, ೧೯೯೮, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬. ಗುರುಬಸಯ್ಯ ಅಮ್ಮಾಪುರ (ಸಂ), **ನೀರಲಕೇರಿ ಬಸವಲಿಂಗ**, ೧೯೯೭, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೭. ಚನ್ನವೀರಪ್ಪ ಎಸ್.ಆರ್. (ಸಂ), **ಸ್ವರವಚನ ತರಂಗ ಸಂಪುಟ ೧**, ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಚೆನ್ನಬಸವಪ್ಪ ಬೆಟ್ಟದೂರು (ಸಂ), **ಘನಮಠ ನಾಗಭೂಷಣ ಶಿವಯೋಗಿ**, ೧೯೯೮, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೯. ಚೆನ್ನಣ್ಣ ವಾಲೀಕಾರ (ಸಂ), **ಸಣ್ಣಾಟಗಳು,** ೧೯೯೮, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೦. ಚಂದ್ರಶೇಖರ ಕಂಬಾರ (ಸಂ), **ಕನ್ನಡ ಜಾನಪದ ಕೋಶ,** ೧೯೮೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೧. ಚಿಲಮಿ ಆರ್.ಬಿ. (ಸಂ), **ಹಾರೋಗೇರಿಯ ಅಲಭೈರಿ ಕವಿಯ ಭಜನೆ(ತತ್ವ)ಪದಗಳು,** ೨೦೦೭, ಶ್ರೀ ವೃಷಭೇಂದ್ರಶಿಕ್ಷಣ ಸಂಸ್ಥೆ, ಹಾರೊಗೇರಿ.

೧೨. ಜಾಗಿರದಾರ್ ಆರ್.ಜಿ., ಲಿಂಗಸಗೂರು ವಿಠ್ಠಲರಾವ್ (ಸಂ), **ಹೈದರಾಬಾದ ಕರ್ನಾಟಕ,** ೧೯೪೧, ಪ್ರೇಮಸಾಗರ ಮುದ್ರಣಾಲಯ, ಹೈದರಾಬಾದ್.

೧೩. ಧ್ರುವನಾರಾಯಣ ಎಂ, (ಸಂ) **ಸ್ವಾತಂತ್ರ್ಯಾಂದೋಲನ ರಾಯಚೂರು ಜಿಲ್ಲೆ,** ೧೯೭೧, ಕರ್ನಾಟಕ ಸಂಘ, ರಾಯಚೂರು.

೧೪. ಧ್ರುವನಾರಾಯಣ ಎಂ (ಸಂ), **ನಾಡು ನುಡಿ ಮತ್ತು ಲಾಕುಳಶೈವ ಇತಿಹಾಸ,** ಸಮಗ್ರ ಸಾಹಿತ್ಯ ಮಾಲೆ ೨, ೨೦೦೬, ಪುಸ್ತಕ ಶಕ್ತಿ ಪ್ರಕಾಶನ, ಬೆಂಗಳೂರು.

೧೫. ಧ್ರುವನಾರಾಯಣ ಎಂ (ಸಂ), **ತಾರಾಸ್ಮರಣೆ,** ೨೦೧೦, ಅಭಿನವ ಪ್ರಕಾಶನ, ಬೆಂಗಳೂರು.

೧೬. ಧ್ರುವನಾರಾಯಣ ಎಂ, ನಾಗರರಾಜ ಕಿ. ರಂ. (ಸಂ), **ಅಂಟಿದ ನಂಟು,** ೨೦೧೦, ಅಭಿನವ ಪ್ರಕಾಶನ, ಬೆಂಗಳೂರು.

೧೭. ದಸ್ತಗಿರಿಸಾಬ್ ದಿನ್ನಿ, **ಜಂಬಣ್ಣ ಅಮರಚಿಂತ ಮತ್ತು ಡಾ. ರಾಜಶೇಖರ ನೀರಮಾನ್ವಿಯವರ ಸಾಹಿತ್ಯ,** ೨೦೦೮, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೮. ನರಸಿಂಗರಾವ್ ಮಾನ್ವಿ, **ಐತಿಹಾಸಿಕ ಚರಿತ್ರೆಯ ಕಥೆಗಳು,** ೧೯೫೦, ಪಠ್ಯ ಪುಸ್ತಕಾವಳಿ, ವಿದ್ಯಾಖಾತೆ, ಹೈದರಾಬಾದ ಸರ್ಕಾರ.

೧೯. ನಾಗಭೂಷಣಸ್ವಾಮಿ ಓ.ಎಲ್.(ಸಂ), **ನಮ್ಮ ಕನ್ನಡ ಕಾವ್ಯ,** ೧೯೯೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ನಾಯಕ ಜಿ.ಎಚ್.(ಸಂ), **ಶತಮಾನದ ಕನ್ನಡ ಸಾಹಿತ್ಯ,** ೨೦೦೦, ಬೃಂದಾವನ ಪ್ರಿಂಟರ್ಸ್ ಆ್ಯಂಡ್ ಪಬ್ಲಿಷರ್ಸ್ ಲಾಲ್‌ಬಾಗ್, ಬೆಂಗಳೂರು.

೨೧. ಪರಮಶಿವಮೂರ್ತಿ ಜಿ.ಎಸ್., ೧೯೭೯, **ಕನ್ನಡ ವಿಷಯ ವಿಶ್ವಕೋಶ,** ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೨. ಪಂಪಯ್ಯಶೆಟ್ಟಿ ಎಚ್ (ಪ್ರ ಸಂ)., ಅಮರೇಶ ನುಗಡೋಣಿ (ಸಂ), **ಬಿಸಿಲ ಹನಿಗಳು,** ೧೯೯೫, ಜಿಲ್ಲಾ ಸಾಹಿತ್ಯ ಪರಿಷತ್ತು, ರಾಯಚೂರು.

೨೩. ಪಾಟೀಲ ಎಂ.ಎಸ್., ನಾಯಕ ಡಿ.ಬಿ.(ಸಂ), **ಕನ್ನಡದಲ್ಲಿ ಅನುಭಾವ ಸಾಹಿತ್ಯ,** ೨೦೦೩, ಬಂಜಾರ ಪ್ರಕಾಶನ, ಗುಲಬರ್ಗಾ.

೨೪. ಪುರದ ಕೆ. ಎಂ. (ಸಂ), **ಸಮ್ಮೇಳನಾಧ್ಯಕ್ಷರ ಭಾಷಣಗಳು,** ೨೦೦೭, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು.

೨೫. ಪೂಜಾರ ವ್ಹಿ. ಜಿ., ಈಶ್ವರಯ್ಯಮಠ (ಸಂ), **ಆಯ್ದ ಸ್ವರವಚನಗಳು,** ೨೦೦೪, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೨೬. ಪೂಜಾರ ವ್ಹಿ. ಜಿ. (ಸಂ) **ರಾಮಪುರ ಬಕ್ಕಪ್ಪಯ್ಯನ ಸ್ವರವಚನ–ತ್ರಿವಿಧಿ,** ೧೯೯೬, ಶ್ರೀ ತೋಂಟದಾರ್ಯ ಸಂಸ್ಥಾನಮಠ, ಗದಗ.

೨೭. ಬರಗೂರು ರಾಮಚಂದ್ರಪ್ಪ (ಪ್ರಸಂ), **ಕನ್ನಡ ತತ್ವಪದಕಾರರು,** ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೮. ಬಸವ ಪಾಟೀಲ್ ಜಾವಳಿ, (ಸಂ) **ಕಾಲದ ನೆರಳು,** ೧೯೯೬, ರಚನಾ ಪಬ್ಲಿಶಿಂಗ್ ಹೌಸ್ ಕಲಬುರ್ಗಿ.

೩೦. ಬಸವರಾಜ ಪೋಲಿಸ್ ಪಾಟೀಲ, ಗವಿಸಿದ್ಧಪ್ಪ ಎಚ್. ಪಾಟೀಲ(ಸಂ), **ಬಿಡುಗಡೆ,** ೨೦೦೨, ಅಮರ ಪ್ರಕಾಶನ, ಗುಲಬರ್ಗಾ.

೩೧. ಬಸವರಾಜ ಪೋಲಿಸ್ ಪಾಟೀಲ, (ಸಂ), **ಹೈದರಾಬಾದ್ ಕರ್ನಾಟಕ ಜನಪದ ಸಾಹಿತ್ಯ,** ೨೦೦೧, ಅಮರ ಪ್ರಕಾಶನ ಗುಲಬರ್ಗಾ.

೩೨. ಬಸವರಾಜ ಸಬರದ (ಸಂ), **ಹೈದರಾಬಾದ್ ಕರ್ನಾಟಕದ ತತ್ವಪದಗಳು,** ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೩. ಬಸವರಾಜ ಕಲ್ಗುಡಿ, (ಸಂ), **ಸುವರ್ಣ ವಿಚಾರ ಸಾಹಿತ್ಯ,** ೨೦೦೬, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೩೪. ಭಾಸ್ಕರ್ ಟಿ.ಎಂ.(ಸಂ), **ಆಯ್ದ ತತ್ವಪದಗಳು,** ೨೦೦೭, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೩೫. ಭಾಸ್ಕರ್ ಟಿ.ಎಂ., ರಾಜಶೇಖರ ಹತಗುಂದಿ, (ಸಂ) **ಕಲಬುರ್ಗಿ ಜಿಲ್ಲಾ ದರ್ಶನ,** ೨೦೦೫, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೩೬. ಮೃತ್ಯುಂಜಯ ಹೊರಕೇರಿ, ಬಸವಲಿಂಗಪ್ಪ ಸೊಪ್ಪಿಮಠ (ಸಂ), **ರಾಯಚೂರು ಜಿಲ್ಲಾ ದರ್ಶನ,** ೨೦೦೫, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೩೭. ಲಠ್ಠೆ ಎಂ.ಎಸ್. (ಸಂ), **ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು,** ೧೯೮೨, ಶ್ರೀ ತೋಂಟದಾರ್ಯ ಸಂಸ್ಥಾನಮಠ, ಗದಗ.

೩೮. ಲಠ್ಠೆ ಎಂ.ಎಸ್. (ಸಂ), **ಬಂಡೆಪ್ಪ ಕವಿಯ ಭಜನೆಯ ಹಾಡುಗಳು,** ೧೯೭೮, ಶ್ರೀ ವೀರಭದ್ರೇಶ್ವರ ಪ್ರಕಾಶನ, ಸಿರಗಾಪುರ.

೩೯. ಲಠ್ಠೆ ಎಂ.ಎಸ್., (ಸಂ)**ಜನಪದ ಕವಿಚರಿತೆ,** ೧೯೭೯, ಬಸಂತರಾಯ ಮಾಲಿಪಾಟೀಲ ಸ್ಮಾರಕ ಗ್ರಂಥ ಪ್ರಕಾಶನ, ಧಂಗಾಪುರ, ಅಳಂದ.

೪೦. ವಿಜಯಶ್ರೀ ಸಬರದ (ಸಂ), **ಗುರು-ಶಿಷ್ಯರ ತತ್ವಪದಗಳು,** ೧೯೯೭, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೪೧. ವಿಜಯಶ್ರೀ ಸಬರದ (ಸಂ), **ವಿಮರ್ಶಾ ಲೇಖನಗಳು,** ೨೦೦೫, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೪೨. ವೀರಣ್ಣ ದಂಡೆ, ಶ್ರೀಪಾದಶೇಟ್ಟಿ, (ಸಂ) **ಸುವರ್ಣ ಜಾನಪದ ಲೇಖನಗಳು,** ೨೦೦೬, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೪೩. ವಿವಿಧ ಲೇಖಕರು, (ಸಂ) **ಕರ್ನಾಟಕ ಪರಂಪರೆ, ಸಂಪುಟ ೧ ಮತ್ತು ೨** ೨೦೦೬, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೪೪. ವೆಂಕಟಾಚಲಶಾಸ್ತ್ರಿ. ಟಿ.ವಿ, **ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ ೨,** ೧೯೭೫, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೪೫. ಶಾಂತರಸ (ಸಂ), **ಕೂಡಲೂರು ಬಸವಲಿಂಗ ಶರಣರ ಸ್ವರವಚನಗಳು,** ೧೯೮೨, ಶ್ರೀ ತೋಂಟದಾರ್ಯ ಮಠ, ಗದಗ.

೪೬. ಶಾಂತರಸ (ಸಂ), **ಕಲ್ಲೂರು ಲಿಂಗಣ್ಣವೊಡೆಯ ವಿರಚಿತ ಬಾರಾಮಾಸ,** ೧೯೯೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೭. ಶಾಂತರಸ (ಪ್ರ ಸಂ), ಓ.ಎಲ್ ನಾಗಭೂಷಣಸ್ವಾಮಿ (ಸಂ), **ತತ್ವಪ್ರತಿಗಳು-ಪ್ರಾತಿನಿಧಿಕ ಸಂಕಲನ,** ೨೦೦೦, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೮. ಶಿವಾನಂದ ಗುಬ್ಬಣ್ಣವರ (ಸಂ), **ಬರಕೋ ಪದ ಬರಕೋ,** ೧೯೮೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೯. ಶೇಷಗಿರಿರಾವ್ ಎಲ್.ಎಸ್. (ಸಂ), **ಭಾರತೀಯ ಸಾಹಿತ್ಯ ಸಮೀಕ್ಷೆ, ಸಂಪುಟ ೨,** ೧೯೯೦, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೦. ಷೇಕ್ ಅಲಿ ಬಿ (ಸಂ), **ಕರ್ನಾಟಕ ಚರಿತ್ರೆ ಸಂಪುಟ ೪** ೧೯೯೭, ಪ್ರಸಾರಾಂಗ ಕನ್ನಡ ವಿಶ್ವದಿದ್ಯಾಲಯ, ಹಂಪಿ.

೫೧. ಸ್ವಾಮಿರಾವ್ ಕುಲಕರ್ಣಿ, **ಕಲಬುರ್ಗಿ ಜಿಲ್ಲಾ ಕವಿಕಾವ್ಯ ಪರಂಪರೆ,** ೨೦೦೬ ಜಿಲ್ಲಾ ಸಾಹಿತ್ಯ ಪರಿಷತ್ತು, ಕಲಬುರ್ಗಿ.

೫೨. ಸಿದ್ಧಯ್ಯಪುರಾಣಿಕ, ರಾಘವೇಂದ್ರಾಚಾರ್ ಇಟಗಿ (ಸಂ), **ಶ್ರೀಕಾರ,** ೧೯೫೪, ಕರ್ನಾಟಕ ಸಾಹಿತ್ಯ ಮಂದಿರ, ಹೈದರಾಬಾದ್ (ದಕ್ಷಿಣ).

೫೩. ಸಿದ್ಧಯ್ಯಪುರಾಣಿಕ, ರಾಘವೇಂದ್ರಾಚಾರ್ ಇಟಗಿ (ಸಂ), **ಪ್ರಬಂಧಮಾಲೆ,** ೧೯೫೪, ಕರ್ನಾಟಕ ಸಾಹಿತ್ಯ ಮಂದಿರ, ಹೈದರಾಬಾದ್ (ದಕ್ಷಿಣ).

೫೪. ಸೋಮನಾಥ ಯಾಳವಾರ, ಪ್ರೇಮಾ ಸಿರ್ಶೆ, (ಸಂ) **ಬೀದರ ಜಿಲ್ಲಾ ದರ್ಶನ,** ೨೦೦೫, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೫೫. ಹರಿಶ್ಚಂದ್ರ ದಿಗ್ಸಂಗೀಕರ್, (ಸಂ) **ಸಾವಳಗಿ ಮಹಮ್ಮದ್ ಸಾಬ ಜೀವನ ಹಾಗೂ ಕೃತಿಗಳ ಸಮೀಕ್ಷೆ**, ೨೦೦೮, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫೬. ಹಳ್ಳಿಕೇರಿ ಎಫ್.ಟಿ. ಮತ್ತು ರವೀಂದ್ರನಾಥ ಕೆ.(ಸಂ), **ದಶಕದ ಕನ್ನಡ ಸಾಹಿತ್ಯ**, ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಸ್ವತಂತ್ರ ಕೃತಿಗಳು**

೧. ಅಮರೇಶ ನುಗಡೋಣಿ, **ಹೈದರಾಬಾದು ಕರ್ನಾಟಕ ಹಾಡು ಪಾಡು**, ೨೦೦೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಅಮರೇಶ ನುಗಡೋಣಿ, **ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದು ಕರ್ನಾಟಕ ವಿಮೋಚನೆ**, ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಅಮರೇಶ ನುಗಡೋಣಿ, **ನುಡಿವ ಬೆಡಗು**, ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಆಲೂರು ವೆಂಕಟರಾಯರು, **ಕರ್ನಾಟಕ ಗತವೈಭವ**, ೨೦೦೬, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು.

೫. ಉಪಾಧ್ಯ ಜಿ.ಎನ್., **ಮಹಾರಾಷ್ಟ್ರ ಕರ್ನಾಟಕ ಸಾಂಸ್ಕೃತಿಕ ಸಂಬಂಧ**, ೨೦೦೬, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬. ಕೀರ್ತಿನಾತ ಕುರ್ತಕೋಟಿ, **ಕನ್ನಡ ಸಾಹಿತ್ಯ ಸಂಗಾತಿ**, ೨೦೦೮, ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ, ಧಾರವಾಡ.

೭. ಕೃಷ್ಣ ಕೋಲ್ಹಾರ ಕುಲಕರ್ಣಿ, **ಅಖಂಡ ಕರ್ನಾಟಕದ ಹೆಜ್ಜೆಗಳು**, ೨೦೦೬, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೮. ಕೃಷ್ಣ ಕೋಲ್ಹಾರ ಕುಲಕರ್ಣಿ, **ಸಂಶೋಧಕ ನಾ. ಶ್ರೀ ರಾಜಪುರೋಹಿತ**, ೨೦೦೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಗೀತಾ ನಾಗಭೂಷಣ, **ದಂಗೆ**, ೧೯೯೭, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೦. ಗೋಕಾಕ್ ವಿ. ಕೃ. **ಕನ್ನಡದ ಕಾಲು ಶತಮಾನ**, ೧೯೬೫, ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ.

೧೧. ಗೋಪಾಲರಾವ ಹೇಜೀಬ್, **ಹೈದರಾಬಾದ್ ಮುಕ್ತಿ ಸಂಘರ್ಷ**, ೨೦೦೧, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು.

೧೨. ಗೋಪಾಲರಾವ್ ಎಚ್.ಎಸ್., **ಕರ್ನಾಟಕ ಏಕೀಕರಣ ಇತಿಹಾಸ**, ೨೦೦೫, ನವಕರ್ನಾಟಕ, ಬೆಂಗಳೂರು.

೧೩. ಡೈರಕ್ಟರ್, **ಒರೆಗಲ್ಲು ಮತ್ತು ಬೇರೆ ಕತೆಗಳು**, ೧೯೫೩, ಸುದ್ದಿ ಮತ್ತು ಸಾರ್ವಜನಿಕ ಸಂಬಂಧಗಳ ಖಾತೆ, ಹೈದರಾಬಾದ ಸಂಸ್ಥಾನ.

೧೪. ಚಂದ್ರಕಾಂತ ಕುಸನೂರ, **ಯಾತನಾಶಿಬಿರ,** ೧೯೭೫, ಮನೋಹರ ಗ್ರಂಥಮಾಲೆ, ಧಾರವಾಡ.

೧೫. ಚಂದ್ರಶೇಖರ್ ಟಿ.ಆರ್. **ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಮತ್ತು ಉನ್ನತಾಧಿಕಾರ ಸಮಿತಿ ವರದಿ,** ೨೦೦೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ಚನ್ನಬಸವ ಹಿರೇಮಠ, **ಎಡೆದೊರೆ ನಾಡು,** ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ಚಿದಾನಂದಮೂರ್ತಿ. ಎಂ. **ಕರ್ನಾಟಕ ಸಂಸ್ಕೃತಿ,** ೨೦೦೯, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೮. ಚೆನ್ನಬಸವಪ್ಪ ಬೆಟ್ಟದೂರು, **ನನ್ನ ಜೀವನಾನುಭವಗಳು,** ೨೦೦೮, ಬಸವತತ್ವ ಪ್ರಸಾರ ಸಂಸ್ಥೆ, ಧಾರವಾಡ.

೧೯. ಚೆನ್ನಣ್ಣ ವಾಲೀಕಾರ, **ಜಾನಪದಲೋಕ,** ೧೯೯೩, ದಲಿತ ಬಂಡಾಯ ವಿಚಾರ ಪ್ರಚಾರ ಸಮಿತಿ, ಗುಲಬರ್ಗಾ.

೨೦. ಚೆನ್ನಣ್ಣ ವಾಲೀಕಾರ, **ಚರಗ,** ೧೯೮೭, ಶ್ರೀಗಿರಿ ಪ್ರಕಾಶನ, ಕುಡಿ.

೨೧. ಚೆನ್ನಣ್ಣ ವಾಲೀಕಾರ, **ಹುಲಿಗೆಮ್ಮ,** ೧೯೮೯, ಪ್ರಜ್ಞಾ ಪ್ರಕಾಶನ, ಗುಲಬರ್ಗಾ.

೨೨. ಚೆನ್ನಣ್ಣ ವಾಲೀಕಾರ, **ಕುತ್ತದಲ್ಲಿ ಅದ್ದಿದವರ ಕಥೆಗಳು,** ೧೯೯೦, ಶಿರಪುರ ಪ್ರಕಾಶನ, ಗುಲಬರ್ಗಾ.

೨೩. ಚೆನ್ನಣ್ಣ ವಾಲೀಕಾರ, **ಮರದ ಮೇಲಿನ ಗಾಳಿ,** ೧೯೬೯, ವ್ಹಿ.ಎಸ್. ಭಾವಿಕಟ್ಟಿ ಪ್ರಕಾಶನ, ಗುಲಬರ್ಗಾ.

೨೪. ಚೆನ್ನಣ್ಣ ವಾಲೀಕಾರ, **ಹಾಲ್ದೆನೆ,** ೧೯೯೦, ಅನುಪಮ ಪ್ರಕಾಶನ, ಅಥಣಿ.

೨೫. ಚೆನ್ನಣ್ಣ ವಾಲೀಕಾರ, **ಜಲಪಾತ,** ೧೯೫೩, ಸಂಧ್ಯಾ ಸಾಹಿತ್ಯ ಮಾಲೆ, ಹೈದರಾಬಾದ ದಕ್ಷಿಣ.

೨೬. ಚೆನ್ನಣ್ಣ ವಾಲೀಕಾರ, **ಬಣ್ಣಬಣ್ಣದ ಓಕುಳಿ,** ೧೯೯೪, ನಿರ್ಮಲ ಪ್ರಕಾಶನ, ತಿಪಟೂರು.

೨೭. ಚೆನ್ನಣ್ಣ ವಾಲೀಕಾರ, **ಬಂಡೆದ್ದ ದಲಿತರ ಬೀದಿ ಹಾಡುಗಳು,** ೧೯೮೨, ದರ್ಪಣ ಪ್ರಕಾಶನ, ದೇವಗಾಂವ್.

೨೮. ಜಯತೀರ್ಥ ರಾಜಪುರೋಹಿತ, **ಖಾಜಾ ಬಂದೇನವಾಜ್,** ೧೯೮೦, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೨೯. ಜಯತೀರ್ಥ ರಾಜಪುರೋಹಿತ, **ಸುಳಿಗಾಳಿ,** ೧೯೮೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೩೦. ಜಯತೀರ್ಥ ರಾಜಪುರೋಹಿತ, **ಮೌಲ್ಯಗಳು,** ೧೯೭೪, ಶ್ರೀ ಪ್ರಕಾಶನ, ಬೆಂಗಳೂರು.

೩೧. ಜಯತೀರ್ಥ ರಾಜಪುರೋಹಿತ, **ಪಾರವ್ವನ ಪಂಚಾಯಿತಿ,** ೧೯೬೭, ನೃಪತುಂಗ ಪ್ರಕಾಶನ, ಕಲಬುರ್ಗಿ.

೩೨. ಜಯತೀರ್ಥ ರಾಜಪುರೋಹಿತ, **ಹಾಲು ಜೇನು,** ೧೯೬೭, ಕನ್ನಡ ಸಾಹಿತ್ಯ ಸಂಘ, ಕಲಬುರ್ಗಿ.

೩೩. ಜಯತೀರ್ಥ ರಾಜಪುರೋಹಿತ, **ರೂಹಿಣಿ,** ೧೯೬೯, ಪ್ರಕಾಶ ಪ್ರಕಾಶನ, ರಾಯಚೂರು.

೩೪. ಜಂಬಣ್ಣ ಅಮರಚಿಂತ, **ಕುರುಮಯ್ಯ ಅಂಕುಶದೊಡ್ಡಿ,** ೧೯೯೪, ಮಾರ್ಕ್ಸ್‌ಲೆನಿನ್ ವಿಚಾರ ಪ್ರಚಾರ ಸಮಿತಿ, ಗುಲಬರ್ಗಾ.

೩೫. ದಸ್ತಗಿರಿ ಅಲ್ಲೀಭಾಯಿ, **ಮೊಹರಂ ಪದಗಳು,** ೧೯೯೯, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩೬. ಧ್ರುವನಾರಾಯಣ ಎಂ, **ಹೈದರಾಬಾದ್ ಕರ್ನಾಟಕದಲ್ಲಿ ಖಾದಿ ಇತಿಹಾಸ,** ೨೦೦೨, ಕರ್ನಾಟಕ ಗ್ರಾಮ ಸೇವಾ ಸಂಘ ಹಾಗೂ ಖಾದಿ ಗ್ರಾಮೋದ್ಯೋಗ ಸಂಘ, ರಾಯಚೂರು.

೩೭. ದೇವೇಂದ್ರಕುಮಾರ್ ಹಕಾರಿ, **ಆಯ್ದ ಕವನಗಳು,** ೧೯೯೯, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೩೮. ದೇವೇಂದ್ರಕುಮಾರ್ ಹಕಾರಿ, **ಅಮೃತಮತಿ,** ೧೯೬೭ ತಾರಾ ಗ್ರಂಥ ಪ್ರಕಾಶನ, ಧಾರವಾಡ.

೩೯. ನರಸಿಂಹಾಚಾರ್ ಆರ್., **ಕರ್ನಾಟಕ ಕವಿಚರಿತೆ, ಸಂಪುಟ ೨ ಮತ್ತು ೩,** ೨೦೦೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೦. ನಟರಾಜ ಹುಳಿಯಾರ್, **ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ,** ೨೦೦೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೧. ನಲವಡಿ ಕೃಷ್ಣಶಾಸ್ತ್ರಿ, **ಹೈದರಾಬಾದ್ ರಜಾಕಾರ ಲಾವಣಿ,** ೧೯೯೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೨. ನಾಗಭೂಷಣ ಸಿ., **ಕಲ್ಯಾಣ ಕರ್ನಾಟಕ ಸಾಹಿತ್ಯ ಸಂಸ್ಕೃತಿ,** ೨೦೦೯, ಅವಿರತ ಪುಸ್ತಕ, ಆವಲಹಳ್ಳಿ, ಬೆಂಗಳೂರು.

೪೩. ನಾರಾಯಣ ಕೆ.ವಿ., **ಬೇರು ಕಾಂಡ ಚಿಗುರು,** ೧೯೯೭, ವಿವೇಕ ಪ್ರಕಾಶನ, ಬೆಂಗಳೂರು.

೪೪. ನಿಡಗುಂದಿ. ರಂ.ರಾ, **ಅ ಹ ಹ . . . .ವರದಕ್ಷಿಣೆ,** ೧೯೫೭, ಪ್ರಕಾಶಕರು ರಾ.ವಿ ಕುಲಕರ್ಣೀ, ನಿಡಗುಂದಿ.

೪೫. ಪಾಟೀಲ್ ಬಿ. ಸಿ. **ಕೊಪ್ಪಳ : ಸಾಂಸ್ಕೃತಿಕ ಪರಂಪರೆ,** ೧೯೯೮, ಹರಿಹರ ಪ್ರಕಾಶನ, ಕೊಪ್ಪಳ.

೪೬. ಪೂಜಾರ ವ್ಹಿ. ಜಿ., **ಕನ್ನಡ ಸಾಹಿತ್ಯ ಕೋಮು ಸೌಹಾರ್ದತೆ,** ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೭. ಪೋತೆ ಎಚ್.ಟಿ, **ಹೈದರಾಬಾದ್ ಕರ್ನಾಟಕದ ಜನಪದ ಪ್ರದರ್ಶನ ಕಲೆಗಳು,** ೨೦೦೦, ಅಂಬು ಪ್ರಕಾಶನ, ರಾಯಚೂರು.

೪೮. ಪಂಚಾಕ್ಷರಿ ಹಿರೇಮಠ, **ಉರ್ದು ಸಾಹಿತ್ಯ : ಒಂದು ಪರಿಚಯ,** ೧೯೮೮, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪೯. ಬರಗೂರು ರಾಮಚಂದ್ರಪ್ಪ, **ಕನ್ನಡ ಸಾಹಿತ್ಯವೆಂಬ ಸ್ವಾತಂತ್ರ್ಯ ಹೋರಾಟ,** ೨೦೦೭, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೫೦. ಬಸವರಾಜ ಕಲ್ಗುಡಿ, **ಅನುಭಾವ : ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ,** ೧೯೯೭, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೫೧. ಬಸವರಾಜ ಪೊಲೀಸ್ ಪಾಟೀಲ, **ಹೈದರಾಬಾದ್ ಕರ್ನಾಟಕದ ಜನಪದ ಸಾಹಿತ್ಯ,** ೨೦೦೧, ಅಮರ ಪ್ರಕಾಶನ, ಗುಲರ್ಗಾ.

೫೨. ಬಸವರಾಜ ಸಬರದ, **ರಾಯಚೂರು ಜಿಲ್ಲೆಯ ಅನುಭಾವಿ ಕವಿಗಳು,** ೧೯೯೬, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು.

೫೩. ಭಾಲಚಂದ್ರ ಜಯಶೆಟ್ಟಿ, **ಮಿರ್ಚಿಬಾಬಾ ಮತ್ತು ಇತರ ಕಥೆಗಳು,** ೧೯೯೩ ಬಸವ ಪ್ರಕಾಶನ, ಗುಲಬರ್ಗಾ.

೫೪. ಭೀಮಸೇನರಾವ್ ಡಿ.ಕೆ., **ಅವಲೋಕನ ಸಂಶೋಧನ,** ೨೦೦೦, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೫೫. ಭೀಮಸೇನರಾವ್ ಡಿ.ಕೆ., **ಹದಿಮೂರನೆಯ ಶತಮಾನದ ಕರ್ನಾಟಕಾಂಧ್ರ ಮಹಾರಾಷ್ಟ್ರ ಸಾಹಿತ್ಯಾವಲೋಕನ,** ೧೯೯೯, ನಿಶಾಂತ ಪ್ರಕಾಶನ, ಬೆಳಗಾವಿ.

೫೬. ಮಣೂರ ಎಸ್.ಆರ್., **ಹೈದರಾಬಾದ ಕರ್ನಾಟಕ ವಿಮೋಚನೆ,** ೨೦೦೬, ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ.

೫೭. ಮಹಾಬಲೇಶ್ವರಪ್ಪ ಬಿ.ಸಿ., **ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು,** ೧೯೯೭, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೫೮. ಮೀನಾಕ್ಷಿ ಬಾಳಿ, **ಖೈನೂರು ಕೃಷ್ಣಪ್ಪ,** ೧೯೯೮, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೯. ಮುಕ್ತಾಯಕ್ಕ ಎಚ್.ಎಸ್., **ಅಪ್ಪ,** ೨೦೦೮, ಡಾ. ಚನ್ನಬಸವ ಪಟ್ಟದ್ದೇವರು ಪ್ರತಿಷ್ಠಾನ, ಹಿರೇಮಠ ಸಂಸ್ಥಾನ, ಭಾಲ್ಕಿ.

೬೦. ಮುತ್ತಾಳ ಎ.ಬಿ., **ಕಳಚಲಿದೆ ರತ್ನ,** ೧೯೫೧, ಎಂ.ಬಿ. ಅಂದಾನಪ್ಪ, ಕೊಪ್ಪಳ.

೬೧. ಮತ್ತುಗಾರ ಸ್ವಾಮಿ, **ಮುತ್ತುಗಾರ,** ೧೯೩೬, ನೃಪತುಂಗ ವಿದ್ಯಾಲಯ, ಹೈದರಾಬಾದ್.

೬೨. ಮುಗಳಿ ರಂ. ಶ್ರೀ., **ಕನ್ನಡ ಸಾಹಿತ್ಯ ಚರಿತ್ರೆ** ೧೯೯೩, ಗೀತಾ ಬುಕ್ ಹೌಸ್, ಬೆಂಗಳೂರು.

೬೩. ರಂಗನಾಥ ದಿವಾಕರ, **ಕರ್ನಾಟಕ ಏಕೀಕರಣದ ಕಥೆ,** ೧೯೫೬, ಲೋಕ ಶಿಕ್ಷಣ ಟ್ರಸ್ಟ್, ಹುಬ್ಬಳ್ಳಿ.

೬೪. ರಹಮತ್ ತರೀಕೆರೆ, **ಕರ್ನಾಟಕದ ಸೂಫಿಗಳು,** ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೫. ರಹಮತ್ ತರೀಕೆರೆ, **ಪ್ರತಿ ಸಂಸ್ಕೃತಿ,** ೨೦೦೯, ಅಭಿನವ ಮರೇನಹಳ್ಳಿ, ವಿಜಯನಗರ, ಬೆಂಗಳೂರು.

೬೬. ರಹಮತ್ ತರೀಕೆರೆ, **ಮರದೊಳಗಣ ಕಿಚ್ಚು,** ೨೦೦೨, ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್, ಶೇಷಾದ್ರಿಪುರಂ, ಬೆಂಗಳೂರು.

೬೭. ರಹಮತ್ ತರೀಕೆರೆ, **ಕನ್ನಡ ಸಂಶೋಧನೆಯ ತಾತ್ವಿಕ ವಿಚಾರ,** ೨೦೦೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೮. ರಾಘವೇಂದ್ರ ರಾವ್ ಎಚ್.ಎಸ್., **ನಿಲುವು,** ೧೯೮೯, ಕನ್ನಡ ಸಂಘ ಕ್ರೈಸ್ಟ್ ಕಾಲೇಜು, ಬೆಂಗಳೂರು.

೬೯. ರಾಘವೇಂದ್ರ ರಾವ್ ಕೆ. **ಪ್ರೊ.ಡಿ.ಕೆ. ಭೀಮಸೇನರಾಯರರು ಬದುಕು ಬರಹ,** ೨೦೦೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭೦. ರಾಜಶೇಖರ ಜಿ., **ತೆಲಂಗಾಣ ರೈತ ಹೋರಾಟ,** ೧೯೮೧, ಸಮುದಾಯ ಪ್ರಕಾಶನ, ಬೆಂಗಳೂರು.

೭೧. ರಾಮಣ್ಣ ಹವಳೆ, **ಸ್ವಾತಂತ್ರ್ಯ ಸೇನಾನಿ ಪುಂಡಲಿಕಪ್ಪ ಜ್ಞಾನಮೋಕೆ,** ೧೯೯೬, ಚೇತನ ಪ್ರಕಾಶನ, ರಾಯಚೂರು.

೭೨. ರಾಮಣ್ಣ ಹವಳೆ, **ಸ್ವಾತಂತ್ರ್ಯ ಹೋರಾಟದಲ್ಲಿ ಗಜೇಂದ್ರಗಡ ಶಿಬಿರ,** ೧೯೯೬, ಚೇತನ ಪ್ರಕಾಶನ, ರಾಯಚೂರು.

೭೩. ರುಕ್ಮಿಣಿಕಂದ, **ಹಾಳುಕಾಗದ,** ೧೮೫೩, ಕರ್ನಾಟಕ ತರುಣ ತಂಡ, ರಾಯಚೂರು.

೭೪. ಲಿಂಗಣ್ಣ ಸತ್ಯಂಪೇಟೆ, **ಪ್ರಸ್ತುತ,** ೧೯೮೦, ಕಲ್ಯಾಣ ನಾಡಿನ ವೀರಶೈವ ಪರಿಷತ್ತು, ಹುಮನಾಬಾದ್-ಬೀದರ್,

೭೫. ವಿರುಪಾಕ್ಷಸ್ವಾಮಿ ಮುಧೋಳ, **ನಮ್ಮ ಬದುಕು,** ೧೯೪೭, ವಿಶ್ವನಾಥ ವಾಚನಾಲಯ, ಆಡೂರು,

೭೬. ವೀರಭದ್ರಪ್ಪ ಶಿರೂರ, **ಹಳ್ಳಿಯ ಏಳಿಗೆ,** ೧೯೫೦, ವಿಶ್ವನಾಥ ವಾಚನಾಲಯ, ಆಡೂರು,

೭೭. ವೀರಭದ್ರಪ್ಪ ಶಿರೂರ, **ಭಾರತ ಸ್ವಾತಂತ್ರ್ಯಕ್ಕೆ ಕೊಪ್ಪಳ ನಾಡಿನ ಕಾಣಿಕೆ,** ೧೯೫೯, ವಿಶ್ವನಾಥ ವಾಚನಾಲಯ, ಆಡೂರು.

೭೮. ವಿಸಾಜಿ. ಜಿ.ಬಿ, **ಮುಂಜಾವು,** ೧೯೭೫, ಗೆಳೆಯರ ಬಳಗ, ಕೊಹೀನೂರು.

೭೯. ವಿಸಾಜಿ. ಜಿ.ಬಿ, **ಅನಂತ ಸಂಗಮ,** ೧೯೬೯, ಗೆಳೆಯರ ಬಳಗ, ಕೊಹೀನೂರು.

೮೦. ವೈಜನಾಥ ಪಾಟೀಲ, **ಹೈದ್ರಾಬಾದ ಕರ್ನಾಟಕ,** ೨೦೦೫, ಕಲ್ಯಾಣ ಕರ್ನಾಟಕ ಸಾಂಸ್ಕೃತಿಕ ಪರಿಷತ್ತು ಕಲಬುರ್ಗಿ.

೮೧. ಶಂಭಾ ಜೋಶಿ, **ಕನ್ನಡದ ನೆಲೆ**, ೧೯೩೯, ಮೋಹನ ಮುದ್ರಣಾಲಯ, ಧಾರವಾಡ.
೮೨. ಶಾಂತರಸ, **ಸ್ವಾತಂತ್ರ್ಯವೀರ ಮತ್ತು ಇತರ ಕಥೆಗಳು**, ೧೯೮೭, ಪುಸ್ತಕ ಅಕಾಡೆಮಿ, ಕಲಬುರ್ಗಿ.
೮೩. ಶಾಂತರಸ, **ಬೆನ್ನ ಹಿಂದಿನ ಬೆಳಕು**, ೧೯೭೨, ಸತ್ಯಸ್ನೇಹ ಪ್ರಕಾಶನ, ರಾಯಚೂರು.
೮೪. ಶಾಂತರಸ, **ಬಯಲ ಸೀಮೆಯ ಬಿಸಿಲು**, ೧೯೭೨, ಸತ್ಯಸ್ನೇಹ ಪ್ರಕಾಶನ, ರಾಯಚೂರು.
೮೫. ಶಾಂತರಸ, **ಉರಿದ ಬದುಕು**, ೧೯೯೬, ನವಕರ್ನಾಟಕ ಪ್ರಕಾಶನ, ಬೆಂಗಳೂರು.
೮೬. ಶಾಂತರಸ, **ಶಾಂತರಸರ ಸಮಗ್ರ ಕಥೆಗಳು**, ೧೯೯೭, ಪ್ರೀಯದರ್ಶಿನಿ ಪ್ರಕಾಶನ, ಬೆಂಗಳೂರು.
೮೭. ಶಿವರುದ್ರಪ್ಪ ಜಿ.ಎಸ್., **ಕನ್ನಡ ಸಾಹಿತ್ಯ ಸಮೀಕ್ಷೆ**, ೧೯೭೫, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.
೮೮. ಶ್ರೀನಿವಾಸ ಹಾವನೂರ, **ಹೈದರಾಬಾದಿನ ವೀರ ಕನ್ನಡಿಗ ಬಿ.ಜಿ.ಚಿಮ್ಮಲಗಿ**, ೧೯೮೦, ವಿಜಯ ಪ್ರಕಾಶನ, ಬೆಳಗಾವಿ.
೮೯. ಶೈಲಜಾ ಉಡಚಣ, **ಕಪ್ಪುನೆಲ ಸೊಕ್ಕಿದ ಸೂರ್ಯ**, ೧೯೮೮, ಚೇತನ ಪ್ರಕಾಶನ, ಗುಲಬರ್ಗಾ.
೯೦ ಶೈಲಜಾ ಉಡಚಣ, **ತುಂತುರು ಹನಿಗಳು**, ೧೯೯೧, ಶಬ್ದ ಸಮಾಜ ಮೇಲ್ಸೇತುವೆ, ಗುಲಬರ್ಗಾ.
೯೧. ಶೈಲಜಾ ಉಡಚಣ, **ನನ್ನಂಥವರು**, ೧೯೯೫, ಮಹಿಳಾ ಸಾಹಿತ್ಯಿಕಾ, ಹುಬ್ಬಳ್ಳಿ.
೯೨. ಸಂಗಯ್ಯ ಸ್ವಾಮಿ, **ಅಮರಗನ್ನಡ ಲಿಪಿ**, ೨೦೦೬, ಶ್ರೀ ಕೊಡೇಕಲ್ ಬಸವೇಶ್ವರ ಅಧ್ಯಯನ ಸಂಸ್ಥೆ, ನಂದಿಹಾಳ.
೯೩. ಸಿದ್ಧಯ್ಯ ಪುರಾಣಿಕ, **ಶರಣ ಚರಿತಾಮೃತ**, ೧೯೬೪, ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.
೯೪. ಸಿದ್ಧಯ್ಯ ಪುರಾಣಿಕ, **ಆಯ್ದ ಕವನಗಳು**, ೧೯೮೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.
೯೫. ಸಿದ್ಧಯ್ಯ ಪುರಾಣಿಕ, **ರಜತರೇಖೆ**, ೧೯೬೨, ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ, ಧಾರವಾಡ.
೯೬. ಸುಬ್ಬಣ್ಣ ಕೆ.ವಿ., **ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು**, ೨೦೦೭, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.
೯೭. ಹನುಮಂತಾಚಾರ್ಯ ಉಪಾಧ್ಯಾಯ, **ಶುಭೋದಯ**, ೧೯೫೮, ಸಾಧನ ಪ್ರಕಾಶನ, ರಾಯಚೂರು.

**ಅಪ್ರಕಟಿತ ಪಿಎಚ್.ಡಿ. ಮತ್ತು ಎಂ.ಫಿಲ್ ಪ್ರಬಂಧಗಳು**

೧. ಅಮರೇಶ ಎನ್., **ಹೈದ್ರಾಬಾದ್ ಕರ್ನಾಟಕ ಸಾಹಿತ್ಯದಲ್ಲಿ ಸಾಮಾಜಿಕ ವಾಸ್ತವ,** ೧೯೯೮, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಪ್ರಕಾಶ ಬಳ್ಳಾರಿ, **ಕುದರೀಮೋತಿ ಮೊಹರಂ ಆಚರಣೆ ಮತ್ತು ಅಲೆಮಾರಿ ಜನಾಂಗಗಳು ಒಂದು ಅಧ್ಯಯನ,** ೨೦೦೯, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಬಿದರಿ ಚಂದ್ರಬಾಗ, **ಹೈದರಾಬಾದ್ ಕರ್ನಾಟಕ ಸಾಹಿತ್ಯದಲ್ಲಿ ಮಹಿಳಾ ಬದುಕಿನ ಪ್ರತಿನಿಧೀಕರಣ,** ೨೦೦೭, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ರಮೇಶ ಮೂಲಗೆ. **ಹೈದರಾಬಾದ್ ಕರ್ನಾಟಕದ ವೀರಶೈವ ಮಠಗಳು ಒಂದು ಅಧ್ಯಯನ** ೨೦೦೨, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಸರ್ವಮಂಗಳ ಸಕ್ರಿ, **ರಾಯಚೂರು ಜಿಲ್ಲೆಯ ತತ್ವಪದಕಾರರು ಮತ್ತು ಅವರ ಸಾಹಿತ್ಯ,** ೨೦೦೮, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಶರಣಪ್ಪ ವಿ. ಉಮಚಗಿ, **ಹೈದ್ರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳು,** ೨೦೦೪, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಶಿವಾನಂದ ವಿರಕ್ತಮಠ, **ಕೊಡೇಕಲ್ಲ ರಾಚಪ್ಪಯ್ಯ : ಒಂದು ಅಧ್ಯಯನ** ೨೦೦೧, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಆತ್ಮಕಥನಗಳು/ಅಭಿನಂದನ ಗ್ರಂಥಗಳು**

೧. ಚಂದ್ರಕಾಂತ ಕುಸನೂರ, ಬಂಡೆ ರಂಗರಾವ್ ಸರ್ ಮುಖದ್ದಮ್,(ಸಂ) **ರಾಘವೇಂದ್ರರಾವ್ ಭೀ ದೇಸಾಯಿ,** ೧೯೮೪, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು.

೨. ಬಸವರಾಜ ಜ್ಯೋತಿ. (ಸಂ) **ಧ್ಯೇಯಪಥದ ದೀಪಧಾರಿ, ಶ್ರೀ ಅಬ್ಬಿಗೇರಿ ವಿರುಪಾಕ್ಷಪ್ಪ ಸಂಭಾವನಾ ಗ್ರಂಥ,** ೧೯೬೭, ಹೊಂಬೆಳಗು ಪ್ರಕಾಶನ, ಸೂಡಿ.

೩. ಬಸವರಾಜ ಮಲಶೆಟ್ಟಿ, **ಎನಗಿಂತ ಕಿರಿಯರಿಲ್ಲ,** ೧೯೯೯, ಶ್ರೀ ಅಗಡಿ ಸಂಗಣ್ಣ ಅಭಿನಂದನ ಸಮಿತಿ, ಕೊಪ್ಪಳ

೪. ಮುತ್ತಾಳ ಎ.ಬಿ (ಸಂ), **ಪುಣ್ಯ ಸ್ಮರಣೆ, ಕೈ.ವಾ ಬಸರೀಗಿಡದ ವೀರಪ್ಪನವರ ಸ್ಮಾರಕ ಗ್ರಂಥ,** ೧೯೫೬, ಕೈ.ವಾ ಬಸರೀಗಿಡದ ವೀರಪ್ಪನವರ ಸ್ಮಾರಕ ಗ್ರಂಥ, ಕೊಪ್ಪಳ.

೫. ಸಗರ ಕೃಷ್ಣಾಚಾರ್ಯ, **ನನ್ನ ನಾ ಕಂಡೆ,** ಸಂಪುಟ ೧, ೧೯೯೨, ವಾಗ್ವಿಲಾಸ ಪ್ರಕಾಶನ, ಬೆಂಗಳೂರು.

೬. ಸಗರ ಕೃಷ್ಣಾಚಾರ್ಯ, **ನನ್ನ ನಾನು ಕಂಡೆ,** ಸಂಪುಟ ೨, ೧೯೯೫, ಸಗರ ಸಾಹಿತ್ಯ ಮಂದಿರ, ಶಹಪುರ.

೭. ಸೂರ್ಯನಾಥ ಕಾಮತ್, **ಸ್ವಾಮಿ ರಮಾನಂದ ತೀರ್ಥ ಹೋರಾಟದ ನೆನಪುಗಳು,** ೧೯೭೭, ಗೀತಾ ಬುಕ್ ಹೌಸ್ ಮೈಸೂರು.

೮. ವಸಂತ ಕುಷ್ಟಗಿ, **ರಾಷ್ಟ್ರವೀರ ಸ್ವಾಮೀ ರಮಾನಂದ ತೀರ್ಥ**, ೧೯೯೮, ಸ್ವಾಮಿ ರಮಾನಂದ ತೀರ್ಥ ಸಾಮಾಜಿಕ ಆರ್ಥಿಕ ಸಂಶೋಧನ ಹಾಗೂ ರಾಷ್ಟ್ರೀಯ ಭಾವೈಕ್ಯತಾ ಸಂಸ್ಥೆ, ಕಲಬುರಗಿ.

**ಪತ್ರಿಕೆ ಹಾಗೂ ಲೇಖನಗಳು**

೧. ಅಜಿತ ಘೋರ್ಪಡೆ, **ಬೆನ್ನ ಹಿಂದಿನ ಬೆಳಕು**, ೨೦-೪-೨೦೦೮, ಸಾಪ್ತಾಹಿಕ ಸೌರಭ ಸಂಯುಕ್ತ ಕರ್ನಾಟಕ.

೨. ಅಮರೇಶ ಎನ್. **ಶಾಂತರಸ ಎಂಬ ಬೆನ್ನ ಹಿಂದಿನ ಬೆಳಕು**, ಕನ್ನಡ ಟೈಮ್ಸ ೩೦-೪-೨೦೦೮.

೩. ಏ ಮಮತಾ, **ಕುದಿಯುವ ಊರಿನ ಶಾಂತರಸ**, ೨೦-೦೪-೨೦೦೮, ಹೊಸದಿಗಂತ. ಸಾಪ್ತಾಹಿಕ ಸಿರಿ.

೪. **ಪ್ರತ್ಯೇಕ ರಾಜ್ಯದ ಕೂಗಿಗೆ ಹೈ.ಕ ಸಾಹಿತ್ಯ ಸಮ್ಮೇಳನ ವಿರೋಧ** ಸಂಯುಕ್ತ ಕರ್ನಾಟಕ ೨-೧೨-೨೦೦೨.

೫. **ರಾಯಚೂರವಾಣಿ**, ೧-೧೨-೨೦೦೨.

೬. **ಕನ್ನಡ ಉಳಿವಿಗೆ ಹೈ-ಕ ಕಾಣಿಕೆ ಅನನ್ಯ : ಶಾಂತರಸ**, ಪ್ರಜಾವಾಣಿ ೧-೧೨-೨೦೦೨

೭. **ಉರಿವ ನಾಡಿನ ಬಂಡಾಯಗಾರ ಶಾಂತರಸ**, ಪ್ರಜಾವಾಣಿ, ೧೫-೦೪-೨೦೦೮

೮. ಪೂಜಾರ ವ್ಹಿ. ಜಿ., **ಕನ್ನಡ ವ್ಯಾಕರಣ ಮತ್ತು ಭಾಷೆ, ಕನ್ನಡದ ಪ್ರಾದೇಶಿಕ ಉಪಭಾಷೆಗಳು**, ೨೦೦೮ ಚೇತನ ಪ್ರಕಾಶನ ಗುಲಬರ್ಗಾ.

೯. ಶ್ಯಾಮಸುಂದರ ಬಿದರಕುಂದಿ, **ನುಡಿರೂಪ ಶಿಲ್ಪಿ ಶಾಂತರಸ**, ೪-೫-೨೦೦೮ ಕರ್ಮವೀರ.

೧೦. ಖಾಜಿ ಅರ್ಷಿದ್ ಅಲಿ, **ಹೈದರಾಬಾದ್ ಕರ್ನಾಟಕಕ್ಕೆ ಅನ್ಯಾಯ ಯಾರು ಹೊಣೆ?** ೧೦-೧೨-೨೦೦೯ ಪ್ರಜಾವಾಣಿ

೧೧. **ಶೋಷಣೆಯೇ ಪ್ರತ್ಯೇಕತೆಗೆ ಮೂಲ: ಶಾಂತರಸ** ಸಂಯುಕ್ತ ಕರ್ನಾಟಕ ೧-೧೨-೨೦೦೨

೧೨. ಗುರುರಾಜ ಕುಲಕರ್ಣಿ, ಸುದ್ದಿಮೂಲ, **ಈಗಲಾದರೂ ಎಚ್ಚತ್ತು ಹೋರಾಟಕ್ಕೆ ನಿಲ್ಲದಿದ್ದರೆ ಹೈ-ಕ ಪ್ರದೇಶ ಮತ್ತಷ್ಟು ಅವನತಿ ಶಾಂತರಸ ಎಚ್ಚರಿಕೆ**, ೧-೧೨-೨೦೦೨ ರಾಯಚೂರು

೧೩. ಬಸವರಾಜ ಮಲಶೆಟ್ಟಿ, **ಸ್ವರವಚನ ಸಾಹಿತ್ಯ : ಒಂದು ಮರು ವಿಚಾರ**, ೨೦೦೮,

೧೪. ಬಸವರಾಜ ಮಲಶೆಟ್ಟಿ **ಆಯ್ದ ಲೇಖನಗಳು**, ಸ್ನೇಹಾ ಪ್ರಿಂಟರ್ಸ್, ಬೆಂಗಳೂರು.

೧೫. ಮಲ್ಲೇಪುರಂ ಜಿ. ವೆಂಕಟೇಶ. **ಶಂಬಾ ಜೋಶಿಯವರ ಆಯ್ದ ಲೇಖನಗಳು, ಹಿಂದೂ ಮುಸಲ್ಮಾನರ ತೊಡಕು**, ೧೯೯೭, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.

೧೬. ವೀರೇಶ ಬಡಿಗೇರ, **ತತ್ವಪದಕಾರರಲ್ಲಿ ವಿದ್ಯೆಯ ಸಂಕಥನ**, ರಾಮಕೃಷ್ಣ ಜಿ(ಸಂ), **ಹೊಸತು**, ಮಾರ್ಚ್ ೨೦೦೯, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೭. ದಸ್ತಗೀರಸಾಬ್ ದಿನ್ನಿ, **ಜಾಗತಿಕ ಹಳ್ಳಿಯಲ್ಲಿ ಲೋಹಿಯಾ ಈ ಹೊತ್ತು**, ೨೨-೦೩-೨೦೦೯ ರಾಯಚೂರವಾಣಿ, ಸಾಪ್ತಾಹಿಕ ಸಂಪದ.

**ಸ್ಮರಣ ಸಂಚಿಕೆಗಳು**

೧. ನೀಲಮ್ಮ ಕತ್ನಳ್ಳಿ, ಭರಮಶೆಟ್ಟಿ ಬಿ. ಎಸ್. (ಸಂ), **ಕಲ್ಲರಳಿ ಹೂವಾಗಿ,** ಸ್ವಾಗತ ಸಮೀತಿ, ಕಲಬುರ್ಗಿ ಜಿಲ್ಲಾ ೬ನೇ ಕನ್ನಡ ಸಾಹಿತ್ಯ ಸಮ್ಮೇಳನ ಶಹಬಾದ.

೨. **ಗುರುಕುಲಾಮೃತ,** ೭-೪-೨೦೦೦, ಅಮೃತಮಹೋತ್ಸವ ಮತ್ತು ಸಂಸ್ಥಾಪಕರ ಜನ್ಮ ಶತಮಾನೋತ್ಸವ ಸಮಾರಂಭದ ಸ್ಮರಣ ಸಂಚಿಕೆ. ವಿದ್ಯಾನಂದ ಗುರುಕುಲ ವಿಶ್ವಸ್ತ ಮಂಡಳಿ ಕುಕನೂರು.

೩. ವಸಂತ ಕುಷ್ಟಗಿ, **ನೂತನ ವಿದ್ಯಾಲಯ ಸಂಸ್ಥೆಯ ಶತಮಾನದ ಸಂಭ್ರಮ,** ೨೦೧೦ ನೂತನ ವಿದ್ಯಾಲಯ ಸಂಸ್ಥೆಯ ಶತಮಾನೋತ್ಸವ ಸಮೀತಿ, ಗುಲಬರ್ಗಾ.